## ವಿನಂತಿ

ಕಾರಣಾಂತರದಿಂದ ಜೂನ್ 1986 ಸಂಚಿಕೆಯ ಮುದ್ರಣಕಾರ್ಯದಲ್ಲಿ ವಿಳಂಬವಾದ್ದರಿಂದ ಜೂನ್ ಮತ್ತು ಡಿಸೆಂಬರ್ ಸಂಚಿಕೆಗಳನ್ನು ಕೂಡುಸಂಚಿಕೆಯಾಗಿ ಪ್ರಕಟಿಸಲಾಗಿದೆ.

—ವ್ಯವಸ್ಥಾಪಕ ಸಂಪಾದಕ

## ಸದಸ್ಯರಲ್ಲಿ ವಿನಂತಿ

1987ರ ಜನವರಿಯಿಂದ ಮೊದಲುಗೊಂಡು ಅಂಚೆಯ ದರಗಳು ಏರಿರುವುದರಿಂದ, ಉಪನ್ಯಾಸ ಇತ್ಯಾದಿ ಕಾರ್ಯಕ್ರಮಗಳ ಆಹ್ವಾನ ಪತ್ರಿಕೆಗಳನ್ನೂ ಚಂದಾ ಬಾಕಿ ಬಗ್ಗೆ ನೆನಪಿನೋಲೆಗಳನ್ನೂ ಪರಸ್ಥಳದ ಸದಸ್ಯರಿಗೆ ಕಳಿಸುವುದಕ್ಕೆ ಸಾಧ್ಯವಾಗುವುದಿಲ್ಲ ಎಂದು ಅನಿವಾರ್ಯವಾಗಿ ತಿಳಿಸಬೇಕಾಗಿದೆ.

ಕಾರ್ಯಕ್ರಮಗಳ ವಿಷಯವನ್ನು ಪ್ರಮುಖ ದಿನಪತ್ರಿಕೆಗಳಲ್ಲಿ ಪ್ರಕಟಿಸಲಾಗುವುದು.

ಮಾನ್ಯ ಸದಸ್ಯರು ಸಹಕರಿಸಬೇಕಾಗಿ ವಿನಂತಿ.

—ಗೌರವ ಕಾರ್ಯದರ್ಶಿ

# LOCHANA

(A Half-yearly Journal Published by B. M. Sri· Memorial Foundation, 54, 3rd Cross, Gavipuram Extension, Bangalore-19)

*Chief Editor:* Prof. G. Venkatasubbiah
*Executive Editor:* Prof. M. V. Seetha Ramiah
*Editor:* T. R. Mahadeviah

*Vol. 4* *June—December 1986* *No. 1 - 2*

## CONTENTS

---

ಸದಸ್ಯರಲ್ಲಿ ವಿತರಣೆಗೆ ಮಾತ್ರ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

[ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೫೪, ೩ನೇ ಅಡ್ಡಬೀದಿ, ಗವಿಪುರಂ ವಿಸ್ತರಣ, ಬೆಂ-೧೯]

ಪ್ರಧಾನ ಸಂಪಾದಕ : ಪ್ರೊ|| ಜಿ. ವೆಂಕಟಸುಬ್ಬಯ್ಯ

ವ್ಯವಸ್ಥಾಪಕ ಸಂಪಾದಕ : ಪ್ರೊ|| ಎಂ. ವಿ. ಸೀತಾರಾಮಯ್ಯ

ಸಂಪಾದಕ : ಟಿ. ಆರ್. ಮಹಾದೇವಯ್ಯ

ಸಂಪುಟ ೪ ಜೂನ್-ಡಿಸೆಂಬರ್ ೧೯೮೬ ಸಂಚಿಕೆ ೧-೨

## ಪರಿವಿಡಿ

# ಕವಿಪ್ರಶಂಸೆ*

ಕಂ॥ ರವಿಯರಿಯದ ಮರ್ಮಗಳಂ ।
ಕವಿಯರಿದಪನೆಂದು ಲೋಕವೊರೆವುದು ಪುಸಿಯೇಂ ॥
ರವಿ ಬೆಳಗೆ ಬಾಹ್ಯ ಲೋಕವ ।
ಕವಿ ಬೆಳಗಿಪನಲ್ತೆ ಜನರ ಹೃದಯಾನ್ತರಮಂ ॥ ೧

ಋಷಿಬಲವಿಲ್ಲದವಂ ಕವಿ
ವೃಷನೆನಿಪುದಶಕ್ಯಮೆಂದು ಬಗೆವುದು ಸಾಜಂ ॥
ಋಷಿವಶನಹ ಚಿನ್ಮೂರ್ತಿಯು ।
ಸುಷಮಾ ಪ್ರತಿಫಲಮೆ ಕಾವ್ಯವನಿತಾ ವಿಭವಂ ॥ ೨

ಮಂ॥ ಪದಬಾಹುಳ್ಯದಿಮಪ್ರಸಿದ್ಧ ಪದವೈಚಿತ್ರ್ಯಳಿಯಿಂ ಶ್ಲೇಷೆಯಿಂ ।
ಪದುಳಂಗೊಳ್ಳಳದೆಂತು ಕಾವ್ಯವಧು ತಾಂ ಕಾಠಿನ್ಯಮಂ ತೋರಳೇಂ ॥
ಹೃದಯಾಬ್ಜಂ ರಸಪೂರ್ಣಮಾಗೆ ಕವಿಯೊಳ್ ಪ್ರಜ್ಞಾರುಣಂದೋರೆ ಮೇಣ್ ।
ಮೃದುವಾಗ್ವೈಭವಮುಣ್ಮಲಾಗ ಕವಿತಾಶ್ರೀ ರೂಪಮುಜ್ಜೃಂಭಿಕುಂ ॥ ೩

ಭಾ॥ ಪರಮ ಪುರುಷನ ಮಹಿಮೆಯಿಂದವ-।
ತರಿಪ ಕವಿತಾಕನ್ಯೆಯಂ ಖಲ ।
ನರನಿಗಿತ್ತವನಿಂದ ಶುಲ್ಕವ ಗಳಿಪವಂ ಕವಿಯೇಂ ॥
ಕರುಣೆಯಿಂದೀ ವಿಶ್ವವೆಲ್ಲವ ।
ನಿರುಕಿಸುತಲದ ಬಣ್ಣಿಸುತ್ತಲಿ ।
ಪರಮತತ್ತ್ವವನೊರೆವ ಗುರು ತಾನಲ್ತೆ ಕವಿವರ್ಯಂ ॥ ೪

ಜೀವಿಕೋಟಿಯೊಳಳ್ತಿಯಿಂ ಸಮ ।
ಭಾವದಿಂದಲಿ ವರ್ತಿಸುತ ಪರ ।
ದೇವಲೀಲೆಯೆ ಲೌಕಿಕವ್ಯಾಪಾರವೆಂದರಿದು ॥
ಸಾವಧಾನದಿ ವರ್ಣಿಸುತಲದ ।
ತೀವಿದಾನಂದದಲಿ ತನ್ಮೊಳು ।
ಭಾವಿಪಂ ತಾನಲ್ತೆ ಕವಿ ಬೇರೊಂದು ಲೋಕವನು ॥ ೫

ದೋಧಕ॥ ತಾನೆ ಜಗಂಗಳ ಕಲ್ಪಿಸುತಂ ಸ್ವಾ-।
ಧೀನತೆಯೊಳ್ಮುದವೊಂದುತಲೆಂದುಂ ॥
ಜ್ಞಾನಧನಂ ಕವಿ ಧೀರನುದಾರಂ ।
ಮಾನಸ ರಾಜ್ಯಕೆ ರಾಜನೆನಿಪ್ಪಂ ॥ ೬

—ಡಿ. ವಿ. ಗುಂಡಪ್ಪ

---

* ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆ, ಸಂಪುಟ ೫, ಸಂಚಿಕೆ ೧ರಿಂದ ಉದ್ಧೃತ.

# ಕವಿ–ಕಲಾಮಹಿಮೆ

ಜಗದ ಬಂದೀಗೃಹದಿ ಬಿಗಿಯುತಿರೆ ವಿಧಿ ನಿನ್ನ ।
ನಿಗಮ ಸತ್ಕಲೆ ಕಾವ್ಯಗಳ ಗವಾಕ್ಷಗಳಿಂ ॥
ಗಗನದೊಳನಂತದರ್ಶನದೆ ಮುಕ್ತಿಯನೊಂದು ।
ನಗು ನಗಿಸಿ ಲೋಕವನು—ಮಂಕುತಿಮ್ಮ ॥

ವಿವಿಧ ರಸಗಳ ಭಟ್ಟಿ, ಸೌಂದರ್ಯ ಕಾಮೇಷ್ಟಿ ।
ಕವಿಜಗತ್ಸೃಷ್ಟಿಯದು, ಕಲೆಗನಾಕೃಷ್ಟಿ ॥
ಗವಿಯೊಳಗಣ ಪ್ರಕೃತಿಯಂತ್ರ ವೈಚಿತ್ರ್ಯವದು ।
ತಪಸೊಂದೆ ಪಥವದಕೆ—ಮಂಕುತಿಮ್ಮ ॥

ಕವಿ, ಚಿತ್ರಕೋವಿದನು, ಪರತತ್ತ್ವಶೋಧಕನು ।
ವಿವಿಧ ವಾದನ ಗೀತ ನೃತ್ಯ ಕುಶಲಿಗಳು ॥
ನವನವತೆಯಂ ಮನಸಿಗೀವೆಲ್ಲ ಕಲೆಗಾರ-।
ರವರಿಂದೆ ಸುಂದರತೆ–ಮಂಕುತಿಮ್ಮ ॥

ಪಾರಿಜಾತವ ಕಂಡು ನಿಡುಸುಯ್ದು, ಪದಗಳಿಂ ।
ಶೌರಿ ಕಥೆಯನು ಹೆಣೆದು ತೃಪ್ತನಹನು ಕವಿ ॥
ಊರಿನುದ್ಯಾನಕದ ತರಿಸಿ ಬೆಳಸುವ ಕಾರ್ಯ-।
ಧೀರನಲ ರಾಜ್ಯಕನು—ಮಂಕುತಿಮ್ಮ ॥

ಹೃದಯಕೊಪ್ಪುವ ಭಾಷೆ ರಾಗಲಯವಿಸ್ತಾರ ।
ಪದ ಚರ್ಚೆ ಮತಿ ವಿಚಾರಕೆ ತಕ್ಕ ಭಾಷೆ ॥
ಹೃದಯ ಮತಿ ಸತಿಪತಿಗಳಂತಿರಲು ಯುಕ್ತವದು ।
ಬದುಕುರಸತರ್ಕೈಕ್ಯ—ಮಂಕುತಿಮ್ಮ ॥

---

[ಮಾರ್ಚಿ 1987–ಮಾರ್ಚಿ 1988, ಡಿ.ವಿ.ಜಿ. ಜನ್ಮಶತಮಾನೋತ್ಸವ ವರ್ಷ. ಅದನ್ನು ನೆನಪಿಸುವ ಸಲುವಾಗಿ ಕವಿ–ಕಾವ್ಯ ವಿಚಾರವಾಗಿ ಅವರಿಂದ ರಚಿತವಾದ ಕೆಲವು ಪದ್ಯಗಳನ್ನು ಇಲ್ಲಿ ಎತ್ತಿಕೊಟ್ಟಿದೆ. ಪೂಜ್ಯರ ಪವಿತ್ರ ಸಂಸ್ಮರಣೆಗೆ 'ಲೋಚನ'ದ ಮುಂಗಾಣಿಕೆ.]

# ಮನು : ವೈವಸ್ವತ, ನರ : ಸ್ವಾಯಂಭುವ

—ಮಲ್ಲೇಪುರಂ ಜಿ. ವೆಂಕಟೇಶ

## ಮುನ್ನುಡಿ

ವೈವಸ್ವತಮನು ಮತ್ತು ನರಸ್ವಾಯಂಭುವ ವಿಚಾರಗಳನ್ನು ಈ ಮುಂದಿನ ಪುಟಗಳಲ್ಲಿ ಪ್ರಸ್ತಾಪಿಸಿದ್ದೇನೆ. ಅವುಗಳ ಆಕೃತಿ ಮತ್ತು ಆಶಯಗಳ ಬಗೆಗೆ ನನ್ನ ಅರಿಕೆಗೆ ಬಂದಿರುವುದನ್ನೂ ತಿಳಿಸಿದ್ದೇನೆ. ನಮ್ಮ ಆಚಾರ-ವಿಚಾರಗಳ ಕೆಲವು ಮೂಲಭೂತ ವಿಚಾರಗಳ ಗ್ರಹಿಕೆಯನ್ನು ಸಮರ್ಪಕವಾಗಿ ತಿಳಿಯದೆ ಹೋದರೆ ಮುಂದಿನ ಪುಟದ ಅನೇಕ ವಿಚಾರಗಳ ತಲೆ-ಬುಡ ಅರ್ಥವಾಗದೆ ಹೋಗಬಹುದು.

ನಮ್ಮ ಅನೇಕ ಆಚಾರ-ಸಂಪ್ರದಾಯಗಳು ಹೇಗೆ ಹುಟ್ಟಿಕೊಂಡವು ? ಇವು ಯಾವ ಸಂದರ್ಭದಲ್ಲಿ ತಲೆದೋರಿದುವು ? ಎಂಬ ಪ್ರಶ್ನೆ. ಈ ಪ್ರಶ್ನೆಗೆ ಸರ್ವ ಸಮರ್ಪಕವಾಗಿ ಉತ್ತರ ಹೇಳುವುದು ಕಷ್ಟಸಾಧ್ಯ. ಆದರೆ, ಈ ಆಚಾರಗಳಲ್ಲಿ ಸಮಷ್ಟಿಪ್ರಜ್ಞೆಯ ಆಚಾರಗಳಿಗೆ ತನ್ನದೇ ಆದ ಗತಿಶೀಲವಿದೆ; ವ್ಯಷ್ಟಿಪ್ರಜ್ಞೆಯ, ವೈಯಕ್ತಿಕ ಆಚಾರಕ್ಕೆ ಸಮಾಜದಲ್ಲಿ ಸ್ಥಾನವಿರಕೂಡದು. ಇಂದಿನ ಬಹುಮಟ್ಟಿನ ಅನೇಕ ಆಚಾರ, ಆಚರಣೆಗಳು ವೈಯಕ್ತಿಕ ಹಂತದವುಗಳೇ ಆಗಿವೆ. ಈ ವೈಯಕ್ತಿಕ ಹಂತದ ಆಚಾರ-ವಿಚಾರಗಳೇ ಸಾರ್ವಜನಿಕ ಆಚಾರ-ವಿಚಾರಗಳೆಂಬ ಭಾವ ಬಲಿಯಿತು. ಅದು ನಮ್ಮನ್ನು ಸೆಳೆಯಿತು. ಇಂದು ವೈಯಕ್ತಿಕ ಆಚಾರ-ವಿಚಾರಗಳಿಗೆ ಎಲ್ಲೆಡೆಯೂ ಸ್ಥಾನವಿರುವುದು ಸೂರ್ಯಸ್ಪಷ್ಟ. ನಮ್ಮ ಮನೆಗಳಲ್ಲಿ ಮಾಡಿಕೊಳ್ಳುವ ಗಣೇಶಹಬ್ಬ, ಸತ್ಯನಾರಾಯಣವ್ರತ, ಇತ್ಯಾದಿಗಳು ಕ್ರಿಯಾವಿಹೀನವೇ? ಇವನ್ನು ಆಚರಿಸಬೇಕೇ ? ಎಂಬ ಪ್ರಶ್ನೆ ಇದರೊಂದಿಗೆ ತಳಕಿಕೊಂಡು ಬರುತ್ತಿದೆ. ಈ ಆಚಾರ ಸಂಪ್ರದಾಯಗಳು ಹುಟ್ಟಿಕೊಂಡಿರುವುದೆ ಇತಿಹಾಸದ ಗರ್ಭದಲ್ಲಿ ತಾನೆ. ಆಯಾಯ ಕೆಲವು ಸಂಪ್ರದಾಯ ಮತ್ತು ಕೆಲವು ಮತೀಯ ಆಚಾರಗಳು ಕೆಲವು ಕಾಲಘಟ್ಟದಲ್ಲಿ ಜಾತಿಸಂಕರ ಆಗದೆ ಇರಲಿ ಎಂತಲೋ, (ಭಗವದ್ಗೀತೆಯ 'ಜಾಯತೇ ವರ್ಣಸಂಕರಃ' ಎಂಬ ಮಾತನ್ನು ನೆನಪಿಸಿಕೊಳ್ಳಿ) ತಮ್ಮ ಮತ ಶುದ್ಧವಾಗಿ ಉಳಿದುಕೊಂಡು ಬರಲಿ ಎಂತಲೋ, ಕೆಲವು ಆಚಾರಗಳನ್ನು ಸೃಷ್ಟಿಸಿಕೊಂಡರು. ಉದಾಹರಣೆಗೆ : ಆಯಾಯ ಮತೀಯರು, ಅವರು ಯಾರೇ ಆಗಿರಲಿ: ಹಣೆಯ ಮೇಲೆ, ಮೈಮೇಲೆ ಮುದ್ರಾಧಾರಣ ಮಾಡಿಕೊಳ್ಳುವುದರಲ್ಲಿ ಇದನ್ನು ಗಮನಿಸಬಹುದು. ಇದೆಲ್ಲ ಮನುಷ್ಯ ಇತಿಹಾಸಪ್ರಜ್ಞೆಯನ್ನು ಕಳೆದುಕೊಂಡು ಪೌರಾಣಿಕ ಒಸ್ಸೆಲೆಗೆ ಬಂದಾಗ ಇದು ಹೆಚ್ಚಾಗಿ ನಡೆದಿದೆ. ಭಾಗವತ, ಭಾರತ ಇತ್ಯಾದಿ ಗ್ರಂಥಗಳು ಈ ಸರ್ವಶ್ರೇಷ್ಠತೆಯನ್ನು ಎತ್ತಿಹಿಡಿದ ನಾನಾ ಉಲ್ಲೇಖಗಳಿವೆ. ಆದ್ದರಿಂದ ಎಂದೋ ಬಂದ ಆಚರಣೆ ಇಂದು, ಇಂದಿನ ಸಮಾಜ ಹಾಗೂ ವೈಚಾರಿಕ

ಜೀವನ ವಿಧಾನಕ್ಕೆ ಅಸಮರ್ಪಕವೆಂದು ಅನಿಸಿದರೆ ಬಿಡುವುದರಲ್ಲಿ ತಪ್ಪೇನು? ಆದರೆ, ಎಲ್ಲರಿಗೂ ಒಪ್ಪಿತವಾದ, ಸಮಂಜಸವಾದ, ಹಾರ್ದಿಕವಾದ, ಆಚರಣೆಗಳನ್ನು ಇಟ್ಟುಕೊಳ್ಳೋಣ. ಆದರೆ, ಈ ಆಚರಣೆ-ಆಚಾರಗಳು ವೈಯಕ್ತಿಕ ಸ್ವರೂಪದವುಗಳು ಮಾತ್ರ ಆಗಿರಕೂಡದು. ನಮ್ಮ ಆಚಾರ-ವಿಚಾರಗಳಲ್ಲಿ ಸರಳತೆ-ಸಾಧಾರಣತೆ-ಶುಭ್ರತೆ-ಯೋಗ್ಯತೆ ಹೆಚ್ಚು ಹೆಚ್ಚಾಗಿ ಪ್ರಕಾಶಿಸಬೇಕು. ಉಳಿದ ಕಸವನ್ನೇ ರಸವೆಂದು ಭ್ರಮಿಸುವುದರಲ್ಲಿ ಯಾವ ಅರ್ಥ ಇದೆಯೆಂದು ಯಾವನಿಗೇ ಪ್ರಾಮಾಣಿಕವಾಗಿ ಅನಿಸದೆ ಇರದು.

ಪೂಜೆ-ವ್ರತಗಳು ಇಂದು ಅನಿವಾರ್ಯವೇ ಎಂಬ ಪ್ರಶ್ನೆ ಮೇಲಿನ ಉತ್ತರಕ್ಕೆ ಬದಲಿಯಾಗಿ ಕಾಣಿಸಿಕೊಂಡರೆ ನನ್ನ ಮನಸ್ಸಿಗೆ ಹೊಳೆಯುವುದಿಷ್ಟು. ನನಗೆ ಇಂದು ನಾವು ಮಾಡುವ ಪೂಜೆ ಅರ್ಥಹೀನವಾಗಿ ಕಂಡಿದೆ. ದೇವರನ್ನು ಮನುಷ್ಯ ತನ್ನ ಭ್ರಮೆಯಲ್ಲಿ ಸೃಷ್ಟಿಸಿಕೊಂಡ. ಪೂಜೆ ಮತ್ತು ದೇವರು-ನಮ್ಮ ಬದುಕನ್ನು ನಿಯಂತ್ರಿಸಲು ಮಾಡಿಕೊಂಡ ಕಾನೂನು, ಅಡ್ಡಿ ಎಂದು ಬೇಕಾದರೂ ತಿಳಿಯಬಹುದು. ದೇವರು ಎನ್ನುವುದಕ್ಕೆ ಮೌಢ್ಯದಲ್ಲಿ ಸ್ಥಾನವಿದೆಯೇ ಹೊರತು, ಐತಿಹಾಸಿಕವಾದ ನೆಲೆಯಲ್ಲಿ ಸ್ಥಾನ ಇಲ್ಲವೇ ಇಲ್ಲ. ಇಷ್ಟು ರುಜುವಾತು ಆದಮೇಲೆ ಮರಳಿ ದೇವರು—ಪೂಜೆಗಳಿಗೆ ಹೋಗುವುದರಲ್ಲಿ ಅರ್ಥ ಏನಿದೆ? ದೇವರು ಅನ್ನುವುದು ನೀಟ್ಸೆಯ ಮಾತಿನಲ್ಲಿ, 'ದೇವರು ಸತ್ತ'. ದೇವರ ಕಲ್ಪನೆ ಇರುವವರೆಗೆ ಮನುಷ್ಯನಿಗೆ ಸ್ವತಂತ್ರತೆ ಇಲ್ಲ, ಅವನಿಗೆ ಸ್ಥಾನವೇ ಇಲ್ಲ ಎಂದು ಸಾರಿದ. ನಿಜಕ್ಕೂ ಇತಿಹಾಸದ ದೃಷ್ಟಿಯಿಂದ ನೋಡಿದರೆ ಇದು ಕಣ್ಣಿಗೆ ಒಡೆದು ಕಾಣುವ ಸಂಗತಿ. ದೇವರೆಂಬ ಕಲ್ಪನೆ ವಾಕ್ಯಾತೀತ, ಅನುಭವಾತೀತ ಆಗುವಾಗ ಮಾತು—ಅನುಭವಗಳ ಆಚೆಗೆ ಇರುವುದು ಏನು? Void-ಶೂನ್ಯ ತಾನೇ? ಪೂಜೆ-ದೇವರು ಒಂದು ಯಾಂತ್ರಿಕವಾದ ಮಾನಸಿಕಕ್ರಿಯೆಯಾಗಿದೆ. ಈಗ ಯಾವುದೇ ದೇವಸ್ಥಾನಕ್ಕೆ ಹೋದರೂ ಆ ದೇವಸ್ಥಾನದ ಪೂಜಾರಿಗೆ ತಾನು ಪೂಜೆ ಏಕೆ ಮಾಡುತ್ತಿದ್ದೇನೆಂಬ ಮೂಲಭೂತ ಪ್ರಶ್ನೆಗೆ ಉತ್ತರವೇ ಇರುವುದಿಲ್ಲ. ಅದು ಅವನನ್ನು ಪ್ರಶ್ನಿಸಿಯೇ ಇರುವುದಿಲ್ಲ. ಆ ವಿಚಾರ ಕುರಿತು ಮೂಲಭೂತವಾಗಿ ಯೋಚಿಸಿಯೇ ಇರುವುದಿಲ್ಲ. ಪೂಜೆ ಯಾಂತ್ರಿಕ ಆಚಾರವಾಗಿದೆ ಎಂದೆ. ಪಕ್ಕದ ಮನೆಯ ಬ್ರಾಹ್ಮಣನೊಬ್ಬ ರಾಘವೇಂದ್ರನ ಪೂಜೆ ಮಾಡುತ್ತಿದ್ದಾಗ, ಅವನ ಪಕ್ಕದ ಮನೆಯವನೋ ಸಮೀಪದ ಮನೆಯ cultural ಶೂದ್ರ ಸುಮ್ಮನೆ ಇರಲಾರ. ಅವರಿಗಿಂತ ತಾನೇನು ಕಡಮೆ ಎಂದು ಬ್ರಾಹ್ಮಣನಿಗಿಂತ ಅತಿಶಯವಾಗಿ ಪೂಜೆ-ಪುನಸ್ಕಾರ ಮಾಡುತ್ತಾನೆ. ಪ್ರತ್ಯಕ್ಷವಾಗಿ ನಾವು ಇಂದು ಅದನ್ನು ಕಾಣುತ್ತಿದ್ದೇವೆ. ನಮ್ಮ ಯುವಪೀಳಿಗೆಯುವರನ್ನು (ನಮೋ ಅರ್ಭಕೇಭ್ಯಃ) ಈ ಭಯದ ನೆರಳಿನಿಂದ ಹೊರಕ್ಕೆ ತರಲೇಬೇಕಾಗಿದೆ.

ಪೂಜೆ ಮತ್ತು ವ್ರತಗಳನ್ನು ನಾವು ನಿರಾಕರಿಸುವಾಗ ಅವು ನಿಜವಾದ ಅರ್ಥ

ದಲ್ಲಿ ಮಾನವನ ಬಾಳುವೆಗೆ ನೆರವಾಗಿರುವುದಾದರೆ ಸರಿ. ಇಲ್ಲದಿದ್ದರೆ ಅವುಗಳನ್ನು ಏಕೆ ನಿರಾಕರಿಸಕೂಡದು? ಯಾವುದೇ ವ್ರತವಾಗಲಿ, ಗಣೇಶ-ಗೌರಿಹಬ್ಬಗಳೇ ಆಗಲಿ, ಅವುಗಳ ನಿಜವಾದ ಆಶಯವೇನು? ಯಾವ ಐತಿಹಾಸಿಕ ಸಂದರ್ಭದಲ್ಲಿ ಈ ಹಬ್ಬಗಳ ಅಥವಾ ದೇವತಾಮೂರ್ತಿಗಳ ಆರಾಧನೆ ಶುರುವಾಯಿತು? ಅಂದರೆ, ದೇವತಾಮೂರ್ತಿಗಳ ಹಿಂದಿರುವ ಚಾರಿತ್ರಿಕ ಸತ್ಯವನ್ನು ತಿಳಿಯಬೇಕಾದ ಅಗತ್ಯ ಇದೆ. ಒಳಿತು ಮತ್ತು ಕೆಡುಕು (ವಿಘ್ನಹರ್ತ ಮತ್ತು ವಿಘ್ನಕರ್ತ) ಮಾಡುವ ಮನುಷ್ಯನ ಸಾಂಕೇತಿಕ ಆಶಯವಾಗಿ ಇದು ಯಾಕೆ ರೂಪುಗೊಂಡಿರಬಾರದು? ಇದು ಒಂದು ಕಾಲದ (ಕಾಲದ ನಿರ್ಣಯ ಖಚಿತವಾಗಿ ಅಸಾಧ್ಯ) ಸಾಮಾಜಿಕ ಆಚಾರದ ಪ್ರತಿರೂಪ ಆಗಿರಬೇಕೆಂದು ಹಲವಾರು ವಿದ್ವಾಂಸರು ಬಗೆಬಗೆಯಾಗಿ ವಿವರಿಸಿದ್ದಾರೆ. ವೈಚಾರಿಕವಾದ ಸ್ವತಂತ್ರ ರೀತಿಯಲ್ಲೇ ಹೇಳುವುದಾದರೆ ಇಂದಿನ ದಿನದಲ್ಲಿ ಅಥವಾ ಮುಂದೆ ಬರುವ ದಿನಗಳಲ್ಲಿ ಈ ವ್ರತ-ಹಬ್ಬಗಳು ಬದುಕಿನ ಆವಶ್ಯಕ ಅಂಗವಾಗಿ ಬರುತ್ತವೆಯೋ? ಇಂದೇ ನೋಡಿದರೆ ಮೊದಲಿಗಿಂತಲೂ ಈಗ ಅವುಗಳ ಹಾವಳಿ ನಿಜಕ್ಕೂ ಕಡಮೆಯಾಗಿದೆ. ಈ ಪೂಜೆ-ವ್ರತಗಳ ಬದಲು, ಸಾಮಾಜಿಕ-ಸಾಂಸ್ಕೃತಿಕ ಮನುಷ್ಯ-ಮನುಷ್ಯರ ಸಮಾನತೆಗಾಗಿ ದುಡಿಯುವ ಶ್ರದ್ಧೆ ತಲೆದೋರಬೇಕಾಗಿದೆ. ಈ ಆದರಣೆ-ಆಚರಣೆಯೇ ನಿಜವಾದ ಪೂಜೆ–ವ್ರತ ಎಂಬು ದನ್ನು ತಿಳಿಯಬೇಕಾದದ್ದು ಪ್ರಸ್ತುತ ಸಂದರ್ಭದ ಸಂಗತಿಯಾಗಿದೆ.

ನಾನು ಮೇಲೆ ಆಚಾರದ ಬಗೆಗೆ ಹೇಳುತ್ತಿದ್ದೆ. ಈಗ ಬ್ರಾಹ್ಮಣರು ಧರಿಸುವ ಯಜ್ಞೋಪವೀತದ ಬಗೆಗೆ ಎಷ್ಟು ಜನಕ್ಕೆ ಸರಿಯಾದ ತಿಳಿವಳಿಕೆ ಇದೆ? ಶೂದ್ರರನ್ನು ಬಿಟ್ಟು ಬಹುತೇಕ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವರ್ಗಗಳಲ್ಲಿ 'ಜನಿವಾರ' ಹಾಕಿ ಕೊಳ್ಳುವ ಬಗೆಗೆ ತಿಳಿವಳಿಕೆ ಇಲ್ಲ. ರೂಢಿಯಂತೆ ಧರಿಸುವ ನಡವಳಿಕೆಗೆ ಅವರು ಪಕ್ಕಾಗಿ ದ್ದಾರೆ. ಯಜ್ಞೋಪವೀತ ಇದೆಯಲ್ಲ, ಇದು ಋಗ್ವೇದಕಾಲದ ಹಾಗೂ ನಂತರದ ಪ್ರಾಚೀನ ಶ್ರುತಿ-ಸ್ಮೃತಿಗಳಲ್ಲಿ ಈ ಆಚಾರ ಇರುವಂತೆ ಕಾಣುವುದಿಲ್ಲ. ಮನು ಸ್ಮೃತಿಯ ಕಾಲಕ್ಕೆ 'ಬ್ರಾಹ್ಮಣ' ಜಾತಿವಾಚಕವಾಗಿದ್ದು ಅವನ ಪ್ರತ್ಯೇಕತೆಗಾಗಿ ಧರಿಸಬೇಕಾದ ಆವಶ್ಯಕತೆ ಉಂಟಾಯಿತು. ಕೂತುಕೊಳ್ಳುವ ದರ್ಭಾಸನವೇ, ಆ ದರ್ಭೆಯ ಹುಲ್ಲೇ, ಅದನ್ನೇ ಹುರಿಮಾಡಿಕೊಂಡು ಧರಿಸತೊಡಗಿದ. ಅದೇ ಮುಂದೆ ಅವನ ಪ್ರತ್ಯೇಕತೆಗೂ ಸಾಧನವಾಯಿತು. ಬೆಳಗ್ಗೆಯಿಂದ ರಾತ್ರಿ ಮಲಗುವವರೆಗೂ ಆ ಜನಿವಾರಕ್ಕೂ ಅವನ ಜೀವಿತಕ್ಕೂ ಸಂಬಂಧ ಉಂಟಾಯಿತು. ಹಾಗೆ ನೋಡುವುದಾದರೆ ಯಜ್ಞೋಪವೀತದ ಧಾರಣೆ ತೀರ ಅರ್ವಾಚೀನ ಆಚರಣೆ. ಜನಿವಾರಕ್ಕೂ ಉಪನಯನಕ್ಕೂ ಸಂಬಂಧ ಇರುವುದನ್ನು ನೆನಪಿಗೆ ತಂದುಕೊಳ್ಳಬಹುದು. 'ಉಪನಯನ' ಮಾಡುವುದರಿಂದಲೇ ಬ್ರಾಹ್ಮಣನೆನಿಸಿ ಕೊಳ್ಳುತ್ತಾನೋ ಎಂಬ ಪ್ರಶ್ನೆ ಮೂಡುತ್ತದೆ. 'ಉಪನಯನ' ಎಂಬುದರ ಶಾಬ್ದಿಕಾರ್ಥ 'ಒಳಗಣ್ಣು' ಎಂದು. 'ಉಪನಯನ' ಬ್ರಹ್ಮೋಪದೇಶ ಬ್ರಾಹ್ಮಣರಿಗೆ

ಮಾತ್ರ. ಪತಂಜಲಿ ಎಂಬ ದೊಡ್ಡ ವ್ಯಾಕರಣಶಾಸ್ತ್ರಜ್ಞ ತನ್ನ 'ಮಹಾಭಾಷ್ಯ'ದಲ್ಲಿ 'ಬ್ರಹ್ಮೇಣ ಅಣತಿ ಇತಿ ಬ್ರಾಹ್ಮಣಃ' (ಬ್ರಹ್ಮವನ್ನು ಅರಿತವನು ಬ್ರಾಹ್ಮಣ) ಎಂದು ಹೇಳುತ್ತಾನೆ. ಹಾಗಾದರೆ, ಬ್ರಹ್ಮಕ್ಕೂ ಬ್ರಾಹ್ಮಣಕ್ಕೂ ಏನು ಸಂಬಂಧ. ಬ್ರಹ್ಮ ಎಂದರೆ ಏನು ? ಪ್ರಜಾಪತಿ. ನಮಗೆ ಗೊತ್ತಿರುವ ಹಾಗೆ 'ಪ್ರಜಾಪತಿಗೆ ಟೊಪ್ಪಿಗೆಯಿಲ್ಲ, ವಾದಿಗೆ ಉತ್ತರವಿಲ್ಲ' ಎಂಬ ಗಾದೆ ಇದೆ. 'ಪ್ರಜಾಪತಿ' ಎಂದರೆ ಜಾನಪದದ ಮೂಲಕ ಅದರ ನಿಶ್ಚಿತ ಆಶಯವು ಹೊರಕ್ಕೆ ಬರುತ್ತಿದೆ. ಬ್ರಹ್ಮ > ಎಂಬುದರ ಅರ್ಥ ವ್ಯುತ್ಪತ್ತಿಶಾಸ್ತ್ರದ ರೀತ್ಯಾ ದೊಡ್ಡದಾಗುತ್ತ ಹೋಗುವುದು. ಪ್ರಜೆಗಳನ್ನು ಸೃಷ್ಟಿಸುವುದು ಯಾವುದು ? ಏಕೆಂದರೆ ಪುರಾಣಗಳ ಪ್ರಕಾರ ಬ್ರಹ್ಮ . ಸೃಷ್ಟಿಕರ್ತ ಆಗಿದ್ದಾನೆ. ಹಾಗಾದರೆ ಬ್ರಾಹ್ಮಣ 'ಉಪನಯನ' ಮಾಡಿಸಿ ಕೊಳ್ಳೋದು : ಮುಸ್ಲಿಮರಲ್ಲಿ ಶಿಶ್ನದ ಮುಂದೊಗಲನ್ನು ತೆಗೆಯುವುದು ಪ್ರಾಥಮಿಕವಾಗಿ ಒಂದೇ ವಿಧದ ಆಶಯವನ್ನು ಹೊತ್ತಿರುವಂತೆ ಕಾಣುತ್ತದೆ. 'ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ' (ಜನ್ಮದಿಂದ ಶೂದ್ರ ನೆನಿಸಿಕೊಳ್ಳುತ್ತಾನೆ ; ಕರ್ಮದಿಂದ ದ್ವಿಜ–'ದ್ವಿ: ಎರಡು ಬಾರಿ, ಜ : ಹುಟ್ಟು'– ಎನಿಸಿಕೊಳ್ಳುತ್ತಾನೆ) ಎಂಬುದು ನನ್ನ ನೆನಪಿಗೆ ಬರುತ್ತಿದೆ. ಬ್ರಹ್ಮೋಪದೇಶ ಮಾಡುವಾಗ ಹೇಳುವ ಮಂತ್ರ ಗಾಯತ್ರೀ ಛಂದಸ್ಸಿನಲ್ಲಿರುವ ಸವಿತೃಮಂತ್ರಃ ಭೂಃ-ನೆಲ, ಭುವಃ-ಅಂತರಿಕ್ಷ, ಸ್ವರ್-ಆಕಾಶ ; ಭೂಃ-ಭುವಃ ನೆಲೆಯಲ್ಲಿರುವ ನರನು-ಮಾನವನು ಆಕಾಶ-ಪ್ರಕಾಶದಲ್ಲಿ ತೇಲಬೇಕು ಎಂಬ ಸದಾಶಯ. ಮಾನವನ ಬದುಕು ನಿರಂತರವಾಗಿ ಸ್ವರ್ ತತ್ತ್ವದಲ್ಲಿ ಇರಬೇಕೆಂಬುದು, ಅರ್ಥಾತ್ ಪ್ರಜ್ಞೆ-ಬೆಳಕು-ಅರಿವಿನೊಳಗಿನ ಅರಿವು ಅವನ ಜೀವನದ ದಾರಿಯಾಗಿರಬೇಕೆಂದು.

ಆಚರಣೆ ಮತ್ತು ಸಂಪ್ರದಾಯಗಳ ಮೂಲಗಾಮಿ ಪ್ರಶ್ನೆಗೆ ಹೋದಂತೆಲ್ಲ ನಮಗೆ "ದೇವತಾವಿಚಾರ"ದ ಬಗೆಗೂ ಆಸಕ್ತಿ ಬೆಳೆಯುತ್ತದೆ. 'ದೈವತಕಥೆಗಳ ಹುಟ್ಟು ಮತ್ತು ಬೆಳವಣಿಗೆ'ಗೆ ಇದು ಸಂಬಂಧಿಸಿದ ಕ್ಷೇತ್ರವಾಗುತ್ತದೆ. ದೇವರು ಎಂಬುದು ಕಲ್ಪಿತಜನ್ಯಸಂಗತಿ ಎಂಬುದು ಆತರ್ಕ್ಯರೀತಿಯಿಂದಲೇ ಸಿದ್ಧವಾಗುತ್ತಿರು ವಾಗ ಸಂತರು, ದಾಸರು, ತತ್ತ್ವಜ್ಞಾನಿಗಳು, ಕವಿಗಳು, ದೇವರನ್ನು ವಿವಿಧ ರೂಪ ದಲ್ಲಿ ಕಂಡರೆಂಬುದು ಹೇಗೆ? ಎಂಬ ಪ್ರಶ್ನೆ ಮೂಡುತ್ತದೆ. ಇದಕ್ಕೆ ಸರ್ವ ಸಮರ್ಪಕವಾದ ಉತ್ತರ ಹೇಳಲು ಸಾಧ್ಯವಿಲ್ಲ. ಆದರೂ ಕಲ್ಲಿನಲ್ಲಿ, ಪ್ರಕೃತಿಯಲ್ಲಿ, ವಿವಿಧ ರೂಪದಲ್ಲಿ ಅವರು ಕಂಡ ದೇವರ ಅಸ್ತಿತ್ವ ನಿಜಕ್ಕೂ ಅವರೇ ಕಲ್ಪಿಸಿಕೊಂಡ, ಸೃಷ್ಟಿಸಿಕೊಂಡ ಸಂಗತಿ ಎಂದು ಅನ್ನಿಸುತ್ತದೆ. ಮಾನಸಶಾಸ್ತ್ರದ ಭೂಮಿಕೆಯಿಂದ ಇದನ್ನು ಆಲೋಚಿಸಲು ಸಾಧ್ಯವಿದೆ. ಯಾವಾತನು, ಒಂದು ಇಷ್ಟವಾದ ವಸ್ತು ವನ್ನು ಪ್ರತೀಕವಾಗಿ ಇಟ್ಟುಕೊಂಡು ಆರಾಧಿಸುತ್ತಾನೋ ಆತನಿಗೆ ಅದೇ ಚೈತನ್ಯ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಇದು ಅವರ ಮನಸ್ಸು, ಕಣ್ಣು ಸೃಷ್ಟಿಸಿದ 'ಭ್ರಮೆ' ಎಂಬುದು. ಅರವಿಂದ, ವಿವೇಕಾನಂದ, ರಾಮಕೃಷ್ಣ ಪರಮಹಂಸ,

ಎಲ್ಲರೂ ತಾವು ದೇವರನ್ನು ಕಂಡೆವೆಂದು ತಿಳಿಸಿದ್ದಾರೆ. ಆದರೆ, ಇದಕ್ಕೂ ಸಮಾಧಾನವುಂಟು. ಇವರೆಲ್ಲರೂ ನಮ್ಮ ವೇದವೇದಾಂತಾದಿ ಶಾಸ್ತ್ರಗಳ ಅನುಸಂಧಾನದಲ್ಲಿ ಬೆಳೆದವರು. ಆಯಾ ಗ್ರಂಥಗಳಲ್ಲಿ ಇರುವ ಭಾವನೆಯನ್ನೇ ಆತ್ಮಸಾತ್ ಮಾಡಿಕೊಂಡವರು. ಹೀಗಾಗಿ, ಅವರ ಅನುಭವ, ಅವರಿಗೆ ಬಂದಂಥ ಒಳ ಅರಿವು, ಗ್ರಂಥ ವ್ಯಾಸಂಗ ಮತ್ತು ಗುರುಸಂಪ್ರದಾಯದ ವಾಸನೆಯಿಂದ ಬಂದದ್ದರಿಂದ, ಅವರಿಗೆ ದೇವರು ಅತರ್ಕ್ಯ ಹಾಗೂ ಅನುಲ್ಲಂಘ್ಯ ಎನಿಸಿಕೊಂಡು ಬಂದಿರಬೇಕು. ನಿಜವಾದ ರೀತಿಯಿಂದ illusion ಅವರನ್ನು ನಡಸಿದೆ, ಮುಳುಗಿಸಿದೆ ಎಂದು ಹೇಳಿದರೆ ನಗೆಪಾಟಲು ಮಾತ್ರಾಗಿ ಬರಬಹುದು. "What is illusion and what is reality ?" ಎಂಬ ಕೇಳಿಕೆ ಅವರ ಗ್ರಂಥಗಳಲ್ಲಿ ಇದ್ದಂತೆ ಕಂಡುಬಂದಿಲ್ಲ. ಏಕಮುಖದೃಷ್ಟಿ ಹೆಚ್ಚಾಗಿ ಅವರ ವ್ಯಕ್ತಿತ್ವವನ್ನೂ ಅವರ ದೃಷ್ಟಿಕೋನವನ್ನೂ ಅಪ್ಪಿಕೊಂಡಿರಬಹುದೆಂದು ನನ್ನ ಭಾವನೆ ! ಅನೇಕರಿಗೆ ಗುಂಭರೀತಿಯಿಂದ ತಿಳಿದಿರುವ ಹಾಗೆ ಅವರುಗಳು ತಾವು ಹಾಕಿಕೊಂಡ ಗೆರೆಯಿಂದ ಹೊರಕ್ಕೆ ಬರಲಿಕ್ಕೆ ಆಗದೆ ಉಳಿದಿರುವ ಸಾಧ್ಯತೆಗಳು ಅವರ ಗ್ರಂಥಗಳ ಮೇಲಿನಿಂದ ಕಾಣುತ್ತದೆ. ರೂಢಿಮೂಢರಾಗಿರುವುದಂತೂ ಎದ್ದು ಕಾಣುವ ಸಂಗತಿ. ಮೂಲ ವಿಚಾರಗಳಲ್ಲಿ ತಪ್ಪದೇ ಒಪ್ಪಿಕೊಂಡು ಬಂದವರೇ ಹೆಚ್ಚು. ಇದರಿಂದ ಶತ-ಶತಮಾನಗಳ ಅವರೆಲ್ಲರ ಬೆಳವಣಿಗೆಯಲ್ಲಿ ಇದು ಆಂಶಿಕಸತ್ಯವಾಗಿ ಕಂಡುಬಂದಂಥ ಸಂಗತಿಯಾಗಿದೆ. ನಾನು ನನ್ನ ಅಪ್ಪ ಹಾಕಿಕೊಟ್ಟ ದಾರಿಯಲ್ಲಿ ನಡೆದು, ವಿಚಾರವನ್ನೆ ಮಾಡದೆ ನಡೆದರೆ ಏನು ಹೇಳಬೇಕು ? ನಮ್ಮ ವೈಚಾರಿಕತೆ ಶೂನ್ಯವಾಗಿ 'ಅಪ್ಪ ಹಾಕಿದ ಆಲದಮರಕ್ಕೆ' ನೇತುಹಾಕಿಕೊಂಡಿರುವುದು ಸೂರ್ಯಸ್ಪಷ್ಟದಂತೆ ಇದೆ.

ಡಾ॥ ಶಂ. ಬಾ. ಜೋಶಿ ಅವರ ವಿಚಾರಧಾರೆಗೆ ಬೆನ್ನೆಲುಬಾದ ಕೆಲವು ಸಂಗತಿಗಳನ್ನು ಮೇಲೆ ಹೇಳಿದ್ದಾಗಿದೆ. ಇನ್ನು ಶಂ. ಬಾ. ಅವರು ಈ ವಿಚಾರಗಳ ಬೆನ್ನಿಂದ ಹೊರಟು ವೇದೋಪನಿಷತ್ತುಗಳ ಅಧ್ಯಯನಕ್ಕೆ ತೊಡಗಿದಾಗ ಅವರಿಗೆ ಅಲ್ಲಿ ಅನೇಕ ವಿಸಂಗತಿಗಳು ಕಾಣಿಸಿಕೊಂಡವು. ಈ ವಿಸಂಗತಿಗಳೇ ಹೇಗೆ ಆಚಾರಗಳು ಆದುವು, ಸಂಪ್ರದಾಯಗಳು ಆದುವು, ಸತ್ಯಗಳಾದುವು ಎಂಬ ವಿಚಾರವನ್ನು ನಾವು ಆಳವಾಗಿ ಗಮನಿಸಬೇಕಾಗಿದೆ. ಇಂದ್ರ, ಸವಿತೃ, ಸೂರ್ಯ, ಇತ್ಯಾದಿ ದೇವತಾನಾಮಗಳ ರಹಸ್ಯ ಮತ್ತು ದೇವತಾಕಥೆಗಳ ಹಿನ್ನೆಲೆಯಲ್ಲಿ ಆಳವಾಗಿ ಅಭ್ಯಾಸಮಾಡಿ ನೋಡಬೇಕಾದದ್ದು ಇನ್ನೂ ಆಗಬೇಕಾದ ಕೆಲಸ. ಶಂ. ಬಾ. 'ವೇದೋಪನಿಷತ್ತುಗಳು ಸುಳ್ಳನ್ನು ನಂಬಲಿಕ್ಕೆ ಹಚ್ಚಿವೆ' ಎಂದು ಹೇಳುತ್ತಾರೆ. ಆದರೆ, ತಮ್ಮ ಸಂಶೋಧನೆಗೆ ಅವುಗಳನ್ನೇ ಪ್ರಾಮಾಣ್ಯವನ್ನಾಗಿ ಇಟ್ಟುಕೊಳ್ಳುತ್ತಾರೆ. ಏಕೆ ? ಎಂದು ಅನೇಕ ನನ್ನ ಮಿತ್ರರು ಕೇಳಿದ್ದಾರೆ. ವೇದ, ಉಪನಿಷತ್ತುಗಳಲ್ಲಿ ಇರುವ ದ್ವಂದ್ವವನ್ನು ಹೆಕ್ಕಿತೋರಿಸಿ ಇಲ್ಲಿ ಸುಳ್ಳಿದೆ, ಇಲ್ಲಿ ಸತ್ಯವಿದೆಯೆಂದು ಹೇಳಬೇಕಾದರೆ ಅವುಗಳನ್ನು ಬಿಟ್ಟು ಹೇಳುವುದಕ್ಕೆ ಸಾಧ್ಯವೇ ? ನಾನು ಸುಳ್ಳನ್ನು ಹೇಳುತ್ತಿರುವೆನೋ ಸತ್ಯವನ್ನು

ಹೇಳುತ್ತಿರುವೆನೋ ಇದನ್ನು ಪ್ರಮಾಣಿಸಿ ನೋಡಬೇಕಾದರೆ ನಾನು ಮುಖ್ಯ ವಲ್ಲವೇ? ಇದರ ಪಾರ್ಶ್ವನೋಟದಲ್ಲಿ ಮತ್ತೊಂದು ಸತ್ಯ ಹುದುಗಿಕೊಂಡಂತೆ ಅನ್ನಿಸುತ್ತದೆ. ವೇದಗಳಲ್ಲಿರುವ ಸತ್ಯದ ಭಾಗ ಯಾವುದು? ಸುಳ್ಳಿನ ಭಾಗ ಯಾವುದು? ಎಂಬುದೂ ಕೂಡ ನಿರೂಪಿತವಾಗುತ್ತದೆ. ಈ ಸುಳ್ಳಿನ ಭಾಗ ಬಿಟ್ಟು ಮೂಲಸತ್ಯದ ನೆಲೆಯಲ್ಲಿ ವಾಸ್ತವತೆಯನ್ನು, ನಮ್ಮ ಇತಿಹಾಸದ ಗತಿಚಕ್ರವನ್ನು, ತಿಳಿಯಲು ಸಾಧ್ಯವಾಗುತ್ತದೆ. ಆದ್ದರಿಂದಲೇ ಶಂ. ಬಾ. ಋಗ್ವೇದದ ಪ್ರಾಮಾಣ್ಯ ವನ್ನು ಒಪ್ಪಿಕೊಳ್ಳುತ್ತಾರೆ.

ಶಂ. ಬಾ. ಅವರು ಪದೇ ಪದೇ ಹಗಲನ್ನು ಆರಾಧಿಸಿ ಎಂದು ತಮ್ಮ ಗ್ರಂಥ ಗಳಲ್ಲಿ ತಿಳಿಸಿದ್ದಾರೆ. ಈ ಹಗಲು ಎಂದರೆ ಏನು? ಎಂಬ ಪ್ರಶ್ನೆ ಹಲವರದ್ದು, ಹಗಲು > ಬದುಕಿನ-ಜೀವನದ ಸಂಕೇತ. ವೈಚಾರಿಕವಾಗಿ ದ್ವಂದ್ವಮಾನಬುದ್ಧಿಯಿಂದ ಹೊರಬಂದು ವಾಸ್ತವದ ಒರೆಗಲ್ಲಿನಿಂದ ನೋಡಿ ಎಂಬುದು ಈ ಮಾತಿನ ತಾತ್ಪರ್ಯ. ಹಗಲಿನಲ್ಲಿ ಸರಿಯಾದ ಜೀವನ ರೀತಿ ಇದೆ. ಹಗಲಿನಲ್ಲಿ ಅರಿವಿನೊಳಗಿನ ಅರಿವು ಇದೆ. ಹಗಲಿನಲ್ಲಿ ಕ್ರಮವಾದ ನಮ್ಮ ಒಪ್ಪುತಪ್ಪುಗಳು ಕಾಣುತ್ತವೆ. ಹಗಲನ್ನು ಪೂರ್ವಜರು ಪ್ರಜ್ಞೆಯ (consciousness) ಪ್ರತೀಕವಾಗಿ ಕಂಡಿದ್ದರು. ರಾತ್ರಿ ಯನ್ನು ಬುದ್ಧಿಯ (intellect) ಪ್ರತೀಕವಾಗಿ ಕಂಡಿದ್ದರು. ಈ ಹಿನ್ನೆಲೆಯಲ್ಲಿ ನಾವು ಅತಿಲೈಂಗಿಕತೆ ಮತ್ತು ವಿರಕ್ತತೆಯ ದಡಕ್ಕೆ ಸಿಗದೆ ಸಮರೀತಿಯ ಸಮಾನ ಭಾವದ ಬದುಕಿನಲ್ಲಿ ಹೆಜ್ಜೆಯಿಡುವಂತೆ ನಡೆಯುವುದಕ್ಕೆ 'ಹಗಲಿನ ರೀತಿ' ಎಂಬ ಪರಿಭಾಷೆಯನ್ನು ಶಂ. ಬಾ. ಉಪಯೋಗಿಸಿದ್ದಾರೆಂದು ತೋರುತ್ತದೆ. ಹಗಲು= ಪ್ರಜ್ಞೆ ಎಂಬ ಪರಿಭಾಷಾವಿಚಾರ ಬರುವಾಗ ಸವಿತೃ ಯಾರು? ಎಂಬ ಪ್ರಶ್ನೆ ಮೂಡುತ್ತದೆ. ಗಾಯತ್ರೀ ಛಂದಸ್ಸಿನ ಸವಿತೃದೇವತಾತ್ಮಕ ಮಂತ್ರದಲ್ಲಿ ಇದರ ಸರಿಯಾದ ವಿವರಣೆ ಇದೆ. 'ಭೂರ್ಭುವಸ್ವರ್‌ತತ್ಸವಿತುಃ'. ಸವಿತೃ ಎಂದರೆ ಭೂಃ, ಭುವಃ ಪಾತಳಿಯಿಂದ ಮೂರನೆಯ ಪಾತಳಿಯಾದ ಸ್ವರ್ ಅದೇ ಸವಿತೃ ಎಂಬ ವಿವರಣೆಯನ್ನು ಗಮನಿಸಬಹುದಾಗಿದೆ. ಸವಿತೃ-ಎಂದರೆ ಉರಿಯುವ ಭೌತಿಕ ಸೂರ್ಯನೆಂಬುದು ಅರ್ಥ ಅಲ್ಲ. ಸವಿತೃ ಉಪಾಸನೆಯಲ್ಲಿ "ಓಂ ಭೂಃ ಭುವಃ ಸುವಃ (ಸ್ವರ್) ತತ್‌ಸವಿತುಃ ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್" ಎಂಬುದು ಇದೆ. ನೆಲ, ಅಂತರಿಕ್ಷ, ಆಕಾಶ- ಇವನ್ನು ಸೊಂಟದಿಂದ ಕೆಳಕ್ಕೆ ಭೂಃ : ಸೊಂಟದಿಂದ ಶಿಶ್ನವನ್ನು ಸೇರಿಸಿಕೊಂಡು ಭುಜದವರೆಗೆ ಭುವಃ : ಅನಂತರದ ಶಿರಸ್ಸು ಸುವಃ. ಎಂಬುದಾಗಿ ತಾಂತ್ರಿಕ ಆಚರಣೆ ಗಳ ವಿವರಣೆಯಲ್ಲಿ ಬರುತ್ತದೆ. ಶಾಕ್ತತಂತ್ರಗಳ ಆಚರಣೆ ದೇಶದ ಹಾಗೂ ಪ್ರಪಂಚದ ನಾನಾಭಾಗಗಳಲ್ಲಿ ಒಂದು ಕಾಲಕ್ಕೆ ದಟ್ಟವಾಗಿತ್ತು ಎಂಬುದನ್ನು ಇದು ತಿಳಿಸುತ್ತದೆ. ಯೋಗಿಗಳ ಪರಿಭಾಷೆಯಲ್ಲಿ 'ಸಹಸ್ರಾರ' ಇರುವುದು ಶಿರಸ್ಸಿನಲ್ಲಿ. ಅದು ಪ್ರಜ್ಞೆಯ ಆಗಾಮಿ ಆಗರ ಎಂಬ ಕಲ್ಪನೆ ಬಹಳ ಪ್ರಾಚೀನದ್ದು. Nous

ಎಂಬುದಕ್ಕೆ ಸವಿತೃ ಎಂದೇ, ಸ್ವರ್ ಎಂದೇ ಪರಿಭಾಷೆ. ನಾವು ಸವಿತೃ, ಸ್ವರ್‌ನ ನಿಯಂತ್ರಣದಲ್ಲಿ, ನಿಯಮನದಲ್ಲಿ ಬಾಳಬೇಕೆಂಬ ಜೀವನ ರೀತಿಯನ್ನು ಇದು ಪ್ರಚೋದಿಸುತ್ತದೆ. ನಿನ್ನೆ-ಇಂದು-ನಾಳೆ ಈ ಮೂರು ಕಾಲಗಳನ್ನು ನಮ್ಮ ಅರಿಕೆಗೆ ತಂದುಕೊಡಬಲ್ಲ ಸಾಧನ ಸ್ವರ್ (Nous) ಸವಿತೃ. ನಿನ್ನೆ-ಇಂದು-ನಾಳೆ ಈ ಕಾಲ ಪ್ರವಾಹದಲ್ಲಿ ಮಾನವಜೀವನ ಇದೆಯೇ ಹೊರತು ವ್ಯಕ್ತಿ ಇಲ್ಲ. ಮಾನವಜೀವನದ ಆರಾಧನೆಯನ್ನು ಮಾಡಿರಿ. ಪರಂತು 'ನರ' ಜೀವನದ ರೀತಿಗೊಳಗಾಗಬೇಡಿ ಎಂಬುದು. ಭೂಃ-ಭುವಃ-ಜೀವಿತ ರೀತಿ; ಸ್ವರ್ ಜೀವನರೀತಿ! ಸಾಂಕೇತಿಕ ಪ್ರಮಾಣದ ಮೇಲೆ. ನಾನು ಮೇಲಿನ ವಿವರಣೆಗಳಲ್ಲಿ ಪ್ರಜ್ಞೆಯ ಬಗೆಗೆ ವಿವರ ವಾಗಿ ಹೇಳಲಿಕ್ಕೆ ಆಗಲಿಲ್ಲ. ಈ ಪ್ರಜ್ಞೆ ವ್ಯಕ್ತಿಗತವೋ ಸಾಮಾಜಿಕವೋ ಎಂಬ ಪ್ರಶ್ನೆ. ಪ್ರಜ್ಞೆ ಮತ್ತು ಬುದ್ಧಿ ಎರಡನ್ನೂ ಸಹ ಇಂದು ಸಮಾನವಾದ ರೀತಿಯಲ್ಲಿ ಪರಿಗಣಿಸಿದ್ದಾಗಿದೆ. ಇವೆರಡಕ್ಕೂ ಇರುವ ಭೇದವು ನಮಗೆ ಇನ್ನೂ ತಿಳಿದಿಲ್ಲ. ಆದರೆ, ಕಾಶ್ಮೀರದ ಭಟ್ಟತೌತನೆಂಬ ವಿದ್ವಾಂಸನು ಬುದ್ಧಿಃ ತಾತ್ಕಾಲಿಕೀಜ್ಞೇಯಾ; ಮತಿಃ ಆಗಾಮಿಗೋಚರಾ; ಪ್ರಜ್ಞಾ ತ್ರೈಕಾಲಿಕೀ ಮತಾ" ಎಂದು ಬುದ್ಧಿ-ಮತಿ-ಪ್ರಜ್ಞೆ-ಈ ಪರಿಭಾಷೆಗಳ ಅರ್ಥದ ಅಂತರವನ್ನು ಪ್ರಕಟವಾಗಿ ಸೂಚಿಸಿದ್ದಾನೆ. ಪ್ರಜ್ಞೆ ನನ್ನೊಬ್ಬನದೂ ಅಲ್ಲ : ಯಾರೊಬ್ಬನದೂ ಅಲ್ಲ. ಅದು ಸಾಮಾಜಿಕ ಎಂಬ ಸಂಗತಿ ಭಟ್ಟತೌತನ ಮಾತಿನ ತಾತ್ಪರ್ಯ ಅಲ್ಲವೇ ?

ಇಲ್ಲಿ ಒಂದು ಪ್ರಶ್ನೆ ಬಹಳ ಮುಖ್ಯವಾಗಿ ಕಾಡುತ್ತಿದೆ. ನಮ್ಮದು 'ಹಿಂದೂ ಧರ್ಮ'ವೇ ? ಎಂದು. ಖಂಡಿತ ನಮ್ಮದು ಹಿಂದೂಧರ್ಮವಲ್ಲ. 'ಹಿಂದೂ' ಎಂಬ ಪರಿಭಾಷೆ ಬಂದದ್ದು ಹೊರಗಿನಿಂದ. ಹೀನರೂ ದೂಷಣೆಗೊಳಗಾದವರೂ ಹಿಂದೂಗಳೆಂದು ಕಾಶ್ಮೀರದ ತಂತ್ರವಾರ್ತಿಕ ಗ್ರಂಥ (ಹೀನಂ ಚ ದೂಷ್ಯಂತ್ಯೇವ ಹಿಂದೂಃ ಇತಿ ಉಚ್ಯತೇ) ಹೇಳುತ್ತದೆ. 'ಧರ್ಮ' ಎಂಬುದು ನನ್ನ ಸ್ವತ್ತೂ ಅಲ್ಲ ; ಯಾರ ಸ್ವತ್ತೂ ಅಲ್ಲ. ಸರಿಯಾದ ಆಚರಣೆ, ಧಾರಣೆ-ಪೋಷಣೆ, ಯಾವುದರಲ್ಲಿ ಇದೆಯೋ ಅದು ಧರ್ಮ. ಈಗಿನ ಹಿಂದೂಧರ್ಮ(?)ದಲ್ಲಿ ಅದು ಎಲ್ಲಿದೆ ? ಹಿಂದೂ ಎಂಬ ಪದ ಆಗಂತುಕ. ಪ್ರಾಚೀನ ಗ್ರಂಥಗಳಲ್ಲಿ ಎಲ್ಲಿ ಇದೆ ? ನಾವು ದಿನಾಲು ಹೇಳುವ ಸಂಕಲ್ಪದಲ್ಲಿ ಇಲ್ಲ. 'ವಿಶ್ವಾಮಿತ್ರಸ್ಯ ಬ್ರಹ್ಮೇದಂ ರಕ್ಷತಿ ಭಾರತಂ ಜನಂ' ಎಂದು ವಿಶ್ವಾಮಿತ್ರ ಋಷಿಪ್ರೋಕ್ತ ಮಂತ್ರ ಹೇಳುತ್ತದೆ. ಭಾ = ಪ್ರಕಾಶ, ರತ = ಇರುವವರು ; ಸಾಂಕೇತಿಕವಾಗಿ ಎಷ್ಟು ಸಮರ್ಪಕವಾದ ಮಾತು. ಇದು ಕಾಲ ಖಂಡಕ್ಕೂ ನಮ್ಮ ಇತಿ-ಮಿತಿಯ ವ್ಯಾಪ್ತಿಗೂ ಪಾತ್ರ ಸೇರಿದ್ದು – ಎಂಬ ತಾತ್ಪರ್ಯ ಈ ಪರಿಭಾಷೆಯಿಂದ ಹೊರಕ್ಕೆ ಬರುತ್ತಿದೆಯೇ ? ಹಿಂದೆ ನಾನು ಪ್ರಸ್ತಾಪಿಸಿರುವ ಹಾಗೆ ಸವಿತೃಪಾತಳಿಯಲ್ಲೇ, ಸ್ವರ್‌ಪಾತಳಿಯಲ್ಲೇ ನಮ್ಮ ಭಾಷೆ, ಸಂಸ್ಕೃತಿ, ಆಚಾರ ಗಳು ಮೂಡಿವೆ ಎಂಬ ಮಾತು ಸವಿತೃದೈವತದ ಸಾಂಕೇತಿಕವ್ಯಾಪ್ತಿಯಾಗಿರುವಾಗ 'ಭಾರತ ಜನಮ್' ಇತ್ತು. ನಂತರ ಭೂಃ-ಭುವಃ ನೆಲೆಗಟ್ಟಿನ ದೇವತೆಗಳ ಆರಾಧನೆ

ಯಲ್ಲಿ ಮುಳುಗಿದಾಗ ಹಿಂದೂಗಳಾದವೆಂದು ಅನುಮಾನಿತಸತ್ಯದ ಆಧಾರದಿಂದ ಹೇಳಬಹುದು ಅಲ್ಲವೇ ? ಇತಿಹಾಸದ ದೃಷ್ಟಿಯಿಂದ ಸವಿತೃ, ಇಂದ್ರ, ದೇವತೆಗಳು ಪ್ರಾಚೀನ. ಅನಂತರದ್ದು ವಿಷ್ಣು, ಶಿವ, ರುದ್ರ ಇತರ ದೇವತೆಗಳದ್ದು. ನಮ್ಮ ಭಾರತೀಯ ಸಂಸ್ಕೃತಿ, ಅಂದರೆ ಇಂದಿನ ಹಿಂದೂ ಸಂಸ್ಕೃತಿ ಅಲ್ಲ. ಅದು ಪ್ರವರ್ಧ-ಮಾನಕ್ಕೆ ಬಂದದ್ದು ವೈವಸ್ವತ ಮನು ಮಾನವ ಪರಂಪರೆಯಲ್ಲಿ ಎಂಬುದರ ಬಗ್ಗೆ ವಿವರವಾಗಿ ಒಳಪುಟಗಳಲ್ಲಿ ಇರುವುದರಿಂದ ಆ ಬಗ್ಗೆ ಇಲ್ಲಿ ಮತ್ತೆ ಪ್ರಸ್ತಾಪಮಾಡು ವುದಿಲ್ಲ. ಸ್ವಲ್ಪದರಲ್ಲೆ ಹೇಳುವುದಾದರೆ : ಜಾತಿ, ಧರ್ಮ, ಮತ, ಯಾವುದೇ ಭಿನ್ನತೆ ಇಲ್ಲದೆ ಎಲ್ಲರೂ ಒಟ್ಟಿಗೆ ಕೂಡುವ, ನಡೆಯುವ, ತಿನ್ನುವ, ಕೆಲಸ ಮಾಡುವ, ಆಚರಣೆ; ಇದಕ್ಕೆ ತದ್ವಿರುದ್ಧ ಸ್ವಾಯಂಭುವ. ಪ್ರತಿಯೊಬ್ಬ ವ್ಯಕ್ತಿಯೂ ಸ್ವಾಯಂಭುವೇ. ವ್ಯಕ್ತಿಗತ ಸ್ವಾಯಂಭುವ ಸಮಾಜ ಸಮಷ್ಟಿಗತ ವೈವಸ್ವತಮನು. ವೈವಸ್ವತ ಮನುವಿನ ಆಚರಣೆ ಹಿಂದೆ ಹೇಗಿತ್ತೆಂಬುದಕ್ಕೆ 'ಸಂ ಗಚ್ಛಧ್ವಂ ಸಂ ವದಧ್ವಂ ಸಂ ವೋ ಮನಾಂಸಿ ಜಾನೀಥಾ' ಆಗಲಿ, 'ಸಹನಾವವತು ಸಹನೌ ಭುನಕ್ತು, ಸಹವೀರ್ಯಂ ಕರವಾವಹೈ, ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾ ವಹೈ' ಆಗಲಿ 'ಸಮಾನೀವ ಆಕೂತಿಃ ಸಮಾನ ಹೃದಯಾನಿ ವಃ ಸಮಾನಮಸ್ತು ವೋ ಮನೋ ಯಥಾ ವಃ ಸು ಸಹಾಸತಿ' ಇಂಥ ಮಂತ್ರಗಳೊಡನೆ ಹೋಲಿಕೆ ಮಾಡಿ ನೋಡಬಹುದು.

ಹಿಂದೊಂದು ಕಾಲದಲ್ಲಿ ಗಂಡುದೇವತೆ ಹೆಚ್ಚೋ ಹೆಣ್ಣುದೇವತೆ ಹೆಚ್ಚೋ ಎಂಬ ಮಾತು ಇರುತ್ತಿತ್ತು. ಮೊದಲು ಹೆಣ್ಣುದೇವತೆಗಳೇ ಪ್ರತಿಷ್ಠಿತ ಸ್ಥಾನ ಪಡೆದಿದ್ದವು. ದಿತಿ, ಅದಿತಿ ಇದಕ್ಕೆ ಉದಾಹರಣೆ. 'ಅದಿತಿಃ ದೇವಮಾತಾ' ಎಂಬ ಉಗ್ಘಡಣೆ ಋಗ್ವೇದದಲ್ಲಿ ಕೇಳಬರುತ್ತದೆ. ಆ ನಂತರ ಆ ಸ್ಥಾನವನ್ನು ವಿಷ್ಣು, ಕೃಷ್ಣ, ಶಿವ, ರುದ್ರ ಇತ್ಯಾದಿ ದೇವತೆಗಳು ಆಕ್ರಮಿಸಿದುವು. ಆದರೆ, ಮೂಲತಃ ಯಾವ ಲಿಂಗದ ದೇವತೆ ಮುಖ್ಯವೆಂಬ ಮಾತು : ಹಗಲಿನ ಆರಾಧನೆ ಯಲ್ಲಿ, ಜೀವನದ ನೆಲೆಯಲ್ಲಿ, ಪ್ರಜ್ಞೆಯ ಪ್ರಚೋದನೆಯಲ್ಲಿ ಬರುವುದೇ ಇಲ್ಲ ಎಂಬುದನ್ನು ಗಮನಿಸಬೇಕಾಗಿದೆ. ಇನ್ನು ಜೀವನ-ಜೀವಿತದ ಬಗ್ಗೆ ಬೇರೆಡೆ ನಾನು ಪ್ರಸ್ತಾಪಿಸಿದ್ದೇನೆ. ಅದನ್ನೂ ಸಹ ಸ್ವಲ್ಪದರಲ್ಲೆ ವಿವರಿಸುವುದು ಸೂಕ್ತವಿದೆ. ರಾತ್ರಿ-ಜೀವಿತ : ಹಗಲು-ಜೀವನ. ಬರಿ ರಾತ್ರಿಯಲ್ಲೆ ಕಳೆಯುವುದಕ್ಕೂ ಸಾಧ್ಯವಿಲ್ಲ. ಅಥವಾ ಹಗಲಿನಲ್ಲೇ ಕಳೆಯುವುದಕ್ಕೂ ಸಾಧ್ಯವಿಲ್ಲ. ಈ ಮನುಕುಲದ ನೆಲೆಯಲ್ಲಿ ಇವೆರಡಕ್ಕೂ ಸಹ ಅವರದೇ ಆದ ಸ್ಥಾನ ಇದೆ. ಆದರೆ, ಒಂದು ಮಾತು : ಜೀವನದ (Life) ಬೆಂಗಡೆಯಲ್ಲಿ ಜೀವಿತ (Existence) ಇರಬೇಕೇ ಹೊರತು : ಜೀವಿತದ ನೆರಳಿನಲ್ಲಿ ಜೀವನ ಇರಬೇಕಿಲ್ಲ. ರಾತ್ರಿಯೇ ಸರ್ವಮಾನ್ಯವಾಗುವಾಗ ಹಗಲಿಗೆ ಬೆಲೆ ಎಲ್ಲಿ? 'ವ್ಯಕ್ತಿ'ಯ ವಿಜೃಂಭಣೆ ಮೆರೆಯುವುದು ರಾತ್ರಿಯಲ್ಲೇ. ಆದರೆ, ಹಾಸಿನ ಮೇಲೆ ಹೊಕ್ಕು ಬರಬೇಕು. ಹಾಸು-ಹಗಲು, ಹೊಕ್ಕು-ರಾತ್ರಿ : ಇದು

ಜೀವನ. ನಾವು ಲೈಂಗಿಕಕ್ಕಾಗಿ, ನಮ್ಮ ವ್ಯಕ್ತಿಮುಕ್ತಿಕ್ಷೇತ್ರಕ್ಕಾಗಿ ಬದುಕುತ್ತೇವೆ - ಎಂದರೆ ಏನು ಜೀವನದ ಅರ್ಥ ? 'ನಾನು' ಎನ್ನುವುದಕ್ಕೆ ಬೆಲೆ ಬರುವುದು 'ನೀನು' ಆದಾಗ. 'ನಾನು-ನೀನು-ಅವನು' ಈ ಸರ್ವನಾಮಗಳ ನೆಲೆಯಲ್ಲಿ ಬದುಕಿನ ನಿಜ ವಾದ ಅರ್ಥ ಇದೆ. ಇಲ್ಲಿ ಎಲ್ಲಕ್ಕೂ, ಎಲ್ಲ ವಿಚಾರಕ್ಕೂ, ಒಂದಕ್ಕೊಂದಕ್ಕೂ ತಾಳಿ ಇದೆ. ತುಲನೆ ಇದೆ. ತನ್ನದೇ ಆದ 'ಗತಿ' ಇದೆ.

**ಪೂರ್ವ ಪೀಠಿಕೆ**

ಡಾ॥ ಶಂ. ಬಾ. ಅವರ ಮನಸ್ಸನ್ನು 'ಪ್ರವಾಹ ಪತಿತರಕರ್ಮ ಹಿಂದೂ ಎಂಬ ಧರ್ಮ' ಎಂಬ ಬೆಂಗಳೂರಿನ ವಿಶ್ವವಿದ್ಯಾನಿಲಯದ ಉಪನ್ಯಾಸದ ಕಾಲದಿಂದಲೂ 'ಮನು'ಸಮಸ್ಯೆ ಹಿಂಬಾಲಿಸುತ್ತ ಬಂದಿದೆ. ಅವರು ಅಂದಿನಿಂದ ಈಚೆಗಿನ 'ಬಿತ್ತಿದ್ದನ್ನು ಬೆಳಕೊ' ಗ್ರಂಥದವರೆಗೂ ಈ ವಿಚಾರವನ್ನು ಪ್ರಬಲವಾಗಿ ಬೇರೆ ಬೇರೆ ನಿಲುವು ಗಳಿಂದ ಚಿಂತನ–ಮಂಥನ ಮಾಡುತ್ತ ಬಂದಿದ್ದಾರೆ. 'ಮನು' ವಿಚಾರ ಒಂದು ಜಾಗತಿಕ ಸಮಸ್ಯೆ. ಆದರೆ, ಈ ವಿಷಯದ ಬಗೆಗೆ ನಮ್ಮ ದೇಶದಲ್ಲಾಗಲಿ, ಹೊರ ದೇಶದಲ್ಲಾಗಲಿ ವಿದ್ವಾಂಸರುಗಳು ತೀವ್ರ ಆಸಕ್ತಿಯನ್ನು ವಹಿಸಿದವರು ಇಲ್ಲ. ನಾನು ಮೇಲೆ ತಿಳಿಸಿದಂತೆ 'ಮನು' ಒಂದು ಜಾಗತಿಕ ವಿಚಾರ ಎಂದು ಹೇಳಿದೆ. ಮಾನವ ಸಂಸ್ಕೃತಿಯನ್ನು ರೂಪಿಸಿದವರು ಯಾರು ? ಮನು: ವೈವಸ್ವತನೇ ಅಥವಾ ನರ: ಸ್ವಾಯಂಭುವನೇ ? ಎಂಬುದರ ಬಗೆಗೆ ಶಂ. ಬಾ. ಅವರು ಏನನ್ನು ಹೇಳಿದ್ದಾ ರೆಂಬುದನ್ನು ಸಂಗ್ರಹವಾಗಿ ತಿಳಿಯೋಣ. ಇದು ನಾನು ಹೇಳಲಿರುವ ವಿಷಯಕ್ಕೆ ಪೂರ್ವ ಪೀಠಿಕೆ ಎಂಬುದಾಗಿ ತಿಳಿಯಬಹುದು.

ಡಾ॥ ಶಂ. ಬಾ. 1960ರ ಸುಮಾರಿನಲ್ಲಿ ಪ್ರಕಟಿಸಿದ 'ಹಾಲುಮಂತ ದರ್ಶನ' ಎಂಬ ಗ್ರಂಥದಲ್ಲಿ ನಮ್ಮ ಸಾಂಸ್ಕೃತಿಕ ಸ್ತರಗಳ ಪೂರ್ವೋತ್ತರಗಳನ್ನು ಕುರಿತು ವಿವೇಚಿಸಿದರು. ಆ ಗ್ರಂಥದಲ್ಲಿ ಶೈವ ಹಾಗೂ ವೈಷ್ಣವ ಸಂಪ್ರದಾಯಗಳ ತುಲನಾತ್ಮಕ ಅಧ್ಯಯನ ಹಾಗೂ ತತ್ತ್ವವಿಚಾರಗಳ ಮೂಲ ಪಾತಳಿಯ ಬಗೆಗೆ ಜಿಜ್ಞಾಸೆ ಮಾಡಿದ್ದರು. ಈ ಸಂದರ್ಭದಲ್ಲೆ ಅವರಿಗೆ ನಮ್ಮ ಸಂಸ್ಕೃತಿಯಲ್ಲಿ ಪಲ್ಲಟ ಆಗಿದೆಯೆಂಬ ಅಂಶ ತಿಳಿಯಿತು. ಇಂದು ನಾವು ಪೂಜಿಸುವ ದೇವತೆಗಳು ಚಾಂದ್ರ ಸಂಪ್ರದಾಯದ ಆಪರಸತತ್ತ್ವದ ಭೂಮಿಕೆಯ ದೈವತಗಳೇ ಹೊರತು ಸೌರ ಸಂಪ್ರದಾಯದ ಸವಿತೃತತ್ತ್ವದ ಭೂಮಿಕೆಯ ದೇವತೆಗಳಲ್ಲ. ಈಗಿನ ಎಲ್ಲಾ ದೇವತೆಗಳೂ 'ಕಂ' (ನೀರು) ನಿಂದ ಹುಟ್ಟಿರುವ ದೈವತಗಳೇ. ಈ ದೈವತಗಳ ಆರಾಧನೆಯು ಆ ಕಾಲದ ಜನರ, ಸಾಂಸ್ಕೃತಿಕ ಬದುಕಿನ ಹಿನ್ನೆಲೆಯಾಗಿರುತ್ತದೆಂದು ಸೂಕ್ಷ್ಮವಾಗಿ ತಿಳಿಸಿದ್ದರು. ಅಂದರೆ ಇಂದಿನ ದೈವತಗಳೆಲ್ಲವೂ ಇಂದ್ರ, ಸವಿತೃ, ವರುಣ, ದೈವತಗಳೂ ಸೇರಿ ಪಲ್ಲಟ ಆಗಿದೆ. ಇದು ಯಾರಿಂದ ಹೇಗೆ ಘಟಿಸಿತೋ ಎಂಬ ಕುತೂಹಲ ಅವರನ್ನು ಕಾಡಿಸಿತು. ತುಲನಾತ್ಮಕ ಪವಾಡಕತೆಗಳು ಹಾಗೂ

ಇಂದಿನ ಹಿಂದಿನ ಧಾರ್ಮಿಕ ಸಾಹಿತ್ಯದ ಅಧ್ಯಯನಗಳ ಹಿನ್ನೆಲೆಯಲ್ಲಿ ನಮ್ಮ ಸಂಸ್ಕೃತಿಯಲ್ಲೆ ಎರಡು ವಿಚಾರಧಾರೆಗಳು ಇವೆಯೆಂಬುದು ತಿಳಿಯಿತು. ಒಂದು ವಾಸ್ತವ ವಿಚಾರಧಾರೆಯಾದರೆ ಮತ್ತೊಂದು ಕೃತಕ ವಿಚಾರಧಾರೆ ಎಂಬ ಅಂಶವು ಗಮನಕ್ಕೆ ಬಂದಿತು. ಅನಂತರ ಅವರ ಚಿಂತನ ಈ ದಿಕ್ಕನ್ನು ಹಿಡಿದು ಹೊರಭಾಗ ಸಂಸ್ಕೃತಿಯಲ್ಲಿ ಹಲವಾರು ಮನುಗಳಿರುವುದು ಅವರ ಗಮನಕ್ಕೆ ಬಂದಿತು. ಮಾನವ ಸಂಸ್ಕೃತಿ ರೂಪಿಸಿದವನು ಒಬ್ಬನೇ ಇರಬೇಕಲ್ಲವೇ ? 'ಆದ್ಯ ಮನು' ಯಾರು ? ಜೀವನ ವಿಶ್ವಸ್ಥ ಪಾತಳಿಗಳನ್ನು ಗಮನಕ್ಕೆ ತಂದುಕೊಡುವಂತಹ ಮನು ಯಾರು? ಎಂಬ ಈ ಪ್ರಶ್ನೆಗಳ ತುಯ್ದಾಟಕ್ಕೆ ಸೇರಿದರು, 'ಪ್ರವಾಹಪತಿತರ ಕರ್ಮ ಹಿಂದೂ ಎಂಬ ಧರ್ಮ' 'ಮಾನವಧರ್ಮದ ಆಕೃತಿ', 'ಬುಧನ ಜಾತಕ' ಹಾಗೂ 'ಬಿತ್ತಿದ್ದನ್ನು ಬೆಳಕೊ'– ಎಂಬಲ್ಲಿಯವರೆಗೆ ಈ ಚಿಂತನೆಧಾರೆ ಹರಿದು ಬಂದಿತು. ಈ ಸಂದರ್ಭದಲ್ಲಿ ಆಗ ಪವಾಡಕತೆಗಳ ವ್ಯಾಸಂಗ, ಪರಿಭಾಷಾ ಅಧ್ಯಯನ, ಸಾಂಸ್ಕೃತಿಕ ವಿಚಾರಗಳ ಹೊಸ ಹೊಸ ಶೋಧನೆಗಳ ಗ್ರಂಥವ್ಯಾಸಂಗ ಮಾಡುತ್ತ ಹೋದಂತೆ ವೈವಸ್ವತ ಮನು ; ಸ್ವಾಯಂಭುವ ಮನು—ಈ ಇಬ್ಬರು ಮನುಗಳು ಗಟ್ಟಿಯಾಗಿ ನಿಂತರು. ಒಂದು ಸಂಸ್ಕೃತಿಯಲ್ಲಿ ಇಬ್ಬರು ಮನುಗಳು ಬರುವುದು ಹೇಗೆ ಸಾಧ್ಯ ? ಈ ಪ್ರಶ್ನೆ ಅವರ ಮುಂದೆ ಬೃಹದಾಕಾರವಾಗಿ ನಿಂತಿತು. 'ಹಿಂದೂ ಎಂಬ ಧರ್ಮ' ಪುಸ್ತಕದ ವಿಚಾರವೇ ಇದರ ಬಗೆಬಗೆಯ ನಿಲುವೆಯ ಅಧ್ಯಯನಕ್ಕೆ ಮೀಸಲಾಗಿದೆ. ಹೀಗೆ ಇವರಿಬ್ಬರಲ್ಲಿ ಒಬ್ಬ 'ಕೃತಕ' ಮನು ಆಗಿರಲೇಬೇಕೆಂಬ ಸಂಶಯ ಮೂಡಿ ಬಂದಿತು. ಈ ಇಬ್ಬರು ಮನುಗಳ ಪೂರ್ವೋತ್ತರಗಳ ವ್ಯಾಸಂಗವನ್ನು ಮಾಡಿದರು. ಋಗ್ವೇದದಲ್ಲಿ ವೈವಸ್ವತ ಮನು ಇದ್ದಾನೆ. ಆದರೆ, ಸ್ವಾಯಂಭುವ (ಮನು) ಇಲ್ಲ. ಆದರೆ. ನಮ್ಮ ನಡೆವಳಿ (Ritual) ಯಲ್ಲಿ ಸ್ವಾಯಂಭುವ ಸಂಪ್ರದಾಯವೇ ಆವರಿಸಿ ನಿಂತಿರುವ ಭಯಾನಕ ದೃಶ್ಯವು ಕಾಣಹತ್ತಿತು.

ಆದರೆ, ದಿನದ ಆಹ್ನಿಕ (Ritual) ಮಂತ್ರಗಳಲ್ಲಿ 'ವೈವಸ್ವತ ಮನ್ವಂತರೇ' ಎಂಬುದಾಗಿ ಇದೆ. ದಿನದ ಕಾರ್ಯಾಚರಣೆ ಮಾಡುವ ಮೊದಲು 'ವೈವಸ್ವತ'ನನ್ನು ನೆನಪಿಸಿಕೊಳ್ಳುವ ಈ ನಡೆವಳಿ 'ವೈವಸ್ವತ'ವನ್ನು ಅನಾದಿಕಾಲದಿಂದಲೂ ರಕ್ಷಿಸಿಕೊಂಡು ಬಂದದ್ದು ಆಗಿದೆ. ಆದರೆ, ಇಲ್ಲಿ ಗಮನಿಸಬೇಕಾದ ವಿಚಾರ ಎಂದರೆ 'ಸ್ವಾಯಂಭುವ ಮನು' ಎಂಬ ನಿರ್ದೇಶನವು ಇಲ್ಲ. ಅಲ್ಲದೆ, ಕಾಳಿದಾಸನು ತನ್ನ ರಘುವಂಶದಲ್ಲಿ 'ವೈವಸ್ವತಮನು'ವನ್ನು ನೆನೆಸುತ್ತ ಅವನಿಗೆ 'ಆದ್ಯಃ' ಎಂಬ ವಿಶೇಷಣವನ್ನು ಬಳಸಿದ್ದಾನೆ. ಹಾಗಾದರೆ ಇಲ್ಲಿ ಬರುವ ಸ್ವಾಯಂಭುವ ಮತ್ತು ಆದ್ಯ ಇವೆರಡು ಸಮಾನಾರ್ಥಕ ವಿಶೇಷಣಗಳೇ ? ಸಾಂಸ್ಕೃತಿಕ ಸಮೀಕ್ಷೆಯಲ್ಲಿ ನೋಡಿದರೆ ಇದು ತಪ್ಪು. ಇವೆರಡೂ ಸಹ ಸಮಾನಾರ್ಥಕ ವಿಶೇಷಣಗಳು ಅಲ್ಲ. 'ಆದ್ಯ'ನನ್ನು ತುಳಿದು ಹಾಕಲು ಬಂದಂಥ ಅನೌರಸ ಸಂತಾನ ಎಂದು ದೃಢವಾಗಿ ತಿಳಿಸಿದರು. ಹಾಗಾದರೆ ಸ್ವಾಯಂಭುವ ಎಂಬುದರ ಅರ್ಥ—'ಸ್ವಯಮೇವ

ಭವತೀತಿ ಸ್ವಯಂಭೂಃ' ಎಂದು. ಸ್ವಯಂಭೂ ಎಂದರೆ ಬ್ರಹ್ಮ ಎಂಬುದು ಪ್ರಸಿದ್ಧಾರ್ಥ. 'ಓಂ ಬ್ರಹ್ಮ, ಓಂ ಮಹಃ', ಎಂಬುದರಲ್ಲಿ ಬ್ರಹ್ಮ ಕೂಡ 'ಚಂದ್ರ' —ಎಂಬುದೇ. ಚಂದ್ರ ರಾತ್ರಿ ದೇವತೆ. ಅಂದರೆ, ಇದು ರಾತ್ರಿ ಸಮಯಾಚಾರದ ಪ್ರತಿಮೆ ಎಂಬುದು ಸಿದ್ಧವಾಯಿತು. ನಮ್ಮ ಸಂಸ್ಕೃತಿಯಲ್ಲಿ ಸೌರಾಧಿಷ್ಠಿತ ಭೂಮಿಕೆ ಒಂದಾದರೆ, ಅಪರಸ ಪಂಥೀಯ ಭೂಮಿಕೆ ಮತ್ತೊಂದು. ಸೌರತತ್ತ್ವವು ಸೂರ್ಯನ ಸಂಬಂಧಿಯಾಗಿದ್ದರೆ, ಅಪರಸತತ್ತ್ವವು ಚಂದ್ರನ ಸಂಬಂಧಿಯಾಗುತ್ತದೆ. ಸೌರ ತತ್ತ್ವದ ಸಂಕೇತಗಳು ನಷ್ಟವಾಗಿ ಅಪರಸತತ್ತ್ವದ ಸಂಕೇತಗಳು ಬಲಿಷ್ಠವಾಗುವು ದಾದರೆ 'ಮನು-ಜ' ಹೋಗಿ 'ತನು-ಜ'ನಾಗಿರುವ ಸ್ಥಿತಿಯಲ್ಲಿ ಇದ್ದಾನಲ್ಲ ಎಂಬ ಚಿಂತೆ ಅವರನ್ನು ಕಾಡಿತು.

ಈ ವಿಷಯವನ್ನು ಅವರು ಮಾನಸಶಾಸ್ತ್ರದ ಭೂಮಿಕೆಯಿಂದ ನೋಡಲು ಪ್ರಾರಂಭಿಸಿದರು. ಮಾನವಶಾಸ್ತ್ರದ ಭೂಮಿಕೆಯ ಪ್ರಕಾರ ಪವಾಡಕತೆ ಹಾಗೂ ನಡೆವಳಿ ಇವೆರಡರಲ್ಲಿ ಅನ್ಯೋನ್ಯವಾದ ಸಂಬಂಧಗಳು ಇರುವುದು ಖಚಿತವಾದರೆ ಅದನ್ನು ವಾಸ್ತವ ಐತಿಹಾಸಿಕ ಸ್ವರೂಪದ್ದೆಂದು ತಿಳಿಯಬಹುದು. ಈ ಸೂತ್ರವು ನಾನಾ ದೇಶದ ಪವಾಡಕಥೆ (Myth)ಗಳ ಸಮೀಕ್ಷೆಯಲ್ಲಿ ಅವರಿಗೆ ಸ್ಪಷ್ಟವಾಯಿತು. ಅಂದರೆ: 'ವೈವಸ್ವತ ಮನು'ವನ್ನು ನಡೆವಳಿಯಲ್ಲೂ ಜ್ಞಾಪಿಸಿಕೊಳ್ಳುತ್ತೇವೆ. ಪವಾಡಕತೆಗಳಲ್ಲೂ ಇದು ದಾಖಲಾಗಿದೆ. ಹೀಗಾಗಿ ಅನ್ಯೋನ್ಯ ಸಂಬಂಧ ಇರುವುದ ರಿಂದ ಇದು ಐತಿಹಾಸಿಕ ಸ್ವರೂಪದ್ದೆಂಬ ನಿಲುವಿಗೆ ಬಂದಂತಾಯಿತು.

ನಮ್ಮ ಭಾರತೀಯ ಪರಂಪರೆಯಲ್ಲಿ 'ನಾಗ : ಲಿಂಗ' ಹಾಗೂ 'ನಾಗ:ಚಂದ್ರ' ಎಂಬ ಪಡೆನುಡಿಗಳು ಇವೆ. ಈ ಪಡೆನುಡಿಗಳು ನಮ್ಮ ಸಾಂಸ್ಕೃತಿಕ ಸಮಾಯಾಚಾರ ಗಳಿಂದ ಅರ್ಥಮಾಡಿಕೊಳ್ಳಲು ಸಹಾಯವಾಯಿತು. ಜೊತೆಗೆ ಋಗ್ವೇದದೊಳಗಿನ ಸಾಂಸ್ಕೃತಿಕ ಸ್ತರಗಳ ಮೂಲಕ ಇದು ಮತ್ತಷ್ಟು ಭ್ರಷ್ಟವಾಯಿತು. ಈಗಿನ ಪ್ರಚಲಿತ ಋಗ್ವೇದದಲ್ಲಿ ಎಲ್ಲಾ ಸೌರದೇವತೆಗಳು, ಪ್ರತಿಮೆಗಳು ಭ್ರಷ್ಟಗೊಂಡಿವೆ. ಸೂರ್ಯನನ್ನು ಆದಿತ್ಯನೆಂದು ಕರೆದಿರುವುದೂ ಅಥವಾ ಆದಿತ್ಯನನ್ನಾಗಿ ಮಾರ್ಪಡಿಸಿರು ವುದೂ ಇದಕ್ಕೊಂದು ಉತ್ತಮ ಉದಾಹರಣೆ. ಸೂರ್ಯ ಮತ್ತು ಚಂದ್ರ ಬೇರೆ ಬೇರೆ ಇರುವಾಗ ಇವರಿಬ್ಬರನ್ನು ಒಟ್ಟಿಗೆ ತಂದಿರುವುದು 'ಸೂರ್ಯಚಂದ್ರಮಸೌ' ಏಕಂ: ಸತ್ (ಒಂದರಿಂದ ಎಲ್ಲ) ಎಂಬ ಕೂಡುನುಡಿಗಳು ಇದಕ್ಕೆ ಸಾಕ್ಷಿ. ಜಾತವೇದಾಗ್ನಿ ಪ್ರತಿಮೆಯನ್ನು ನಾಚಿಕೇತಾಗ್ನಿ ಪ್ರತಿಮೆಯಲ್ಲಿ ಐಕ್ಯಗೊಳಿಸಿರುವುದೂ ಇಂಥವೇ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಇದನ್ನೆಲ್ಲ ಗಮನಿಸಿದಾಗ ಋಗ್ವೇದದ ಮೊತ್ತಮೊದಲಿನ ಪಾಠದಲ್ಲಿ ಸೌರದೇವತೆಗಳಿಗೇ ಪ್ರಾಶಸ್ತ್ಯ ಇತ್ತು—ಎಂಬುದು ಶಂ. ಬಾ. ಅವರಿಗೆ ಮನವರಿಕೆಯಾಯಿತು. ಈ ರೀತಿ ಸಾಂಸ್ಕೃತಿಕ ಅನ್ವೇಷಣದ ಸಂದರ್ಭದಲ್ಲಿ ಪವಾಡಕಥೆಗಳನ್ನು ನಂಬುವುದು ಅಥವಾ ವಿಶ್ವಾಸಾರ್ಹ ಪ್ರಮಾಣ ಗಳೆಂದು ಪರಿಗಣಿಸಬಹುದೇ ಎಂಬ ಆತಂಕ ಮೂಡಿದಾಗ History is conti-

nuation of Mythology" ಎಂದು ಹೇಳುವ ಲೆವಿಸ್ಟ್ರಾಸ್ ಎಂಬುವನ ಮಾತೂ 'Myths precede philosophy' ಎಂಬ ತತ್ತ್ವಜ್ಞನೊಬ್ಬನ ಮಾತೂ ಇವರ ಅಧ್ಯಯನಕ್ಕೆ ಪೋಷಕವಾಯಿತು.

ಇತಿಹಾಸ ಮತ್ತು ತತ್ತ್ವಜ್ಞಾನಗಳ ಮಾಧ್ಯಮ ಭಾಷೆ ಅಲ್ಲವೇ? ಈ ಭಾಷೆ ಆಕಾರ ಪಡೆದಿದ್ದು ಪವಾಡಕಥೆಗಳ ಮೂಲಕವಾಗಿಯೇ. ಪವಾಡಕತೆಗಳ ಮೂಲಕ ಸಾಂಸ್ಕೃತಿಕ ಸ್ತರಗಳ ಸಮೂಲಾಗ್ರ ಅಧ್ಯಯನ ಮಾಡಬಹುದೆಂಬ ವಿಶ್ವಾಸ ಮೂಡಿತು. 'ಪವಾಡ ಕಥೆಗಳ ಸಂಕೇತ ವಿವರಶಾಸ್ತ್ರ' ಈಚೆಗೆ ತಾನೆ ಸಂಶೋಧನಾ ವಿಧಾನಕ್ಕೆ ಬಂದು ಸೇರಿರುವುದರಿಂದ ಈ 'ಸಂಕೇತಶಾಸ್ತ್ರ'ದ ಭೂಮಿಕೆಯನ್ನು ಹಿಡಿದು ಹೊರಟರು, ಶಂ. ಬಾ. ಅವರು ಈ ಭೂಮಿಕೆಯನ್ನು ಹಿಡಿದು ಹೊರಡದೆ ಇದ್ದರೆ ಜೀವನ ವಿಶ್ವಸ್ಥ ವಿಚಾರಗಳನ್ನು ಅರ್ಥಮಾಡಿಕೊಳ್ಳಲು ಅಸಾಧ್ಯ-ಎಂಬುದನ್ನು ತಮ್ಮ ಅಧ್ಯಯನದಿಂದ ಕಂಡುಕೊಂಡರು. ಸಾಂಸ್ಕೃತಿಕ ಪರಂಪರೆಯೊಳಗಿನ ಸಂಕೇತ-ಪ್ರತೀಕಗಳಲ್ಲಿ ಅಂದಿನ ಜನರ ಬಾಳಿನ ರೀತಿ ಹಾಗೂ ನಂಬಿಕೆಗಳು ಪ್ರತಿಬಿಂಬಿತವಾಗಿರುತ್ತವೆ. ಸಮಸಾಮಯಿಕ ಪ್ರತಿಮಾಸಂಕೇತಗಳ ಆಶಯ ಒಂದೇ ಆಗಿರುತ್ತವೆ. ಉದಾಹರಣೆಗೆ ಹೇಳುವುದಾದರೆ: ಸೈಕ್ಲೊಪ್ಸನ one eyed monster ನಮ್ಮಲ್ಲಿನ 'ಪುರುಷ'. ಹಾಗೆಯೇ, ಯೂರೋಪಿಯನ್ ದೇವತಾಕಥೆಗಳಲ್ಲಿ ದೊರಕುವ 'ಝೀವೂಸ್' ನಮ್ಮ ವೇದದಲ್ಲಿ ಬರುವ 'ಅಹಿಹನ್ ಇಂದ್ರ'ನ ಪ್ರತಿಮೆಗೆ ಸಾಮ್ಯ ಹೊಂದುತ್ತದೆ. ಹೀಗೆ, ಪ್ರತಿಮಾ ಸಂಕೇತಗಳಲ್ಲಿ ಸಮಾನವಾದ ಆಶಯ ಇರುವುದು ಹೆಚ್ಚಿನ ಅಧ್ಯಯನಕ್ಕೆ ಅನುಕೂಲವಾಯಿತು; ಇದನ್ನು cross cultural corroboration ಎಂದು ಶಾಸ್ತ್ರಪರಿಭಾಷಾಕಾರರು ಕರೆದಿದ್ದಾರೆ.

ವಿಕಾಸತತ್ತ್ವದ ಭೂಮಿಕೆಯಿಂದ ನಮ್ಮ ಸಂಸ್ಕೃತಿಯ ಅಧ್ಯಯನ ಕೈಗೊಂಡ ಶಂ. ಬಾ. ಅವರಿಗೆ ಸಂಕೇತಪ್ರತಿಮಾಗಳಲ್ಲಿ ತುಲನಾತ್ಮಕ ಅಧ್ಯಯನ ಆ ಸಂಸ್ಕೃತಿಯ ತಾತ್ತ್ವಿಕ ಭೂಮಿಕೆಯನ್ನು ನಮ್ಮ ಕಣ್ಣಳತೆಗೂ ತಂದುಕೊಡುತ್ತದೆ. ಪುರಾಣಗಳಲ್ಲಿ ಬರುವ ವಿವರಣೆ ಮತ್ತು ನಮ್ಮ ರೂಢಪದ್ಧತಿಯೊಳಗಿನ ಆಚಾರಗಳು ಸಮಾನವಾಗಿದ್ದರೆ ಆ ಸಂಸ್ಕೃತಿಯ ಒಟ್ಟು ಸ್ವರೂಪವನ್ನು ನಾವು ತಿಳಿಯುವುದಕ್ಕೆ ಸಾಧ್ಯವಿದೆ. 'ಭಾಷೆ'ಯೊಳಗಿನ ಆಶಯಗಳು ಬದಲಾದಾಗಲೂ ಆ ಸಂಸ್ಕೃತಿಯ ಪರಿಳಿತಗಳನ್ನು ತಿಳಿಯಬಹುದು. ಇದಕ್ಕೆ ಸಮಕಾಲೀನ ಉದಾಹರಣೆಯೆಂದರೆ 'ಗಾಂಧೀ ಟೋಪಿ'. ಪ್ರಾಮಾಣಿಕತೆಯ ಸಂಕೇತದ ಆಶಯವಾಗಿದ್ದ ಇದು ಇಂದು ಬೇರೊಂದು ಅರ್ಥವನ್ನು ಧಾರಣೆ ಮಾಡಿದೆಯೆಂಬುದು ಎಲ್ಲರಿಗೂ ತಿಳಿದಿರುವ ಸಂಗತಿ.

ಈ ತಾತ್ತ್ವಿಕ ಗ್ರಹಣದಿಂದ ಇಡಿಯಾಗಿ ಭಾರತೀಯ ಸಂಸ್ಕೃತಿಯ ಚಿತ್ರವನ್ನು ತನ್ಮೂಲಕ ಮಾನವ ಸಂಸ್ಕೃತಿಯ ಚಿತ್ರಣವನ್ನು ನಾವು ತಿಳಿಯಲು ಸಾಧ್ಯ. ಜೀವನ ಹಾಗೂ ಮೃತ್ಯುತತ್ತ್ವ ಈ ಎರಡು ಭೂಮಿಕೆಗಳ ಹೋರಾಟ ಸಂಸ್ಕೃತಿಯ

ವೈಶಿಷ್ಟ್ಯವೆಂದು ಸ್ಥೂಲವಾಗಿ ಹೇಳಬಹುದು. ಉದಾ : ನಮ್ಮ ಸಂಸ್ಕೃತಿಯಲ್ಲಿ ಸಿಗುವ ನರ ಮತ್ತು ಮಾನವ–ಇವೆರಡೂ ಪದಗಳು ಕೊಡುವ ಅರ್ಥ ವಿಭಿನ್ನ. ಆದರೆ, ಇಂದು ಇವೆರಡೂ ಒಂದೇ ಅರ್ಥದಂತೆ ಆಶಯವನ್ನು ಪಡೆದಿವೆ. ಸ್ವರ್ ಪಾತಳಿ ಸಂಪರ್ಕ ಸಂಬಂಧ ಪಡೆದ 'ನರ', ಮಾನವನಾದ. 'ಮಾನವ' ಶಬ್ದ ಪ್ರತಿಮೆ ತಂದುಕೊಡುವ ಅರ್ಥ ವಿಶಾಲವಾದ್ದು. ಆದರೆ 'ನರ' ಶಬ್ದಪ್ರತಿಮೆ ತಂದುಕೊಡುವ ಅರ್ಥ ಬೇರೆಯದು. 'ನರ' ಅತ್ಯುನ್ನತ ಲಿಂಗ, ಜೀವಿತದ ಸಂಬಂಧಿ ; 'ಮಾನವ' ಪ್ರಜ್ಞಾಪಾತಳಿಯ ಅತ್ಯುಚ್ಚ ಪ್ರತಿಮೆ, ಜೀವನದ ಸಂಬಂಧಿ. ಹೀಗೆ, 'ನರ–ಮಾನವ', ಇವೆರಡೂ ಬೇರೆ ಬೇರೆ ಅರ್ಥ ಕೊಡುವ ಪ್ರತಿಮಾ ಶಬ್ದಗಳು ; ಒಂದೇ ಅರ್ಥವನ್ನು ಕೊಡುವ ಶಬ್ದಪ್ರತಿಮೆಯಾಗಿ ಮೂಡಿದ್ದು ಹೇಗೆ? ಎಂಬ ಸೂಕ್ಷ್ಮಚಿಂತನೆ ಶಂ. ಬಾ. ಅವರಿಗೆ ತಟ್ಟುತ್ತ ಹೋಯಿತು. ಇದರ ಸಾಂಕೇತಿಕ ವಿವರಣೆಗೆ ಮಹಾಭಾರತಕ್ಕೆ ಹೋಗಬೇಕಾಯಿತು. ಉಪನಿಷತ್ತಿಗೆ ಹೋಗಬೇಕಾಯಿತು, ವೇದಕ್ಕೆ ಹೋಗಬೇಕಾಯಿತು, ನರ : ನಾರಾಯಣ ಆದ ಮಹಾಭಾರತದಲ್ಲಿ ; ನಾರಾಯಣೋಪನಿಷತ್ತಿನಲ್ಲಿ ಇದು ಮತ್ತಷ್ಟು ವಿವರವನ್ನು ಕೊಟ್ಟಿತು : ಮಧು ಸ್ರವಿಸುವ ಎಡೆಯಾಗಿ ವೇದದಲ್ಲಿ ಕಂಡುಬಂದಿತು. ಹೀಗೆ ವೇದ, ಉಪನಿಷತ್ತು, ಮಹಾಭಾರತಗಳಲ್ಲಿ ಸಾಂಕೇತಿಕ ಪ್ರತಿಮಾದೃಷ್ಟಿಯಿಂದ ಕಾಣಬರುವ ನಾರಾಯಣ, ವಿಷ್ಣು, ಕೃಷ್ಣ—ಈ ಎಲ್ಲ ದೇವತೆಗಳು ಮೂಲದಲ್ಲಿ 'ಆಪರಸ' ತತ್ತ್ವದ ದೇವತೆಗಳು ಆಗಿದ್ದದ್ದು ಕಂಡುಬಂದಿತು. 'ಆಪೋನಾರಃ ಇತಿ ಪ್ರೋಕ್ತಾಃ' ಎಂದು ಮಹಾಭಾರತವೇ ವ್ಯಾಖ್ಯೆ ನೀಡುತ್ತದೆ. ದೈವತ ಕತೆಗಳ ಅನುಸಂಧಾನ ಹಾಗೂ 'ಸಂಕೇತವಿವರಶಾಸ್ತ್ರ'ಗಳ ಮೂಲಕ ಅರಿಕೆಗೆ ಬಂದಿತು.

ಮೇಲಿನ ವಿವರಣೆಯ ಅರ್ಥ : ನಾವು ನಿತ್ಯ ವರ್ತಮಾನ ಕಾಲದಲ್ಲೇ ಇದ್ದೇವೆ. ನಮಗೆ ಪ್ರಗತಿಯ ಆಶೆಯೇ ಇಲ್ಲ. ನಾಳೆ ಎಂಬುದು ಕಾಣೆಯಾಗಿ ಇಂದು ಮತ್ತು ನಿನ್ನೆಯಲ್ಲಿ ಬದುಕಿದ್ದೇವೆ. ವಿಶಾಲತರವಾದ ಮಾನವ ಜೀವನ ಹಾಗೂ ಚೋದನಾ ಲಕ್ಷಣವಾದ ಧರ್ಮ ಇಲ್ಲವಾಗಿ ವ್ಯಕ್ತಿಜೀವಿತ ಹಾಗೂ ವ್ಯಕ್ತಿಧರ್ಮಗಳು ಬೆಳೆದು ಸಮಾಜ ಅಸ್ತವ್ಯಸ್ತವಾಗಿದೆ. ಅನೇಕ ಧರ್ಮಗಳು (ಜೈನ, ಬೌದ್ಧ, ಸೀಖ್ಖ, ಇತ್ಯಾದಿ), ಮತಗಳು, ನಂಬಿಕೆಗಳು, ಅಂಧಶ್ರದ್ಧೆಗಳು ಬೆಳೆದು ನಿಂತವು ಎಂಬ ಸತ್ಯ ಶಂ. ಬಾ. ಅವರಿಗೆ ಆಯಿತು. ಮಾನವ ಜೀವನ ಹಾಗೂ ವ್ಯಕ್ತಿಜೀವಿತಗಳ ಮಧ್ಯೇ ತುಂಬಾ ದೂರ ಇದೆ. ಇವೆರಡೂ ಸಹ ಸಮಾನವಾದ ಪಾತಳಿಗಳು ಅಲ್ಲ ಎಂಬ ಅಂಶವನ್ನು ತಮ್ಮ ಕೃತಿಗಳಿಂದ ಬಗೆಬಗೆಯಾಗಿ ನಿರೂಪಿಸಿದ್ದಾರೆ. ನಮ್ಮ ಇಂದಿನ ಬದುಕಿನಲ್ಲಿರುವ ವೈರುದ್ಧ್ಯಕ್ಕೆ, ನಾವು ಪೂರ್ವದಲ್ಲಿ ಯಾವ ಸೌರಪ್ರತಿಮಾ ತತ್ತ್ವಗಳ ಪಾತಳಿಯಲ್ಲಿ ಇದ್ದೆವೋ ಅದರ ನಷ್ಟ ಹಾಗೂ ಕಲ್ಪಿತಜನ್ಯವಾದ ನಾನಾ ಕಥೆಗಳು ಕಾರಣವಾಗಿರುವುದು ನಿಷ್ಕಾರಣವಲ್ಲ. ಇಂದು ಜಾತಿ–ಮತ–ವ್ಯಕ್ತಿಧರ್ಮಗಳ ಹೊಂಡಗಳಲ್ಲಿ ಬಿದ್ದು ಹೊರಳಾಡುತ್ತಿದ್ದೇವೆ. ಇದಕ್ಕೆ 'ನರ : ಸ್ವಾಯಂಭುವ'

ಸಂಪ್ರದಾಯವೇ ಕಾರಣವಾಗಿದೆ. ಇದರಿಂದ ನಾವು ಬಿಡಿಸಿಕೊಂಡು ಪ್ರಜ್ಞಾ ತತ್ತ್ವದ 'ಮನು : ವೈವಸ್ವತ' ಸಂಪ್ರದಾಯವನ್ನು ತರದೆ ಇದ್ದರೆ ಲೋಕಕ್ಕೆ ಉಳಿಗಾಲವಿಲ್ಲ. ಅಷ್ಟೇ ಅಲ್ಲ, ಮಾನವ ಸಂಸ್ಕೃತಿಯ ಆ ನಿತ್ಯಸತ್ಯ ನಷ್ಟವಾಗುತ್ತದೆ, ದೇಶಕ್ಕೆ ಭವಿಷ್ಯವಿಲ್ಲದಂತಾಗುತ್ತದೆ.

ಶಂ. ಬಾ. ಅವರ ಮನಸ್ಸಿನಲ್ಲಿ ಇದು ಈಗ ದೃಢವಾಗಿದೆ. ಮಾನವನೊಳಗಿನ ಪ್ರಜ್ಞಾ : ಮನಸ್ಸು ಜಾಗ್ರತವಾದರೆ ಈತನು 'ನರ'ತ್ವಕ್ಕೆ ಬಲಿಬೀಳಲು ಸಾಧ್ಯವಿಲ್ಲ. ಇದು ಸ್ಥೂಲವಾಗಿ ಶಂ. ಬಾ, ಅವರು ವಿವೇಚಿಸಿರುವ, ಸಂಶೋಧಿಸಿರುವ 'ಮಾನವ ಜೀವನ ತತ್ತ್ವವಿಚಾರ' ಅರ್ಥಾತ್ ಭಾರತೀಯ ಸಂಸ್ಕೃತಿಯ ಪೂರ್ವೋತ್ತರ. ಈ ವಿಚಾರದ ತಿಳಿವಳಿಕೆಗೆ ಅವರು ಪಟ್ಟಿರುವ ಶ್ರಮ, ಅಧ್ಯಯನ ಎಣೆಯಿಲ್ಲದ್ದು, ಮಹತ್ವದ್ದೂ ಸಹ. ಭಾರತೀಯ ಪ್ರಾಚ್ಯೇತಿಹಾಸಕ್ಕೆ ಸಂಬಂಧಿಸಿದಂತೆ ಇರುವ ಈ ಅಧ್ಯಯನ ಕ್ರಮ ಶಂ. ಬಾ. ಅವರು ಜಾಗತಿಕ ಪ್ರಪಂಚಕ್ಕೆ ಹೊಸದಾಗಿ ಸಂಶೋಧಿಸಿ ನೀಡಿದ ಕಾಣಿಕೆಯಾಗಿದೆ. ಶಂ. ಬಾ. ಅವರ ಬೆನ್ನನ್ನು ಹತ್ತಿಹೊರಟ ವಿಚಾರಧಾರೆಯೊಳಗೆ ಪ್ರಧಾನವಾಗಿ ನಮ್ಮ ಸಂಸ್ಕೃತಿಯ ಸ್ತರಗಳ ಅಧ್ಯಯನ ಮತ್ತು ಬಾಳಬದುಕಿನ ತಾತ್ತ್ವಿಕ ನೋಟ–ಮುನ್ನೋಟ ಇರುವುದನ್ನೂ ಕಾಣ ಬಹುದು.

ಡಾ॥ ಶಂ. ಬಾ. ಜೋಶಿಯವರ ಬೆನ್ನನ್ನು ಹತ್ತಿಹೊರಟ ವಿಚಾರಗಳ ಸೂಕ್ಷ್ಮವಾದ ನೋಟವು ನಿಮ್ಮ ಮನಸ್ಸಿಗೆ ಬಂದಿರಬಹುದೆಂದು ನಾನು ಭಾವಿಸುತ್ತೇನೆ. ಸಾಂಸ್ಕೃತಿಕ ಅಧ್ಯಯನದ ಮೂಲಕ ಬಂದಿರುವ, ಹಾಗೂ ಕಂಡುಕೊಂಡಿರುವ ವಿಚಾರಧಾರೆಗಳಲ್ಲಿ ಪ್ರಮುಖವಾಗಿ ಮನು : ವೈವಸ್ವತ ಮತ್ತು ನರ : ಸ್ವಾಯಂಭುವ ವಿಚಾರಗಳ ಬಗೆಗೆ ಅವರು ಈಚಿನ ಗ್ರಂಥಗಳಲ್ಲಿ ಪ್ರತಿಪಾದಿಸುತ್ತ ಬಂದಿದ್ದಾರೆ. ಅವರು ಪ್ರತಿಪಾದಿಸುತ್ತ ಬಂದ ಈ ವಿಚಾರಧಾರೆಗಳಲ್ಲಿ 'ಸ್ವಾಯಂಭುವ ಮನು' ಎಂಬ ಉಲ್ಲೇಖದಿಂದ ತಪ್ಪನ್ನು ಎಸಗಿದ್ದಾರೆ. 'ಸ್ವಾಯಂಭುವ' ಮನು ಆಗಲಾರ. ಸಾಂಪ್ರದಾಯಿಕವಾಗಿ ಅವನು 'ಮನು' ಎಂದು ಕರೆದುಕೊಂಡಿದ್ದರೂ ಸಹ 'ಮನು' ಎಂಬ ಸಂಕೇತಕ್ಕೆ ಅವನು ಅನರ್ಹ. ಜೀವಿತದ ಪಾತಳಿಯ ಆದರ್ಶವನ್ನು ರೂಢಿಸುವ ಸ್ವಾಯಂಭುವನಿಗೆ ಮನು ಎಂಬುದು ಅನರ್ಹವಾದ ವಿಚಾರವಾಗುತ್ತದೆ. ಈ ಬಗ್ಗೆ ವಿವರವಾಗಿ ಮುಂದಿನ ಭಾಗದಲ್ಲಿ ಮಾಡಿಕೊಡುವೆ.

ಪ್ರಕೃತ, ಈ ವಿಚಾರಕ್ಕೆ ಹೋಗುವ ಮೊದಲು ಸಂಕ್ಷಿಪ್ತವಾಗಿ ನಮ್ಮ 'ಸಾಂಸ್ಕೃತಿಕ ಸ್ತರ'ಗಳ ಹಾಗೂ 'ವೇದಸಾಹಿತ್ಯ'ವನ್ನು ಕುರಿತಂತೆ ನಮ್ಮಲ್ಲೂ ಹೊರ ದೇಶದಲ್ಲೂ ನಡೆದ ಅಧ್ಯಯನದ ವಿವರಗಳನ್ನು ಸ್ಥೂಲವಾಗಿ ಪರಿಚಯ ಮಾಡಿ ಕೊಳ್ಳೋಣ.

ಸಾಂಸ್ಕೃತಿಕ ಅಧ್ಯಯನವು ನಡೆಯಬೇಕಾದಷ್ಟು ಪ್ರಮಾಣದಲ್ಲಿ ನಮ್ಮಲ್ಲಿ ನಡೆದಿಲ್ಲ. ಅಲ್ಲಿ ಇಲ್ಲಿ ಕೆಲವು ಅಪವಾದಗಳನ್ನು ಬಿಟ್ಟರೆ ಸರ್ವಸಮರ್ಪಕವಾಗಿ

ನಡೆದೇ ಇಲ್ಲ. ಸಂಸ್ಕೃತಿಯ ಅಧ್ಯಯನವೆಂದರೆ 'ಮಾನವ ಜೀವನ' ನಡೆದು ಬಂದ ದಾರಿಯ ಸೂಕ್ಷ್ಮ ಅವಲೋಕನವೆಂದು ಸ್ಥೂಲವಾಗಿಯಾದರೂ ಹೇಳಬಹುದು. 'ಸಂಸ್ಕೃತಿ' ಎಂದಾಗ ಆಚಾರ-ವಿಚಾರಗಳು ಬರುತ್ತವೆ. ಒಂದಂಶದಲ್ಲಿ ಆಚಾರ-ವಿಚಾರಗಳೇ ಸಂಸ್ಕೃತಿಯ ಮೂರ್ತಸ್ವರೂಪದ ಸ್ತರಗಳು ಅಥವಾ ಪಾತಳಿಗಳು. ನಮ್ಮ ದೇಶದ ಸಂಸ್ಕೃತಿಯ ಅಧ್ಯಯನದ ಪೂರ್ವಾಭ್ಯಾಸಂಗಿಗಳಿಗೆ ತುಲನಾತ್ಮಕ ಅಧ್ಯಯನ ಇರಲಿಲ್ಲ; ಅದು ಅವರಿಗೆ ಬೇಕಾಗಿಯೂ ಇರಲಿಲ್ಲ. ಅನೂಚಾನವಾಗಿ ನಡೆದು ಬಂದಿದ್ದ ಮತಶ್ರದ್ಧೆ, ಧಾರ್ಮಿಕ ನಂಬುಗೆಗಳೇ ಅವರನ್ನು ಹಿಡಿದು ನಡೆಸಿದ್ದುವು. ಹೊರದೇಶದ ಜನ ನಮ್ಮಲ್ಲಿಗೆ ಬಂದಾಗ ತುಲನಾತ್ಮಕ ವ್ಯಾಸಂಗ ಆರಂಭವಾಯಿತು. ಬೇರೆ ಬೇರೆ ದೇಶದ ದೈವತಕಥೆಗಳ, ಧಾರ್ಮಿಕ ಆಚರಣೆಗಳ ಹೊಂದಿದ್ದ ಸಾಮಾನ್ಯ ತಿಳಿವಳಿಕೆಯನ್ನು ಪಡೆದರು. ಅವುಗಳಲ್ಲಿ ಮೂರ್ತವಾಗಿದ್ದ ಸಾಂಕೇತಿಕ ಆಶಯಗಳ ಪರಿಚಯದ ಎಚ್ಚರವಿರಲಿಲ್ಲ. ಈ ಆಚರಣೆಗಳಲ್ಲಿ ಇದ್ದ ಸಾಮಾನ್ಯವಾದ 'ಸಾಮ್ಯ'ಗಳು ಅವರಿಗೆ ಸೋಜಿಗವನ್ನು ಉಂಟುಮಾಡಿತು. ಉದಾ: ಋಗ್ವೇದದಲ್ಲಿ 'ಅಗ್ನಿ ಆರಾಧನೆ'; ಹಾಗೆಯೇ ಪರ್ಷಿಯನ್ನರ ಧಾರ್ಮಿಕ ಗ್ರಂಥವಾದ 'ಜೆಂಡ್ ಅವೆಸ್ತ'ದಲ್ಲಿ ಬರುವ 'ಅಗ್ನಿ ಆರಾಧನೆ'ಯ ಸ್ಥೂಲ ಸಾಮ್ಯ ಸೋಜಿಗವನ್ನು ಉಂಟುಮಾಡಿತು. ನಮ್ಮ ದೇಶದ ದೈವತಕಥೆಗಳ ಅಥವಾ ಯಾವುದೇ ಧಾರ್ಮಿಕ ಗ್ರಂಥಗಳ ಆಶಯಕ್ಕೂ ತತ್ಸಮಾನ ಕಾಲದಲ್ಲಿದ್ದ ಇತರೇತರ ಧಾರ್ಮಿಕ ಗ್ರಂಥಗಳ ಆಶಯಕ್ಕೂ ಇರುವ ಸಂಬಂಧವನ್ನು ಬಹಳ ಸ್ಥೂಲವಾಗಿ ಗ್ರಹಿಸುತ್ತ ಬಂದರು. ಆದರೆ, ಸಾಂಸ್ಕೃತಿಕ ಸ್ತರಗಳಲ್ಲಿರುವ ಸೂಕ್ಷ್ಮಭೇದ ಅರ್ಥವಾಗಲಿಲ್ಲ. ಉದಾ: ಋಗ್ವೇದದಲ್ಲಿ ಬರುವ ದೇವತಾ ಪ್ರತಿಮೆಗಳಲ್ಲಿರುವ ವೈಷಮ್ಯ, ಆಕೃತಿ-ಆಶಯಗಳ ವ್ಯತ್ಯಾಸ; ಇಂದ್ರ, ವರುಣ, ಅಗ್ನಿ, ಜಾತವೇದ ಇತ್ಯಾದಿ ದೇವತಾಪ್ರತಿಮೆಗಳು ನಷ್ಟವಾಗಿ ವಿಷ್ಣು, ನಾರಾಯಣ, ಶಿವ ಪ್ರತಿಮೆಗಳು ಪ್ರತಿಷ್ಠೆಯನ್ನು ಪಡೆಯುವ ವಿಚಾರಗಳನ್ನು ನನ್ನ ಮೇಲಿನ ಮಾತಿಗೆ ಆಧಾರವಾಗಿ ತಿಳಿಯಬಹುದು. ಇದರಿಂದ ಆ ಕಾಲದ ವಿದ್ವಾಂಸರಿಗೆ ಆಗಿರುವ ಸಾಂಸ್ಕೃತಿಕ ಪಲ್ಲಟಗಳು ಸಮರ್ಪಕವಾಗಿ ಅರಿವಿಗೆ ಬರಲಿಲ್ಲವೆಂದು ಹೇಳಿದರೆ ತಪ್ಪಾಗಲಾರದೆಂದು ನಾನು ಭಾವಿಸುತ್ತೇನೆ.

ಬಹುಮಟ್ಟಿಗೆ, ಹರಪ್ಪ ಸಂಸ್ಕೃತಿಯಲ್ಲಿ ದೊರಕಿರುವ ಸಾಮಗ್ರಿಗಳನ್ನು ಗಮನದಲ್ಲಿ ಇಟ್ಟುಕೊಂಡೂ ಸಹ, ಇಂದಿನ ಅನೇಕ ಆಚಾರ-ವಿಚಾರಗಳಿಗೆ 'ಋಗ್ವೇದ'ವೇ ಪ್ರಾಚೀನವಾದ ಸಾಮಗ್ರಿಯಾಗಿದೆಯೆಂದು ಹೇಳಬಹುದು. ಬದುಕಿನ ಧೋರಣೆಗಳು, ತತ್ತ್ವಗಳು, ಆದರ್ಶಗಳು, ಆಚರಣೆಗಳು, ಪ್ರಚಲಿತವಾದ ಋಗ್ವೇದದಿಂದಲೇ ಪಡಿಮೂಡಿದವುಗಳಾಗಿವೆಯೆಂದು ಹೇಳಬಹುದು. ವೇದಪೂರ್ವ ಸಿಂಧೂಸಂಸ್ಕೃತಿಯ ಪ್ರಭಾವ ಎಷ್ಟು ಪ್ರಮಾಣದಲ್ಲಿ ವೇದವಿಹಿತ ಆಚರಣೆ ಮತ್ತು ತಾತ್ತ್ವಿಕ ಸ್ತರಗಳಲ್ಲಿ ಸೇರಿಕೊಂಡಿವೆಯೋ ಇನ್ನೂ ಸಾಧಾರವಾಗಿ

ತಿಳಿಯುವುದಕ್ಕೆ ಸಾಧ್ಯವಾಗಿಲ್ಲ. ಇಂದಿನ ಜೀವಿತವಿಧಾನದ ಸೂಕ್ಷ್ಮಾಂಶದ ರೂಪು ರೇಷೆಯನ್ನು ಪ್ರಚಲಿತ ಋಗ್ವೇದದಲ್ಲಿ ಕಾಣಬಹುದಾಗಿದೆ. ಪ್ರಚಲಿತ ಋಗ್ವೇದ ವೆಂದು ಹೇಳಿದೆ ; ಇದರ ಅರ್ಥ—ಈ ಋಗ್ವೇದದಲ್ಲಿ ಸೌರದೇವತೆಗಳಿಗೆ ಸ್ಥಾನ ಇದೆ ಯೆಂದು ವ್ಯಕ್ತವಾಗಿ ಹೇಳಿದ್ದರೂ ಅವೆಲ್ಲವೂ ಚಾಂದ್ರದೈವತಗಳಾಗಿ ಮಾರ್ಪಟ್ಟಿವೆ. ಇಂದ್ರ ಋಗ್ವೇದದ ಪ್ರಧಾನ ದೈವತವಾದರೂ ಅವನಿಗೆ ಸ್ಥಾನವಿಲ್ಲ. ಅವನ ಸ್ಥಾನವು ಭ್ರಷ್ಟವಾಗಿದೆ. ಪ್ರಜ್ಞಾ ಪ್ರಚೋದಕನಾದ ವಿಶ್ವಾಮಿತ್ರನನ್ನು 'ಪುರೋ-ಹಿತ' ಪದದಿಂದ ಕೆಳಕ್ಕೆ ತಳ್ಳಿದೆ. ದಿವೋದಾಸನಿಂದ ವಂದಿತನಾದ, ದಕ್ಷಿಣಕಪರ್ದ ನೆಂಬ ವಿಶೇಷಣ ಪಡೆದಿರುವ ವಸಿಷ್ಠ ಪ್ರಚಲಿತ ಋಗ್ವೇದದ ಪ್ರಧಾನವ್ಯಕ್ತಿಯಾಗಿ ದ್ದಾನೆ. 'ಋತಂ ಬೃಹತ್' 'ಋತಂ ಚ ಸತ್ಯಂ ಚ ಅಭೀದ್ಧಾತ್' ಎಂದು ಹೇಳುವ ಋಗ್ವೇದದಲ್ಲೆ 'ಏಕಂ ಸತ್' ಭೂಮಿಕೆಗೆ ಎಡೆ ದೊರೆದೆ. ಅಂಭೃಣಿ ದೇವತೆಯು ಅಟ್ಟಹಾಸದಿಂದ ಮೆರೆಯುತ್ತಾ ಕುಮಾರಿ ಮಾತೆಯಾಗಿದ್ದಾಳೆ. 'ಅದಿತಿ'ಯು ದೇವಮಾತೆಯಾಗಿ ವಿರಾಜಮಾನಳಾಗಿದ್ದಾಳೆ. 'ಇಂದ್ರ' ಪ್ರಕಾಶರೂಪ ದೈವತ. ಅವನು ಇಂದ್ರಿಯ ಪಾತಳಿಗೆ ಬಂದದ್ದು ಆಗಿದೆ. 'ಮನು'ವಿಗಿರುವ ಪ್ರಾಧಾನ್ಯವು ತಪ್ಪಿಹೋಗಿದೆ. ವ್ಯಕ್ತಿಮುಕ್ತಿಯಾಗುವ ; ರಾತ್ರಿಸಮಯಾಚಾರದ ಲೈಂಗಿಕೋ-ನ್ಮತ್ತತೆಯಲ್ಲಿ ಬದುಕುವ ಜೀವಿತವಿಧಾನಕ್ಕೆ ಇಂದಿನ ಪ್ರಚಲಿತ ಋಗ್ವೇದ ಕಾರಣ ವಾಗಿದೆ.* ಆದರೆ, ಋಗ್ವೇದಕ್ಕೆ ತತ್ಸಮಾನವಾದ ಕಾಲದಲ್ಲೆ ಇದ್ದ ಜೇಂಡ್ ಅವೆಸ್ತ ದಲ್ಲಿ ಜೀವನರೀತಿಗೆ ಮಹತ್ವ ಇದೆ. ಆಯಾ ದೈವತ ಪ್ರತಿಮಾ ಸಂಕೇತಗಳಲ್ಲಿ ಇದ್ದ ಆಶಯವು ಪತನಗೊಂಡಿವೆ ಅಥವಾ ಪಲ್ಲಟವಾಗಿವೆ. ಸಂಕೇತಗಳಲ್ಲಿ ಪಲ್ಲಟವಾದ ದೆ ಯೆಂದರೆ ಆ ಕಾಲದ ಜನರ ಮನೋಭಾವನೆಯ–ಜೀವನವಿಧಾನದ ಪಲ್ಲಟ ಎಂದೇ ನಾವು ತಿಳಿಯಬಹುದು. ಯಾವನು, ಯಾವ ದೈವತವನ್ನು ಉಪಾಸಿಸುವನೋ ಆ ದೇವತಾಸ್ವರೂಪ ಹಾಗೂ ಭಕ್ತನ ಸ್ವರೂಪವು ಏಕಕಾಲಕ್ಕೆ ನಮ್ಮ ಮುಂದೆ ಬಂದು ನಿಲ್ಲುತ್ತದೆ. ಅರ್ನೆಸ್ಟ್ ಕ್ಯಾಸಿರರ್ ಎಂಬ ವಿದ್ವಾಂಸನ ಮಾತಿನಲ್ಲೇ ಹೇಳ ಬಹುದಾದರೆ ; The whole History of the Hindus, Greeks, etc. was (is) implicit in their gods ಎಂದು ಹೇಳಿದ್ದಾನೆ.

ಜನಾಂಗದ ಸಾಂಸ್ಕೃತಿಕ ಇತಿಹಾಸವನ್ನು ಈ ಇತಿಹಾಸಕ್ಕೆ ಕಾರಣವಾಗಿರುವ ತತ್ತ್ವಜ್ಞಾನವನ್ನು ಆ ಸಾಂಸ್ಕೃತಿಕ ಸ್ತರಗಳ ದೈವತಕಥೆಗಳ ಹುಟ್ಟು ಮತ್ತು ಬೆಳವಣಿಗೆಯಿಂದಲೇ ಉಗಮಗೊಂಡಿರುತ್ತದೆ ಎಂಬ ಸತ್ಯ ಜಾಗತಿಕ ಸಾಂಸ್ಕೃತಿಕ ಸಂದರ್ಭಕ್ಕೂ ಅನ್ವಯವಾಗುವ ಮಾತೆಂದು ಭಾವಿಸದೆ ಗತ್ಯಂತರವಿಲ್ಲ. ಈಗ ಭಾರತದಲ್ಲಿ ಬಹುತೇಕವಾಗಿ ನಡೆದಿರುವ ಅಧ್ಯಯನವೆಲ್ಲ ದಿವ್ಯಾಧ್ಯಾತ್ಮದೃಷ್ಟಿ

* ಅನುಬಂಧದಲ್ಲಿರುವ 'ಭಗವದ್ಗೀತೆಗೆ ಮೆಚ್ಚಿಕೆಯ ವೇದ ಯಾವುದು ?' ಲೇಖನವನ್ನು ನೋಡಬಹುದು.

ಯಿಂದಲೇ. ಹೀಗೆ ಮೇಲೆ ನಾನು ಸೂಚಿಸಿದಂತೆ ಸಾಂಸ್ಕೃತಿಕ ಸ್ತರಗಳ ಪಲ್ಲಟಗಳ ನೆಲೆಯಲ್ಲಿ ತುಲನಾತ್ಮಕ ವ್ಯಾಸಂಗ ಆಗದೆ ಇರುವ ಕೊರತೆ ತುಂಬಾ ಇದೆ. ಭಾರತ ದಲ್ಲಂತೂ (ಕೆಲವು ಅಪವಾದಗಳನ್ನು ಬಿಟ್ಟು) ಇಂದಿನವರೆಗೂ ಗತಾನುಗತಿಕವಾಗಿ ನಡೆದು ಬಂದಿರುವ ಅಧ್ಯಯನ ಸಾಂಪ್ರದಾಯಿಕ ಹಾಗೂ ದಿವ್ಯಾಧ್ಯಾತ್ಮ ನಿಲುಮೆಯ ದೃಷ್ಟಿಯಿಂದಲೇ. ನಾನು ಉಪನ್ಯಾಸದ ಆರಂಭದಲ್ಲಿಯೇ ತಿಳಿಸಿದ್ದಂತೆ 'ದಿವ್ಯಾಧ್ಯಾತ್ಮದೃಷ್ಟಿ'ಯ ಅಧ್ಯಯನವು ಸಾಂಸ್ಕೃತಿಕ ಇತಿಹಾಸದ ಪೂರ್ಣಸ್ವರೂಪ ವನ್ನು ನಮ್ಮ ಮನಸ್ಸಿಗೆ ತಂದುಕೊಡಲಾರದು. ಇದಕ್ಕೆ ಈ ಕೆಳಗಿನ ಅಧ್ಯಯನದ ವಿಧಾನಗಳನ್ನು ಬಳಸಿಕೊಂಡರೆ ಸರಿಹೊಂದೀತೇದು ನಾನು ಭಾವಿಸಿದ್ದೇನೆ. ಕನ್ನಡ ದಲ್ಲಿ ಡಾ॥ ಶಂ. ಬಾ. ಅವರು ಸರಿಸುಮಾರಾಗಿ ಈ ವಿಧಾನವನ್ನು ಅನುಸರಿಸಿದ್ದಾರೆ.

1. ಸಾಂಸ್ಕೃತಿಕ ಪರಿಭಾಷೆಗಳ ಅಧ್ಯಯನ ಆಗಬೇಕು. ಈ ಪರಿಭಾಷೆಗಳ ಅಧ್ಯಯನದಲ್ಲಿ ಜಾಗತಿಕ ಪರಿಭಾಷೆಗಳ ತುಲನಾತ್ಮಕ ಅಧ್ಯಯನದ ಶಿಸ್ತು ಇರಬೇಕು.
2. ಜಾಗತಿಕ ಸಾಹಿತ್ಯದಲ್ಲಿ ದೊರಕುವಂತಹ ದೈವತಕಥೆ (Myths) ಗಳಲ್ಲಿ ಅಡಗಿರುವ ಪ್ರತಿಮಾಕಲ್ಪನೆ ಹಾಗೂ ಸಂಕೇತಗಳ ಅಧ್ಯಯನ ತುಲನಾತ್ಮಕವಾಗಿ ಆಗಬೇಕು.
3. ಮೇಲೆ ತಿಳಿಸಿದ ಈ ನೆಲೆಗಳಿಗೆ ಇತಿಹಾಸಶಾಸ್ತ್ರ, ತೌಲನಿಕ ಭಾಷಾಶಾಸ್ತ್ರ ಹಾಗೂ ಸಂಪ್ರದಾಯಗಳ ಅವಶೇಷಶಾಸ್ತ್ರ—ಈ ಎಲ್ಲ ಶಾಖೆಗಳ ನೆರವನ್ನು ಪಡೆಯಬಹುದು.

ಮೇಲೆ ತಿಳಿಸಿರುವ 'ನೆಲೆ'ಗಳಿಂದ ಸಾಂಸ್ಕೃತಿಕ ಸ್ತರಗಳ ಅಧ್ಯಯನ ಆಗಬೇಕು. ನಾನು ಮುಂದೆ ಪ್ರಸ್ತಾವಿಸುವ ಹಾಗೂ ಇಲ್ಲಿಯವರೆಗೂ ಪ್ರಸ್ತಾಪಿಸಿರುವ ಮಾತು ಗಳಿಗೆ ಮತ್ತು ವಿಚಾರಧಾರೆಗೆ ಪ್ರಮುಖವಾದ ಈ ನೆಲೆಗಳು ಸಂಶೋಧನಾ ವಿಧಾನದ ಸ್ವರೂಪವೂ ಆಗಿರುತ್ತದೆ. ಯಾವುದೊಂದು ಅರ್ಥವನ್ನು ನಾವು ಹಚ್ಚ ಬಾರದು. ಆ ಅರ್ಥವು ತುಲನಾತ್ಮಕ ವಿವರಗಳಿಂದಲೇ ಕಣ್ಣಳತೆಯಲ್ಲಿ ಬರಬೇಕು. ಆದರೆ, ತುಲನಾತ್ಮಕ ವಿವರಗಳಿಂದಲೇ ಮೈದೋರುವ ಅರ್ಥದಲ್ಲಿ ಈ ಭಯಕ್ಕೆ (ಸಂಶೋಧನಾ ಭಯಕ್ಕೆ) ಸ್ಥಾನ ಇಲ್ಲವೆಂದು ದೃಢವಾಗಿ ಹೇಳಬಹುದು. ಯಾವು-ದೊಂದರ ಪದದ ಅರ್ಥವು ನಾನಾ ನೆಲೆಗಳ ಮೂಲಕ ನಮ್ಮ ಕಣ್ಣೆದುರಿಗೆ ಅರ್ಥ ಧಾರಣೆ ಆಗಬೇಕೇ ಹೊರತು ಅದರ ಅರ್ಥ ಇದು ಅಥವಾ ಇದೇ ಇರಬೇಕೆಂಬ ಸ್ವಯಂಕಲ್ಪಿತ ಆರೋಪಿತಾರ್ಥ ಸಂಶೋಧನೆಯ ಮಾರ್ಗವಲ್ಲ. ಮೌಲ್ಯಗಳ ಶೋಧನೆಯಲ್ಲೂ ಇದೇ ಥರದ ಎಚ್ಚರ ಇರಬೇಕು. ಇಲ್ಲದಿದ್ದರೆ ಅಪಮೂಲ್ಯಗಳೇ ಸಾರ್ವತ್ರಿಕ ಮೂಲ್ಯಗಳಾಗಿ ನಮ್ಮ ಮುಂದೆ ನಿಲ್ಲಬಹುದು.

**ಮನು : ವೈವಸ್ವತ**

ನಮ್ಮ ದೇಶದಲ್ಲಿ 'ಸಂಪ್ರದಾಯಗಳ ಅವಶೇಷಶಾಸ್ತ್ರ'(Antique lore)ದ ಪರಿಚಯ ಇನ್ನೂ ಆಗಿಲ್ಲ. ಡಾ॥ ಶಂ. ಬಾ. ಜೋಶಿಯವರು ಇದಕ್ಕೆ ಅಪವಾದವಾಗಿ ಉಳಿದಿದ್ದಾರೆ. ಇದರ ಮಹತ್ವವನ್ನು ಮನಗಂಡವರು ಕಡಮೆ. ಸಂಪ್ರದಾಯಗಳಲ್ಲಿ ಅಳಿದುಳಿದು ಬಂದಿರುವ ಕೆಲವು ಸಂಗತಿಗಳು ವಾಸ್ತವ ಐತಿಹಾಸಿಕ ಸ್ವರೂಪದ ವಿವರಗಳನ್ನು ತಂದುಕೊಡುವಂಥವುಗಳು ಆಗಿರುತ್ತವೆ. ನಮ್ಮ ನಡವಳಿಯಲ್ಲಿ ಉಳಿದಿರುವ ಅನೇಕ ಆಚರಣೆಗಳನ್ನು ಈ ಶಾಸ್ತ್ರದ ಪರಿಶೀಲನೆಯ ಮೂಲಕ ಅವುಗಳ ವಾಸ್ತವ ಸ್ವರೂಪ ಯಾವುದೆಂದು ತಿಳಿಯಬಹುದು. ಮನು : ವೈವಸ್ವತನ ಬಗೆಗೆ ಉಳಿದಿರುವ ನೆನಪನ್ನು ತಂದುಕೊಡುವಂಥದ್ದು ದರ ವಿಚಾರವಾಗಿ ಈ ಮೇಲಿನ ಮಾತನ್ನು ಹೇಳುತ್ತಿದ್ದೇನೆ. ಬ್ರಾಹ್ಮಣರಲ್ಲಿ ಭಾರತಾದ್ಯಂತ ಆಹ್ನಿಕದ ಸಮಯದಲ್ಲಿ ಹೇಳುವ 'ಸಂಕಲ್ಪ'ದಲ್ಲಿ 'ವೈವಸ್ವತ'ನ ನೆನಪು ಅಚ್ಚಳಿಯದೆ ಉಳಿದಿದೆ. ಸಂಕಲ್ಪದ ಪೂರ್ಣಪಾಠ ಹೀಗಿದೆ :

> ಶುಭೇ ಶೋಭನೇ ಮುಹೂರ್ತೇ ಆದ್ಯ ಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣತೀರೇ, ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ವ್ಯವಹಾರಿಕೇ ಚಾಂದ್ರಮಾನೇನ ಅಸ್ಯ ಪ್ರಭವಾದಿ ಷಷ್ಟಿ ಸಂವತ್ಸರಾಣಾಂ ಮಧ್ಯೇ ಶ್ರೀ ಕ್ರೋಧನ ನಾಮ ಸಂವತ್ಸರೇ ದಕ್ಷಿಣಾಯನೇ ಮಾರ್ಗಶಿರಮಾಸೇ ಶುಕ್ಲಪಕ್ಷೇ ಏಕಾದಶಿ ಶುಭತಿಥೌ ಭಾನುವಾಸರ ಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂ ಗುಣ ವಿಶಿಷ್ಟಾಯಾಂ ಶುಭತಿಥೌ ಮಮ ಉಪಾತ್ತ ದುರಿತಕ್ಷಯದ್ವಾರಾ ಪ್ರತ್ಯವಾಯ ದೋಷ ಪರಿಹಾರಾರ್ಥಂ ಶ್ರೀ ವಿಷ್ಣುಪ್ರೇರಣಯಾ ಶ್ರೀ ವಿಷ್ಣುಪ್ರೀತ್ಯರ್ಥಂ ಪೂರ್ವಾಹ್ಣಂ ಸಂಧ್ಯಾಖ್ಯಂ ಕರ್ಮೋಪಾಸ್ಯೇ.

ಭಾರತಾದ್ಯಂತ ಬಹುತೇಕವಾಗಿ ಕೇಳಬರುವ ಮಂತ್ರ ಇದು. ಈ ಸಂಕಲ್ಪ ಮಂತ್ರದಲ್ಲಿ 'ವೈವಸ್ವತ ಮನ್ವಂತರ'ದ ಅವಶೇಷ ಉಳಿದಿದೆ. ನಾವು ವೈವಸ್ವತ ಮಾನವ ಸಂಪ್ರದಾಯದ ಉತ್ತರಾಧಿಕಾರಿಗಳು ಎಂಬ ಅಂಶ ಇಲ್ಲಿ ಗಮನಾರ್ಹ. ಅದರೊಂದಿಗೆ ವೈವಸ್ವತ ಮನ್ವಂತರದಲ್ಲಿ ಹತ್ತಿಕ್ಕುವ ಹಾಗೆ 'ಶ್ವೇತವರಾಹಕಲ್ಪೇ' ಎಂಬ ಪರಿಭಾಷೆಯೂ ಇದೆ. 'ಕಲ್ಪ' ಮತ್ತು 'ಮನ್ವಂತರ' ಇವೆರಡು ಪರಿಭಾಷೆಗಳಿಗೂ ಸಾಂಕೇತಿಕ ಅರ್ಥದ ಆಶಯದಲ್ಲಿ ಭಿನ್ನವಿದೆ. ಕಲ್ಪ ಇದು ಕ್ಲೃಪ್ ಧಾತು ಜನ್ಯವಾದ ಪದ. 'ಬಹುಧಾ ಕಲ್ಪಯಂತಿ' ಎಂಬ ವೇದದ ಮಾತನ್ನು ನಾವು ಇಲ್ಲಿ ನೆನಪಿಸಿಕೊಳ್ಳಬೇಕು. ವೈವಸ್ವತ ಮನ್ವಂತರವನ್ನು ಹೇಳಿಯೂ ಅದನ್ನು ಹತ್ತಿಕ್ಕುವ

ಆಶಯವೂ ಇದೆ. 'ದ್ವಿತೀಯ', 'ಚಾಂದ್ರಮಾನ', 'ಶ್ರೀ ವಿಷ್ಣುಪ್ರೇರಣಯಾ ಶ್ರೀ ವಿಷ್ಣು ಪ್ರೀತ್ಯರ್ಥಂ'— ಈ ಮಾತುಗಳಲ್ಲಿ ಪ್ರಚಲಿತ ಋಗ್ವೇದ ಪೂರ್ವದ ವೈವಸ್ವತ ಮನು ಮಾನವ ಸಂಸ್ಕೃತಿಯ ಅರ್ಥವನ್ನು ಪಲ್ಲಟಗೊಳಿಸಿರುವ ಸೂಚನೆ ಕಂಡುಬರುತ್ತದೆ. ಇಷ್ಟೆಲ್ಲದರ ನಡುವೆಯೂ 'ವೈವಸ್ವತಮನು'ವಿನ ನೆನಪು ಮಾಡಿಕೊಳ್ಳುವ ಚಿಹ್ನೆ ಮಾತ್ರ ಎಂತೋ ಉಳಿದಿದೆ. ಕಾಶ್ಮೀರದಿಂದ ಹಿಡಿದು ಕನ್ಯಾಕುಮಾರಿಯವರೆಗೂ 'ವೈವಸ್ವತಮನು'ವಿನ ಉದ್ಘೋಷ ಕೇಳಬರುತ್ತದೆ. ಆದರೆ, ತಾವು ಅತ್ಯುತ್ತಮ ಸಂಪ್ರದಾಯಕ್ಕೆ ಸೇರಿದವರೆಂಬ ಅಂಶ ಮಾತ್ರ ಮರೆತಿದ್ದಾರೆ.

ನಾನು ಈ 'ಸಂಕಲ್ಪ' ಮಂತ್ರವನ್ನು ಏತಕ್ಕೆ ಹೇಳಿದೆನೆಂದರೆ ನಡೆವಳಿ ಅಥವಾ ನಮ್ಮ ಆಚಾರದಲ್ಲಿ ಇರುವ 'ವೈವಸ್ವತಮನು'ವಿನ ನೆನಪು ಮಾಡಿಕೊಳ್ಳುವ ಚಿಹ್ನೆ ಮಾತ್ರ ಎಂತೋ ಉಳಿದಿದೆ. ಹೇಳುವ ಅರ್ಥ ಏನು ? ಇದಕ್ಕೆ 'ಸಂಪ್ರದಾಯಗಳ ಅವಶೇಷಶಾಸ್ತ್ರ'ದ ಸೂತ್ರದಂತೆ ಯಾವುದೊಂದೂ ನೆನಪೂ ಕೂಡ ಇತಿಹಾಸದ ವಾಸ್ತವವನ್ನು ಅರಿಕೆಗೆ ತಂದುಕೊಡುತ್ತದೆ. 'ಜೆಂಡ್ ಅವೆಸ್ತ'ದಲ್ಲೂ 'ವೀವನ್-ಹ್ವನ್ತ್' (VIVANHVANT) ಪರಿಭಾಷೆ ಇದೆ. ಅದರ ನೆನಪನ್ನು ಅವರೂ ತಂದುಕೊಂಡಿದ್ದಾರೆ.[1] ವೇದ ಮತ್ತು ಅವೆಸ್ತಗಳಲ್ಲಿ ಇರುವ ದೈವತನಾಮಗಳ ತುಲನೆ ಅಭ್ಯಸನೀಯವಾಗಿದೆ. ಮೆಕಡೊನಲ್ "We have seen that the evidence of the Avesta cannot be ignored by the student of vedic mythology[2] ಎಂದು ಹೇಳುವ ಮಾತು ಮನನೀಯವಾದುದು. ವೇದಭಾಷೆಯನ್ನು ಬಹುಮಟ್ಟಿಗೆ ಹೋಲುವ ಅವೆಸ್ತದ ಅನೇಕ ಭಾಗಗಳನ್ನು ಪದಪದಶಃ ಭಾಷಾಂತರ ಮಾಡಬಹುದು. ಎರಡು ಭಾಷೆಗಳಿಗೂ ಇರುವ ಹೋಲಿಕೆಯನ್ನು ಮೆಕಡೊನಲ್ ಆದಿಯಾಗಿ ನಮ್ಮ ದೇಶದ ವಿದ್ವಾಂಸರೂ ಕ್ವಚಿತ್ತಾಗಿ ಅಧ್ಯಯನ ಮಾಡಿದ್ದಾರೆ. ಆದರೆ, ಸಾಂಕೇತಿಕ ಆಶಯವನ್ನು ಗ್ರಹಿಸುವಷ್ಟು ಅಧ್ಯಯನ ಮಾತ್ರ ಆಗಿಲ್ಲ.

ಭಾರತೀಯ ಸಂಸ್ಕೃತಿಯ 'ಆದ್ಯ' ಎಂದು ಹೇಳುವ ಈ 'ವೈವಸ್ವತ ಮನು'ವನ್ನು ಭವಭೂತಿಯೂ ತನ್ನ 'ಉತ್ತರರಾಮಚರಿತ'ದಲ್ಲಿ ಸಾಂದರ್ಭಿಕವಾಗಿ ನೆನಪಿಸಿದ್ದಾನಷ್ಟೇ. 'ಭಗವತೋ ವೈವಸ್ವತಃ ಆದ್ಯಃ ಮನುಃ' (6–18) ಎಂಬ ಅವನ ಮಾತೂ ಕಾಳಿದಾಸನ 'ವೈವಸ್ವತೋ ಮನುರ್ನಾಮ ಮಾನನೀಯೋ ಮನೀಷಿಣಾಂ' (ರಘುವಂಶ (1–11) ಎಂಬ ಮಾತೂ ಮಾನವ ಸಂಸ್ಕೃತಿಯ ಮೂಲಪ್ರಚೋದಕನೆಂಬುದನ್ನು ಐತಿಹಾಸಿಕವಾಗಿ ಗಮನಕ್ಕೆ ತಂದುಕೊಡುವುದಾಗಿದೆ. 'ವಿಷ್ಣುಸಹಸ್ರ

---

1. ವಿವರಣೆಗೆ ಓದಿರಿ : ರ್ಹಿಸೋ ಮಹಾಶಯನ 'Ancient religion in India' (Vedic and Avestan comparative gods.)

2. Vedic Mythology–(A. A. Macdonell, Page : 7)

ನಾಮು'ದ ಎರಡನೇ ಶ್ಲೋಕದ 'ಮಾನವಾಃ' ಎಂಬ ಪದಕ್ಕೆ ಶಂಕರಾಚಾರ್ಯರು ಹೇಳುವ ಅರ್ಥವಿವರಣೆ ಗಮನಾರ್ಹ. 'ಮಾನವಾಃ, ಮನುಸುತಾಃ' ಎಂದು ಅವರು ಹೇಳುವ ಅರ್ಥ. ಮಾನವರೆಲ್ಲರೂ ಮನುವಿನ ಮಕ್ಕಳು. ಮನನ-ಚಿಂತನದ ಮೂಲಕ ಬದುಕುವವರು ಎಂಬ ಲಕ್ಷ್ಯಾರ್ಥವೂ ಇಲ್ಲಿ ಕಾಣಬರುತ್ತದೆ. ಮಾನವವಿಕಾಸಕ್ರಮದ ಒಂದು ಸ್ಥೂಲ ವಿವರಣೆಯನ್ನು ಶಂಕರಾಚಾರ್ಯರ ಮಾತು ಗಮನಕ್ಕೆ ತಂದುಕೊಡುತ್ತದೆ.

ವಿವಸ್ವಾನ್ > ವೈವಸ್ವತ ಈ ಪಾರಿಭಾಷಿಕ ಪದಕ್ಕೆ 'ಶಬ್ದಾರ್ಥಕಲ್ಪದ್ರುಮ' ವೆಂಬ ಸಾಂಪ್ರದಾಯಿಕ ಕೋಶ ಏನೆಂದು ಹೇಳುತ್ತದೆಂಬುದನ್ನು ಪರಿಶೀಲಿಸೋಣ:

ವಿವಸ್ವಾನ್ (ಪುಂ) ವಿಶೇಷೇಣ ವಸ್ತೇ ವಿ + ವಸ್ + ಕ್ರಿಪ್, ವಿವಸ್ ತೇಜ್ಯೋಽಸ್ಯಾಸ್ತೀತಿ ವಿವಸ್ + ಮತುಮ್, ಮಸ್ಯ ವಃ; ತಸ್ಯಮತ್ಯರ್ಥೇ ಸೂರ್ಯಃ ಇತಿ ಅರ್ಥಃ. ಅರ್ಕವೃಕ್ಷಃ (ಸೂರ್ಯವೃಕ್ಷ) ಎಂದು ಅಮರ ಹೇಳುತ್ತದೆ. ವಿವಸ್ವಾನ್ ಎಂಬುದು ಒಂದು ದೇವತಾವಾಚಕಶಬ್ದ ಎಂದು ಮೇದಿನೀಕೋಶ ಹೇಳುತ್ತದೆ. 'ಅರುಣಃ' ಎಂದು 'ಶಬ್ದರತ್ನಾವಳೀ' ತಿಳಿಸುತ್ತದೆ. 'ಅಜಯಃ' ಎಂಬ ಅಪ್ರಕಟಿತ ಸಾಂಪ್ರದಾಯಿಕ ಕೋಶ 'ವೈವಸ್ವತ ಮನು' ಎಂದು ಉದ್ಘೋಷಿಸುತ್ತದೆ. 'ಮನುಷ್ಯ' ಎಂದು ಯಾಸ್ಕನ ನಿಘಂಟು ತಿಳಿಸುತ್ತದೆ. 'ವಸ ನಿವಾಸೇ ಇತ್ಯಸ್ಯಾತ್ ಅನ್ಯೇಭ್ಯೋ ಪಿ ದೃಶ್ಯಂತೇ; ವಿವಿಧಂ ವಸನಂ ವಿವಃ ತದ್ವಂತೋ ವಿವಸ್ವಂತಃ ಸರ್ವಸ್ಯಾಪಿ ಮನುಷ್ಯಸ್ಯ ಯತ್ಕಿಂಚಿತ್ ವಿವಸನಮಸ್ತಿ ಇತಿ ತಟ್ಟೀಕಾ'3.

ಈ ಮೇಲಿನ ಕೋಶದ ವಿವರಣೆಯಿಂದ 'ಎಲ್ಲಾ ಕಡೆಯೂ ಹರಡುವ' ಎಂಬುದು 'ಸಂರಕ್ಷಿಸುವ' ಎಂಬ ಅರ್ಥ ಹೊರಡುತ್ತದೆ; ಮನುಷ್ಯನೆಂಬುದೂ ಸಹ.

ಮೇಲೆ ಹೇಳಿದ ಸಂಕಲ್ಪಮಂತ್ರಭಾಗದ ಕಡೆಗೆ ಮತ್ತೆ ತಿರುಗೋಣ. ಅಲ್ಲಿ 'ಸ್ವಾಯಂಭುವ'ನ ಉಲ್ಲೇಖ ಇಲ್ಲದಿರುವುದನ್ನು ಪ್ರಾಧಾನ್ಯವಾಗಿ ಗಮನಿಸಬೇಕು. 'ಸ್ವಾಯಂಭುವ ಮನು' ಎಂದು ಸಾಂಪ್ರದಾಯಿಕವಾಗಿ ಕರೆಯುವುದು ಮಾತ್ರ 'ಮನು' ಎಂಬ ಪಾರಿಭಾಷಿಕ ಪದಕ್ಕೆ ಭ್ರಷ್ಟತನ ತಂದುಕೊಟ್ಟಂತೆ ಆಗುತ್ತದೆ. 'ಮನಸ್ಸಿನ ಪಾರ್ಶ್ವದಲ್ಲಿ ಅರ್ಥವಿಚಾರಕ್ಕೆ ಅವಕಾಶವಿದೆ' ಎಂಬುದು ಮಾನವ ಶಾಸ್ತ್ರದ ಸೂತ್ರ ಹೇಗೋ 'ಆಧುನಿಕ ಮಾನಸಶಾಸ್ತ್ರ'ದ ಭೂಮಿಕೆಯೂ ಅದೇ ಆಗಿದೆ. 'ಮನು' ಮಾನವನೇನೋ ಸರಿ. ಇದೊಂದು ವಿಶಿಷ್ಟ ಸಂಕೇತವೆಂದು ಮೊದಲೇ ತಿಳಿಸಿದ್ದೇನೆ. ವಿವಸ್ವಾನ್ ಹಾಗೂ ಮನು ಈ ಎರಡೂ ಪಾರಿಭಾಷಿಕ ಪದವಲ್ಲಿರುವ ಸೂಕ್ಷ್ಮಭೇದವನ್ನು ಗ್ರೀಕ್ ಸಂಸ್ಕೃತಿಯಲ್ಲಿ ಮೈದಳೆದಿರುವ 'Nous and Mind' ಎಂಬುದಕ್ಕೆ ಸಮಾನವಾಗಿದೆ.

---

3 ಶಬ್ದಾರ್ಥಕಲ್ಪದ್ರುಮ—ಕಾಶೀ ಮುದ್ರಣಾಲಯ (ಪುಟ 516)

ಮೇಲಿನ ವಿವಿಧ ಉಲ್ಲೇಖಗಳಿಂದ ವಿವಸ್ವತ್>ವೈವಸ್ವತನು ಭಾರತೀಯ ಪುರಾತನ 'ಮಾನವ ಧರ್ಮ' ರೂಪಿಸಿದವನೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಭಾಷೆ-ಸಂಸ್ಕೃತಿ-ಧರ್ಮ ಇವುಗಳನ್ನು ವ್ಯಕ್ತಿ ಕಲ್ಪಿಸಿರುವಂಥವುದಲ್ಲ. ಈ ಮೂರರಲ್ಲೂ ಅನ್ಯೋನ್ಯಾಶ್ರಯವುಂಟು. ಈ 'ವ್ಯಾಹೃತಿತ್ರಯ'ಗಳ ಹಿನ್ನೆಲೆಯಲ್ಲಿ ಈ ಜೀವನವಿಶ್ವವನ್ನು ಅರ್ಥಾತ್ ಮನು : ವೈವಸ್ವತನ ಬಾಳದಾರಿಯನ್ನು ತಿಳಿಯಲು ಸಾಧ್ಯವಾಗಿದೆ. ಅದರ ಬಗೆಗೆ ಸ್ಥೂಲವಾಗಿಯಾದರೂ ಪರೀಕ್ಷಿಸೋಣ.

ಮನುಷ್ಯ ಮತ್ತು ನರ ಇವೆರಡರಲ್ಲೂ ಸೂಕ್ಷ್ಮವಾದ ಭೇದವುಂಟು. ಮೊದಲನೆಯದು ಪ್ರಜ್ಞಾಪಾತಳಿ; ಎರಡನೆಯದು ಇಂದ್ರಿಯಗಳ ಪಾತಳಿ. ಇದನ್ನು ನಮ್ಮ ಪ್ರಾಚೀನರು ಭೂಃ, ಭುವಃ–ಸ್ವರ್ ಎಂದು ಕರೆದರು. ಮೊದಲ ಭೂಃ-(ನೆಲ) ಭುವಃ (ಆಕಾಶ) ಸ್ವರ್ (ಪ್ರಜ್ಞೆ ಅಥವಾ ನೆಲಮುಗಿಲುಗಳ ಆಚೆಗಿನದು). ಭೂಃ, ಭುವಃ–ಎಂಬುದು ಪಾಶ್ಚಾತ್ಯ ಪರಿಭಾಷೆಯಲ್ಲಿ **Being and Becoming.** ಇದು ನಮ್ಮ ಕಣ್ಣಿಗೆ ಕಾಣುವ ದೃಶ್ಯ—(**Phenomena**), ಅವಾಸ್ತವ, ಉಂಟು – ಇಲ್ಲ ಎಂಬ ಸಂಭ್ರಮವನ್ನು ನಮಗೆ ತಂದುಕೊಡುತ್ತದೆ. ಅದಕ್ಕಾಗಿ ಇದು 'ಇಂದ್ರಿಯಗಳ ಪಾತಳಿ' ಎಂದು ಹೇಳಿದೆ. 'ಪ್ರಾಣಚೇತನ'ದ ಲಕ್ಷಣ ಇದು. ಇದನ್ನು 'ಮೃತ್ಯುತತ್ತ್ವ' ಎಂದು ಹೇಳಿದರೂ ತಪ್ಪಿಲ್ಲ. ಇದರಲ್ಲಿ ಜೀವನ ಮೂಲ್ಯಗಳಿಗೆ ಪ್ರಾಧಾನ್ಯವಿಲ್ಲ. ಆದ್ದರಿಂದ ಈ 'ಪ್ರಾಣಚೇತನ' ಲೋಕವನ್ನು 'ಭೂಃ' (ಅಯಂ ಲೋಕಃ) ಎಂದೂ ಭುವಃ (ಅಂತರಿಕ್ಷಂ) ಎಂದೂ ಕರೆದರು. ಈ ನೆಲ ಮತ್ತು ಮುಗಿಲಿನ ನಡುವಣ ಟೊಳ್ಳು ಇದೆಯಲ್ಲ. ಇದು ಪ್ರಾಣಚೇತನಲೋಕ ಎಂಬ ಕಾರಣದಿಂದ ಇದನ್ನು 'ಮೃತ್ಯುಲೋಕ' ಎಂದು ಕರೆದದ್ದು.

ಈ ಭೌತದೃಶ್ಯ, ಎಂದರೆ : ಜನನ–ಮರಣ (ಭೂಃ–ಭುವಃ) ದಿಂದಾಗಿ ಈ 'ಸ್ಥೂಲ'ದ ಗತಿಯನ್ನು 'ಕಾಲ' ಎಂದು ಹೇಳುವ ಸಾಂಪ್ರದಾಯಕ ವಾಡಿಕೆ ಬಂತು. ಕಾಲ ಎಂದರೆ ಕಪ್ಪು ಎಂಬುದೂ ಕತ್ತಲೂ ಎಂಬುದೂ ಈಗ ಪ್ರಸಿದ್ಧವಾಗಿರುವ ಅರ್ಥ ಅಲ್ಲವೇ ? ಜನನ-ಮರಣ ಸೂಚಕವಾದ ಇದನ್ನು 'ಸಂಭವಚಕ್ರ' ಎಂದು ಹೇಳುವ ಸಾಂಪ್ರದಾಯಿಕ ವಾಡಿಕೆ ಸಹ ಇದೆ. 'ಕಾಲಚಕ್ರ' ಎಂದೂ ಹೇಳುತ್ತಾರೆ. 'ಇಂದ್ರಿಯ ಪಾತಳಿ'ಯ ಈ 'ಕಾಲಚಕ್ರ'ದ ಮೇಲೆ ಬದುಕುವ ಬಾಳುವೆ ಅರ್ಥಶೂನ್ಯ ಎಂಬ ಅರ್ಥವನ್ನು ತಂದುಕೊಡುತ್ತದೆ. ಆದುದರಿಂದ 'ಅಭಾವ'ವೇ ಸ್ಥಾಯಿ ಆಗಿರುವ ಪಾತಳಿ ಇದು. ಈ ಪಾತಳಿಯ ಮೇಲೆ

ಆಹಾರ ನಿದ್ರಾಭಯ ಮೈಥುನಂ ಚ
ಸಮಾನಂ ಏತತ್ ಪಶುಭಿಃ ನರಾಣಾಮ್

ಪ್ರಾಣಿಗಳಿಗೂ ನರರಿಗೂ ಸಮಾನವಾದ ಈ ಪಾತಳಿಯಲ್ಲಿ ಬಾಳುವೆಯು ಜನನ–ಮರಣದ ನಡುವೆ ಮಾತ್ರ ಇರುತ್ತದೆ. ಬೇಟ ಮತ್ತು ಕೂಟಕ್ಕೆ ಪ್ರಾಧಾನ್ಯವಿರುತ್ತದೆ.

ನಾನು ಈ ಮೊದಲೇ ತಿಳಿಸಿದಂತೆ ವಿಕಾಸತತ್ತ್ವದ ಪ್ರಕ್ರಿಯೆಯಲ್ಲಿ ಮಾನವನ ಪ್ರಾದುರ್ಭಾವ ಆಗಿದೆ. ಪ್ರಸಿದ್ಧ ಮಾನವಶಾಸ್ತ್ರಜ್ಞನಾದ ಎ. ಎಲ್. ಕ್ರೋಬರನು ಹೇಳುವ ಹಾಗೆ 'ಮಾನವಸಂಸ್ಕೃತಿ'ಯು (Super organic level) ಅತೀಂದ್ರಿಯ ಪಾತಳಿಯ ಮೇಲೆ ಇದೆ. ಆದರೆ ಇಂದಿನ ಮಾನವನ ಆಚಾರ-ವಿಚಾರಗಳಲ್ಲಿ ಅದು ತದ್ವಿರುದ್ಧವಾಗಿದೆ. ಆತನು ಇಂದ್ರಿಯಗಳ ಪಾತಳಿಯ ಮೇಲೆ ಬಂದಿದ್ದಾನೆ. ಈ ಮಾನವನು ಹಿಂದೆ, ಅಂದರೆ, ಮಾನವ ಪ್ರಾದುರ್ಭಾವ ಸಮಯದಲ್ಲಿ ಅತೀಂದ್ರಿಯ (Super organic) ಪಾತಳಿಯ ನಿಕಟವಾದ ಸಂಪರ್ಕವನ್ನು ಹೊಂದಿದ್ದನು. ಇದಕ್ಕೆ ಪ್ರಮಾಣಗಳು ಇವೆಯೇ ? ಎಂದು ಪ್ರಶ್ನಿಸಿದರೆ ಉಂಟು ಎಂದು ಹೇಳಲು ಸಾಧ್ಯವಿದೆ. ಈ ಮೊದಲೆ ತಿಳಿಸಿದ್ದಂತೆ ವ್ಯಾಹೃತಿಗಳ ಮುಖಾಂತರ ಪ್ರಾಚೀನರು ಇದನ್ನು ಮನಗಂಡಿದ್ದರು. ಭೂಃ (ನೆಲ) ಭುವಃ (ಮುಗಿಲು) ಎಂಬ ಈ 'ಸ್ಥಲ-ಕಾಲ'ದ ಆಚೆಗೆ 'ಸ್ವರ್' ಎಂಬ ಪಾತಳಿ ಇದೆಯೆಂದು ಕಂಡುಕೊಂಡಿದ್ದರು. ಆಕಾಶ ತತ್ತ್ವದ ಪ್ರಕಾಶಯುಕ್ತ ಪಾತಳಿ ಇದೆಂದು ಹೇಳಿದರೆ ತಪ್ಪಾಗಲಾರದು. ಗ್ರೀಕ ಪುರಾತನ ಪೈಥಾಗೊರಾಸನ ಪಂಥದವರೂ ಸಹ ಇದನ್ನು ಒಪ್ಪಿಕೊಂಡಿದ್ದಾರೆ. "As the pythagoreans say that the whole and all things in it are summed up in the number three; for end, middle and beginning give the number of the whole, and their number is triad. Hence we have taken the number from nature as it is one of her laws, and make use of it even in the worship of gods"*

ವೈವಸ್ವತ ಮಾನವಧರ್ಮದಲ್ಲಿ (ಅವೆಸ್ತಾದಂತೆಯೇ) ಮಾನವರೆಲ್ಲರೂ 'ತ್ರಿತಆಪ್ತ್ಯ'ರು. 'ತ್ರಿತ' ಎಂದರೆ ಮೂರನೆಯ 'ಸ್ವರ್' ಪಾತಳಿಯಲ್ಲಿ 'ಆಪ್ತ್ಯ'ರು ಎಂದರೆ ಸಂಬಂಧ ಅಥವಾ ನಿಕಟದಲ್ಲಿ ಇರುವವರು ಎಂಬುದೇ. ಡುಮೆಝಿಲ್ ಎಂಬ ಫ್ರೆಂಚ್ ಸಂಶೋಧಕನಿಗೆ ಜಾಗತಿಕ ಪುರಾತನ ಸಂಸ್ಕೃತಿಗಳು ವಿಭಾಗತ್ರಯದ (Tripartite) ವಿಭಾಗವೇ ಆಗಿವೆಯೆಂದು ತನ್ನ ಒಂದು ಸಂಶೋಧನಾ ಪ್ರಬಂಧ ದಲ್ಲಿ ಮಂಡಿಸಿದ್ದಾನೆ.

ಪ್ರಾಣಚೇತನದ ಪಾತಳಿಯ ಆಚೆಗೆ ಇರುವ ಆಕಾಶತತ್ತ್ವದ ಪ್ರಕಾಶಯುಕ್ತ ಪಾತಳಿಯ ಸಂಪರ್ಕ ಅಥವಾ ಸಂಬಂಧ ಇರುತ್ತಿದ್ದ ಮಾನವರಲ್ಲಿ ಬಗೆಗಣ್ಣು ಅಥವಾ ಪ್ರಜ್ಞಾನೇತ್ರ (ಪ್ರಜ್ಞಾನೇತ್ರೋ ಲೋಕಃ) ಇತ್ತು ಎಂಬುದನ್ನು ಸೂಚಿಸುವ ಪ್ರಮಾಣಗಳು ದೊರೆಯುತ್ತವೆ. 'ಆಪ್ತ್ಯಃ' ಎಂಬ ವಿಶೇಷಣ ಹೊಂದಿರುವ ಮನು >ಮಾನವನನ್ನು ವೈವಸ್ವತ ವಿವಸ್ವಾನ್‌ನ ಅಂಶ ಅಥವಾ ಸಂತಾನ ಎಂದು ಕರೆಯು

* A History of Greek Philosophy–Dr. Guthrie vol-I. P-193.

ತ್ತಿರುವುದರಲ್ಲಿ ಮಾನವನು ಪ್ರಜ್ಞಾಯುಕ್ತ ನೇತ್ರವುಳ್ಳವನು ಆಗಿದ್ದನೆಂಬುದನ್ನು ಗಮನಕ್ಕೆ ತಂದುಕೊಡುತ್ತಿದೆ.

ಇದೇ ಮಾತನ್ನು ಗ್ರೀಕ್ ಮೂಲಗಳಿಂದಲೂ ಪುಷ್ಟಿಗೊಳ್ಳುವಂತಹ ಪ್ರಮಾಣ ಗಳನ್ನು ಹೇಳಬಹುದು. Psyche-Psychology ಎಂಬ ಸಂಕೇತಕ್ಕೆ ಈಗ ಮನಸ್ತತ್ತ್ವ ಅಥವಾ 'ಮಾನವಶಾಸ್ತ್ರ' ಎಂಬ ಅರ್ಥವು ಅಂಟಿಕೊಂಡಿದೆ. ಆದರೆ psyche ಪದದ ಮೂಲಾರ್ಥ ಪ್ರಾಣ, ಉಸಿರು ಎಂಬ ಅರ್ಥವನ್ನು ಹೊದ್ದು ಕೊಂಡಿದೆ. ಪ್ರಾಣ : ಉಸಿರು – ಈ ಸೂಚಕವಾದ 'ಸೈಕಿ' psychology (ಮಾನಸಶಾಸ್ತ್ರ–ಮನಶ್ಶಾಸ್ತ್ರ) ಎಂಬ ಅರ್ಥವು ಆಗತೊಡಗಿದ್ದು ಯಾವಾಗ? ಈ ಅಂಶವು ಈಗ ಬೆಳಕಿಗೆ ಬಂದಿದೆ. ಪೈಥಾಗೋರಾಸ್ ಪಂಥೀಯರ ಪ್ರಭಾವದಲ್ಲಿ 'ಮನಸ್ಸು' ಎಂಬ ನಿಜವಾದ ಮನಸ್ಸೂಚಕ Nous ಸಂಕೇತವನ್ನು ಮೂಲೆಗೊತ್ತಿಸಿ ಪೈಥಾಗೊರಾಸನ ಪಂಥವು psyche/psychology ಎಂಬ ಹೊಸ ಪರಿಭಾಷೆ ಯನ್ನು ರೂಢಿಸಿತೆಂಬುದನ್ನು ಸಾಧಾರವಾಗಿ ಲೋಕದ ಗಮನಕ್ಕೆ ತಂದುಕೊಡುವ ಪರಿಭಾಷಾಕೋಶವೊಂದು ಬಂದಿದೆ.*

ಈ ಜೀವನದಲ್ಲಿ ಹುದುಗಿರುವ ಅರ್ಥ ಮತ್ತು ಮೂಲ್ಯಗಳನ್ನು ಕಂಡು ಗ್ರಹಿಸಿಕೊಳ್ಳಲು ಸಾಮರ್ಥ್ಯವಿರುವ ಮನಸ್ಸು (Nous : Mind) ತನ್ನ ಜೆಲೆಗೆ ಎರವಾಗುವಾಗ ಪ್ರಾಣಕ್ಕೆ ಸಂಬದ್ಧವಾದ ಮನಸ್ಸು ಪ್ರಭಾವಶಾಲಿಯಾಗುವಾಗ ಈ ಮಾನವನು ಇಂದ್ರಿಯಪಾತಳಿಯ ಮೇಲೆ ಬಂದದ್ದು ಹೌದೆಂಬುದನ್ನು ಮೇಲಿನ ವಿವರಣೆಯಿಂದ ಗಮನಕ್ಕೆ ಬಂದಿರಬಹುದು. ನರ : ಸ್ವಾಯಂಭುವ – ಸಂಕೇತವೂ ಭೂಃ ಭುವಃ ವಿಭಾಗದ್ವಯದ ಕಟ್ಟಿನಲ್ಲಿ ಸಿಕ್ಕಿದ್ದರೆ ಮನು : ವೈವಸ್ವತ ವಿಭಾಗ ದ್ವಯದ ಆಚೆಗಿನ 'ಸ್ವರ್' ಪಾತಳಿಯ ಸಂಬಂಧದಲ್ಲಿ ಸದಾ ಇರುತ್ತದೆ.

ಗ್ರೀಕ್ ಸಂಸ್ಕೃತಿಯನ್ನು ಪರಿಗಣಿಸಿ ಹೇಳಿದಂತೆಯೇ ಭಾರತೀಯ ಸಂಸ್ಕೃತಿಯಲ್ಲಿ ಆಗಿರುವ ಈ ಸ್ಥಿತ್ಯಂತರವನ್ನು ಚೆನ್ನಾಗಿ ಮನಸ್ಸಿಗೆ ತಂದುಕೊಡುವಂತಹ ಪ್ರಮಾಣ ಗಳು ದೊರಕುತ್ತಿವೆ. ವೈವತ್ವತ ಮನು > ಮಾನವ ಸಂಪ್ರದಾಯವನ್ನು ಹಿಮ್ಮೆಟ್ಟಿ ಸಲು ಸ್ವಯಂಭೂ > ಸ್ವಾಯಂಭುವ ಹೆಸರಿನ 'ಕೃತಕಮನು' ತಲೆ ಎತ್ತಿ ಪ್ರಜ್ವಲಿ ಸುತ್ತ ನಿಂತಿದ್ದಾನೆ. ಈ 'ಸ್ವಾಯಂಭುವ'ನ ವಿವರಣೆಯನ್ನು ಪ್ರತ್ಯೇಕವಾಗಿ ಮಾಡಿ ಕೊಡುವವನು ಇದ್ದೇನೆ. ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಸ್ವಯಂಭೂ > ಸ್ವಾಯಂಭುವ ಕಾರಣನಾಗಿದ್ದಾನೆಂಬುದು ಮಾತ್ರ ಸತ್ಯವೆಂದು ದೃಢವಾಗಿ ಹೇಳಬಹುದಾಗಿದೆ. ಭಾರತೀಯ ಪರಿಭಾಷೆಯಲ್ಲಿ ಈ ಸ್ಥಿತ್ಯಂತರದ ಬಗ್ಗ ಹೇಳುವುದಾದರೆ 'ಅದ್ಯಃ' ವೈವಸ್ವತ ಮನು > ಮಾನವನ ಮನ್ವಂತರವು ಪ್ರಾರಂಭ ಆಗುತ್ತದೆ. ಆ ನಂತರ ಕೆಲವು ಕಾಲದ ಮೇಲೆ ಸ್ವಯಂಭೂ > ಸ್ವಾಯಂಭುವ (ಚಾಂದ್ರ) ಸಂಪ್ರದಾಯದ

* Dictionary of the History of Ideas, vol IV P-3, Newyork.

ನರ-ನಾರಾಯಣ ಪಂಥವು ತಲೆಯೆತ್ತಿ ಪ್ರತಿಷ್ಠೆ ಪಡೆಯುತ್ತದೆ. ಸೂರ್ಯ: ನಾರಾಯಣ; ಅಗ್ನಿ: ನಾರಾಯಣ ಎಂಬ ಈಗಿನ ಸಂಕೇತಗಳೇ ಈ ಸ್ಥಿತ್ಯಂತರದ ಕಥೆಯನ್ನು ಸಾರಿಸಾರಿ ಹೇಳುತ್ತಿದೆ ಅಲ್ಲವೇ ?

ಮಾನವನು ಆಕಾಶತತ್ತ್ವದ ಸ್ವರ್ (ಪ್ರಜ್ಞಾ) ಪಾತಳಿಯ ಸಂಪರ್ಕವನ್ನು ಬಿಟ್ಟಂದಿನಿಂದ ಭೂಃ-ಭುವಃ ರೂಪದ ಸ್ಥಲ (ಯೋನಿ)-ಕಾಲ (ಶಿಶ್ನ) ದ ಇಂದ್ರಿಯ ಪಾತಳಿಯ ಅಥವಾ ಪ್ರಾಣಚೇತಸ ಪಾತಳಿಯ, ಇನ್ನೂ ವಿವರವಾಗಿ ಹೇಳುವುದಾದರೆ ಮೃತ್ಯುಲೋಕದ ಟೊಳ್ಳಿನಲ್ಲಿ ಸಿಕ್ಕಿಹಾಕಿಕೊಂಡಿದ್ದಾನೆ. ಪ್ರಜಲಿತ ಋಗ್ವೇದದಲ್ಲಿ ದೊರೆಯುವ ತ್ರಿತ ಆಪ್ತ್ಯನು 'ಕೂಪ'ದಲ್ಲಿ ಸಿಕ್ಕಿಬಿದ್ದು ಒರಲುತ್ತಿರುವ ಎಂಬ ಸಾಂಕೇತಿಕ ಚಿತ್ರ ಅಮೋಘವೂ ಅರ್ಥದಾಯಕವೂ ಆದ ಚಿತ್ರವಾಗಿದೆ.* ಇಂದಿನ ಮಾನವನು ಬಿದ್ದಿರುವ ಚಿತ್ರವನ್ನು ನೆನಪಿಗೆ ತಂದುಕೊಡುತ್ತದೆ. ಈ ರೀತಿಯ ಸ್ಥಿತ್ಯಂತರವು ಜೀವನ ವಿಶ್ವಸ್ಥ, ದುಷ್ಟ, ವಂಚಕಶಕ್ತಿಯ ಕೈವಾಡದಿಂದ ಆಗಿದೆ ಎಂಬುದು ಮೇಲಿನ ವಿವರಣೆಯಿಂದ ತಮ್ಮಗಳ ಗಮನಕ್ಕೆ ಬಂದಿರಬಹುದೆಂಬುದಾಗಿ ಭಾವಿಸುತ್ತೇನೆ. ವಿಕಾಸತತ್ತ್ವದ ಪ್ರಕ್ರಿಯೆಯಲ್ಲಿ ಪ್ರಾದುರ್ಭಾವಗೊಂಡ ಮಾನವನ ಬಾಳದಾರಿಯನ್ನೇ ದುಷ್ಟವ್ಯಕ್ತಿಗಳು ಬದಲಿಸಿದ್ದಾರೆ. ಗ್ರೀಕ್ ಸಂಸ್ಕೃತಿಯಲ್ಲಿ (universe) (ಸ್ವರ್) ಈ ಪಾರಿಭಾಷಿಕ ಪದವನ್ನು ಬಿಟ್ಟು ಅದರ ಸ್ಥಳದಲ್ಲಿ cosmos ಎಂಬ ಸಂಕೇತವನ್ನು ರೂಢಿಗೆ ತಂದಿರುವುದನ್ನು ನೆನಪಿಗೆ ತಂದುಕೊಂಡರೆ ಗ್ರೀಕ್ ಸಂಸ್ಕೃತಿಯಲ್ಲಿ ಪೈಥಾಗೊರಾಸನು ಕಾರಣನಾಗಿರುವ ಹಾಗೆಯೇ ನಮ್ಮಲ್ಲಿ ಸ್ವರ್ ಪಾತಳಿಯ ಪಲ್ಲಟಕ್ಕೆ ವ್ಯಾಸ ಮತ್ತು ವಸಿಷ್ಠ ಪಂಥದವರು ಪರ್ಯಾಯವಾಗಿ ಕಾರಣರಾಗಿದ್ದಾರೆಂಬುದನ್ನು ಮನಗಾಣಬಹುದಲ್ಲವೇ ?

---

* ತ್ರಿತಃ ಕೂಪೇಽವಹಿತೋ ದೇವಾನ್ ಹವತ ಊತಯೇ
ತಚ್ಛುಶ್ರಾವ ಬೃಹಸ್ಪತಿಃ ಕೃಣ್ವನ್ನಹೂರಣಾದುರು
ವಿತ್ತಂ ಮೇ ಅಸ್ಯ ರೋದಸೀ —105–17

(ಬಾವಿಯಲ್ಲಿ ಬಿದ್ದಂತಹ 'ತ್ರಿತ'ನೆಂಬುವನು ತನ್ನ ರಕ್ಷೆಗಾಗಿ ದೇವತೆಗಳನ್ನು ಕರೆಯುತ್ತಾನೆ. ಬೃಹಸ್ಪತಿಯು ಪಾಪರೂಪವಾದ ಬಾವಿ (ಸ್ಥಲ–ಕಾಲ) ಯಿಂದ ಉದ್ಧರಿಸಿ, ತ್ರಿತನ ಸ್ತೋತ್ರವನ್ನು ಕೇಳಿದನು. ನನ್ನ ಈ ದುಃಖವನ್ನು ತಿಳಿದು ಉದ್ಧಾರ ಮಾಡಿರಿ.)

ಶಾಟ್ಯಾಯನ ಬ್ರಾಹ್ಮಣದಲ್ಲಿ ಒಂದು ಕಥೆ ಇದೆ. ಏಕತ, ದ್ವಿತ, ತ್ರಿತ ಎಂಬ ಮೂವರು ಋಷಿಗಳು ಮರುಭೂಮಿಯಲ್ಲಿ ಹೋಗುತ್ತಿರುವಾಗ ಬಾಯಾರಿಕೆಯಿಂದ ವ್ಯಾಕುಲಗೊಂಡರು. ಆಗ 'ತ್ರಿತ'ನು ಒಂದು ಬಾವಿಯನ್ನು ಹುಡುಕಿ ಅದರಲ್ಲಿ ಇಳಿದು ತಾನು ನೀರು ಕುಡಿದು, ಏಕತ ದ್ವಿತರಿಗೆ ನೀರನ್ನು ತಂದುಕೊಟ್ಟನು. ಇವರು ಆ ನೀರನ್ನು ಕುಡಿದು ಹಣದ ಆಸೆಯಿಂದ 'ತ್ರಿತ'ನನ್ನು ಬಾವಿಯಲ್ಲಿ ನೂಕಿದರು. ಅದರ ಮೇಲೆ ಗಾಡಿಯ ಚಕ್ರವನ್ನು ಮುಚ್ಚಿ ಅವನ ಹಣವನ್ನು ಅಪಹರಿಸಿಕೊಂಡು ಹೋದರು. ತ್ರಿತನು ಆಗ ಬಾವಿಯಿಂದ ಮೇಲೆ ಬರುವುದಕ್ಕೆ ಎಲ್ಲಾ ದೇವತೆಗಳನ್ನು ಸ್ಮರಿಸಿದನು. ಮೇಲಿನ 'ತ್ರಿತ ಆಪ್ತ್ಯ'ನ ಸಾಂಕೇತಿಕ ವಿವರಣೆಗೆ ಈ ಕಥೆ ಸಹಾಯಕವಾಗುವಂತಿದೆ.

**ನರ : ಸ್ವಾಯಂಭುವ**

ಈಗಾಗಲೇ ಮನು : ವೈವಸ್ವತನ ವಿವರಣೆಯಲ್ಲಿ ಕ್ವಚಿತ್ತಾಗಿ ಸ್ವಾಯಂಭುವ ಸಂಕೇತದ ವಿವರ ಸ್ಥೂಲವಾಗಿ ಬಂದಿದೆ. ಇದನ್ನು ಇನ್ನಷ್ಟು ವಿವರವಾಗಿ ಹೇಳಬಹುದು. ಸಾಂಪ್ರದಾಯಿಕವಾಗಿ ಶಂಕರರು ತಮ್ಮ 'ವಿಷ್ಣುಸಹಸ್ರನಾಮದ ಭಾಷ್ಯ'ದಲ್ಲಿ 'ಸ್ವಯಮೇವ ಭವತೀತಿ ಸ್ವಯಂಭೂಃ' ಎಂದು ಹೇಳಿ ಕೈತೊಳೆದುಕೊಂಡಿದ್ದಾರೆ. ಆದರೆ 'ಸ್ವಯಂಭೂ' ಈ ಸಂಕೇತದ ಆಕೃತಿಸ್ವರೂಪ ಪೂರ್ಣವಾಗಿ ನಮ್ಮ ಗಮನಕ್ಕೆ ಈ ವಿವರಣೆಯಿಂದ ಬರುವುದಿಲ್ಲ. ಋಗ್ವೇದದ 'ಮನ್ಯುಸೂಕ್ತ'ಗಳಲ್ಲಿ ಈ ವಿಷಯದಲ್ಲಿ ಸಂದಿಗ್ಧತೆ ಇದೆ. ಆದರೆ, ಇದರ ಆಕೃತಿಸ್ವರೂಪವನ್ನು ಗಮನಕ್ಕೆ ತಂದುಕೊಡುವಂತಹ ಒಂದು ಉಲ್ಲೇಖ ಉಪನಿಷತ್ತಿನಲ್ಲಿದೆ.*

ಷಡ್ ವೈ ದೇವತಾಃ ಸ್ವಯಂಭುವಃ, ಅಗ್ನಿಃ, ವಾಯುಃ, ಅಸೌ
ಆದಿತ್ಯಃ, ಪ್ರಾಣಃ, ಅನ್ನಂ, ವಾಕ್

ನಾನು ಶ್ರೇಷ್ಠನೆಂಬುದು ಈ ಸ್ವಯಂಭೂ ಭೂಮಿಕೆಯ ಮೇಲೆ ಅನಿವಾರ್ಯವಿದೆ. "ಅಹಂ ಶ್ರೇಷ್ಠಃ ಅಸ್ಮಿ" ಎಂದು ಹೇಳುತ್ತದೆ. ಈಶೋಪನಿಷತ್ತಿನ ಮತ್ತೊಂದು ಉಲ್ಲೇಖವನ್ನು ಪ್ರಸ್ತಾಪಿಸಿದರೆ ಹೆಚ್ಚು ಮನನೀಯವಾಗಬಹುದು.†

ಸಃ ಪರ್ಯಗಾತ್ ಶುಕ್ರಃ ಅಕಾಯಂ ಅವ್ರಣಂ ಅಸ್ನಾವಿರಂ
ಶುದ್ಧಂ ಅಪಾಪವಿದ್ಧಮ್
ಕವಿಃ ಮನೀಷೀ ಪರಿ–ಭೂ **ಸ್ವಯಂಭೂಃ** ಯಥಾ ತತ್ಥ್ಯತಃ
ಅರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ

ಅವನು (ಸಃ) ಸರ್ವವ್ಯಾಪಿ, 'ಶುಕ್ರ'ನು, ಅ-ಕಾಯನು. ಗಾಯ, ಹುಣ್ಣು, ವ್ರಣಗಳು ಇಲ್ಲದವನು, ಸ್ನಾಯುಗಳೂ ಇಲ್ಲದವನು. ಶುದ್ಧಸ್ವರೂಪನು ; ಪಾಪರಹಿತನು. ಕವಿಯೂ ಮನೀಷಿಯೂ ಸ್ವಯಂ-ಭೂ ಆದವನು. ಶಾಶ್ವತವಾಗಿ ಇರಬಲ್ಲವನು.

ಇಲ್ಲಿ ಶುಕ್ರ (ರಸ) ಕವಿ ಆಗಬೇಕಿದ್ದರೆ 'ನರ'ನ ಮೂರ್ತರೂಪವನ್ನು ಧಾರಣೆ ಮಾಡಬೇಕು. ನಮ್ಮ ವೇದ-ಉಪನಿಷತ್ತುಗಳಲ್ಲಿ ಮೂರ್ತ ಮತ್ತು ಅಮೂರ್ತಗಳ ಭೇದ ಇಲ್ಲ. ಉಪನಿಷತ್ತಿನಲ್ಲಿ ಹೇಳಿದ ಹಾಗೆಯೇ ಕವಿಯೂ ಮನೀಷಿಯೂ ಆಗಿರುವಂತೆ ವೇದದಲ್ಲಿಯೂ ಸಹ ಈ 'ಶುಕ್ರ'ನಿಗೆ ಕವಿ, ಕಾವ್ಯ ಎಂಬ ಹೆಸರು ಇದೆ. ಈ ಶುಕ್ರ ಪರಿ–ಭೂ ವ್ಯಾಪಕನು. ಒಂದರಿಂದ ಎಲ್ಲ ಎಂಬುದನ್ನು ಸಂಕೇತಿಸುವ ಆಕೃತಿ ಸ್ವರೂಪ ಇದಕ್ಕೆ ಇದೆ. ವಿಶಿಷ್ಟಲಿಂಗರೂಪ ದೇವರು. ಗೀತೆಯ

---

* ಜೈಮಿನೀಯ ಉಪನಿಷತ್ತು–4–11–1 (ನಿರ್ಣಯ ಸಾಗರ ಪ್ರೆಸ್. ಮುಂಬೈ–1934)

† ಈಶೋಪನಿಷತ್—8.

ಕೃಷ್ಣೇಶ್ವರನೂ ಇವನೇ ಹೌದು. ಈ 'ಭಗ'ವಂತ ಪ್ರಪಂಚದ ನಿಯಮನ ಮಾಡು ತ್ತಾನೆ. ಭಗ ಹಾಗೂ ಶುಕ್ರ ಇವೆಲ್ಲ ರೇತರಸ ಸ್ರವಿಸುವ ಎಡೆಯನ್ನು ಸೂಚಿಸುತ್ತದೆ. ಪೈಥಾಗೊರಾಸ್ ಪಂಥೀಯರ Limit ಎಂದು ಕರೆದದ್ದು ಇದನ್ನೇ.

ಈ 'ಶುಕ್ರ' (ಸ್ವಯಂ ಭೂ) ಎಂದರೆ 'ಅಂಗಾನಾಂ ರಸಃ' — ಪ್ರಾಣ. ಈ 'ಶುಕ್ರ'ನನ್ನು ರಾಕ್ಷಸವರ್ಗದ ಗುರು ಎಂದು ಪುರಾಣಗಳು ಹೇಳುತ್ತವೆ. ಭೂಃ ಮತ್ತು ಭುವಃ ಪಾತಳಿಯ ನಡುವಿನ ಟೊಳ್ಳು 'ಯೋನಿಸ್ಥಾನ' ಇದೆಯೆಂಬುದನ್ನು ಸ್ಮರಿಸಿಕೊಳ್ಳಬಹುದು. 'ಸ್ವಯಂ-ಭೂ' ಪ್ರಾಣತತ್ತ್ವದ ಸಂಕೇತವೆಂದು ತಿಳಿಯು ವುದಕ್ಕೆ ಮೇಲಿನ ಆಧಾರಗಳು ಸಾಕು ಎಂದು ಹೇಳಬಹುದು. ಈ 'ಸ್ವಯಂಭೂ' ವಿನಿಂದಲೇ ಇನ್ನಿತರ ಆದಿತ್ಯ ದೇವತೆಗಳೂ ಒಡಮೂಡಿ 'ಸ್ವಾಯಂಭುವ'ಗಳು ಆಗಿವೆ. ಅಥರ್ವಣ ವೇದದ ಒಂದು ಉಲ್ಲೇಖವೂ ಗಮನಾರ್ಹ.

ಕಾಲೇ ಪ್ರಜಾ ಅಸೃಜತ ಕಾಲೋ ಅಗ್ರೇ ಪ್ರಜಾಪತಿಂ ।
**ಸ್ವಯಂಭೂಃ ಕಶ್ಯಪಃ ಕಾಲಾಃ ತಪಃ ಕಾಲಾತ್ ಅಜಾಯತ ॥***

ಅಥರ್ವಣವೇದದ ಈ ಮಂತ್ರ ಮೇಲೆ ಸೂಚಿಸಿದ 'ಮನ್ಯುಸೂಕ್ತ' ಹಾಗೂ ಜೈಮಿನೀಯ ಉಪನಿಷತ್ತುಗಳಲ್ಲಿ ಹೇಳುವ ಮಾತನ್ನೇ ಪುಷ್ಟೀಕರಿಸುತ್ತದೆ ಮತ್ತು ಪ್ರಚಲಿತ ಋಗ್ವೇದದ ಸ್ವರೂಪವನ್ನು ಸೂಚಿಸುತ್ತದೆ. 'ಕಾಲೇ' ಎಂಬುದಕ್ಕೆ ಭಾಷ್ಯಕಾರರು 'ಪುರುಷ' ಎಂದು ಸಂಕೇತಕ್ಕೆ ಸಮಾನವಾದ ರೂಢಿ ಪ್ರಯೋಗ ಗಳೆಂದು ತಿಳಿಸುತ್ತಾರೆ. 'ಪುರುಷನೇ ಪ್ರಜೆಗಳನ್ನು ಸೃಷ್ಟಿಸಿದ'. ಋಗ್ವೇದದ 'ಪುರುಷಂ ಏವೇದಂ ಸರ್ವಂ' ಎಂದು ಹೇಳಿರುವುದನ್ನು ಗಮನಕ್ಕೆ ತಂದುಕೊಳ್ಳ ಬಹುದು. 'ಕಾಲ' ಎಂದರೆ ವಿಭಾಗದ್ವಯ ನಡುವಿನ ಟೊಳ್ಳು ಎಂಬುದನ್ನು ವ್ಯಾಹೃತಿತ್ರಯಗಳ ಸಂದರ್ಭದಲ್ಲಿ ಸ್ವಲ್ಪ ವಿವರಿಸಿದ್ದೇನೆ. ಇಲ್ಲೊಂದು ಮುಖ್ಯವಾಗಿ ಗಮನಿಸುವಂತಹ ವಿಚಾರ ಎಂದರೆ: ವೇದದಲ್ಲಿ 'ಸ್ವಾಯಂಭುವ' ಇಲ್ಲ. ಆದರೆ. 'ಸ್ವಯಂಭೂ' ಇದೆ. 'ಸ್ವಾಯಂಭುವ' ಎಂಬ ಸಂಕೇತ ರೂಢಿಗತವಾಗಿ ಬಂದದ್ದು ನಂತರವೇ. ದಕ್ಷಿಣಕಪರ್ದ ಎಂಬ ವಿಶೇಷಣ ಪಡೆದಿರುವ ವಸಿಷ್ಠ 'ಸ್ವಾಯಂಭುವ'ನ ಹತ್ತು ಪುತ್ರರಲ್ಲಿ ಒಬ್ಬನೆಂದು ಸಂಪ್ರದಾಯ ಹೇಳುತ್ತದೆ.

'ಸ್ವಾಯಂಭುವ ಮನು' ಒಂದು ಅನೌರಸ ಸಂತಾನದ ಪ್ರತಿಮೆ. ಮನು ವೈವಸ್ವತನಿಗೆ ಪ್ರತಿಯಾಗಿ ಸೃಷ್ಟಿಯಾಗಿರುವ ಭಾಷಿಕ ಪ್ರತಿಮೆ. 'ಮನು' ಎಂದು ಹೇಳುವಲ್ಲಿ ಸ್ವಾಯಂಭುವ ಮತ್ತು ಆದ್ಯ ಇವೆರಡೂ ಸಹ ಸಮಾನವಾದ ವಿಶೇಷಣ ಗಳಲ್ಲ ಎಂಬುದನ್ನು ಗಮನಕ್ಕೆ ತಂದುಕೊಳ್ಳಬೇಕಾಗುತ್ತದೆ. ಈ ಮಾತನ್ನು ಪುಷ್ಟೀಕರಿಸಲು ಕೆಳಗಿನಂತೆ ಟಿಪ್ಪಣಿ ಮಾಡಬಹುದು:

1. ಅಷ್ನಿಕದ ಸಂದರ್ಭದಲ್ಲಿ 'ನರ: ಸ್ವಾಯಂಭುವನ ಉಲ್ಲೇಖ ಇಲ್ಲದಿರುವುದು.

---

* ಅಥರ್ವಣವೇದ (19-53-10)

2. ಮೂಲಭೂತವಾಗಿ ಜೀವನವಿಶ್ವದ ಅರ್ಥದ ಆಕೃತಿಧಾರಣೆ ಮಾಡಿರುವುದು 'ಸ್ವರ್' ಪಾತಳಿಯ ಮೇಲೆ ಹೊರತು ಭೂಃ–ಭುವಃ ಪಾತಳಿಯ ಮೇಲಲ್ಲ.
3. ವೇದದಲ್ಲಿ ಇಂದ್ರ, ವರುಣ, ಸವಿತೃ, ತ್ರಿತಆಪ್ತ್ಯ, ಸೌರದೇವತೆಗಳಿಗೆ ಮೊದಲಲ್ಲಿ ಮಹತ್ವ ಇದ್ದ ವಿಚಾರ.
4. 'ಸ್ವಾಯಂಭುವ ಮನು' ಸಂಕೇತಕ್ಕೆ ಮೂಲ ಋಗ್ವೇದದಲ್ಲಿ ಅವಕಾಶವೇ ಇರಲಿಲ್ಲ ಎಂಬುದನ್ನು 'ಜೆಂಡ್ ಅವೆಸ್ತ' ಗ್ರಂಥವೂ ಸಹ ಪರ್ಯಾಯವಾಗಿ ಇಂಬುಗೊಡುತ್ತಿರುವ ವಿಚಾರ.
5. 'ಭಾಷೆ-ಸಂಸ್ಕೃತಿ-ಧರ್ಮ' ಕಾಣಿಸಿಕೊಂಡದ್ದು ಸ್ವರ್‌ಪಾತಳಿಯ ಮೇಲೆ. 'ಜ್ಞಾ'ನದೊಡನೆ 'ಪ್ರಜ್ಞಾ' ಪಾತಳಿಯ ಮೇಲೆ ಸ್ವರ್>ಆದ್ಯ ಮನುವಿನ ಸಂಬಂಧ ಇರುವುದು.

ಮೇಲಿನ ಸ್ಥೂಲವಾದ ಐದು ಅಂಶಗಳನ್ನು ಪರಿಶೀಲಿಸಿದರೆ 'ಆದ್ಯ ಮನು' ಯಾರೆಂಬುದು ತಿಳಿಯುತ್ತದೆ. ಪ್ರಚಲಿತ ಋಗ್ವೇದದಲ್ಲೂ ವಸಿಷ್ಠನ ಉದ್ಘೋಷ ಮತ್ತು ವಿಶ್ವಾಮಿತ್ರನ ಬಗೆಗಿನ ರೋಷವು VII–104-15ರ ಋಕ್ಕಿನಲ್ಲಿ ಇರುವುದನ್ನು ಗಮನಿಸಬಹುದು. ಮನು : ವೈವಸ್ವತ ಪರಂಪರೆಯನ್ನು ಎತ್ತಿಹಿಡಿಯುವ 'ವಿಶ್ವಾಮಿತ್ರ'ನ ಬಗೆಗೆ ರೋಷವನ್ನು 'ನರ : ಸ್ವಾಯಂಭುವ' ವಸಿಷ್ಠನು ಮಾಡುವುದನ್ನು ನೆನಪಿಗೆ ತಂದುಕೊಳ್ಳಬಹುದು. ಸವಿತೃಮಂತ್ರದ ದ್ರಷ್ಟಾರ ವಿಶ್ವಾಮಿತ್ರ ಸಂಕೇತವನ್ನು ಭ್ರಷ್ಟಗೊಳಿಸಿರುವ ರೀತಿಯಲ್ಲಿ ಇದನ್ನು ಮನಸ್ಸಿಗೆ ತಂದುಕೊಳ್ಳಬಹುದಾಗಿದೆ.

ಇನ್ನು, ಅನೇಕ 'ಮನು'ಗಳ ಬಗೆಗಿನ ವಿಚಾರ 'ಸ್ವಾಯಂಭುವ' ಸಂಪ್ರದಾಯದವರಿಂದ ಮೂಡಿ ಬಂದಿರುವುದು. ಒಂದರಿಂದ ಎಲ್ಲ ಎಂಬ ತತ್ತ್ವವನ್ನು ನೆನಪಿಗೆ ತಂದುಕೊಳ್ಳಬಹುದು. ಅನೇಕ 'ಮನು' ಎಂದು ಹೇಳಿದರೆ 'ಮನು' ಪ್ರತಿಮೆಯ ಸಂಕೇತದ ನಷ್ಟ ಆಗುತ್ತದೆ. ಮನು ಮಾನವ ಆಗುವಾಗ ಅನೇಕ ಮನುಗಳು ಹೇಗೆ ಸಾಧ್ಯ ? ಎಂಬ ತಾತ್ತ್ವಿಕ ಪ್ರಶ್ನೆ ಇದರೊಡನೆಯೇ ಮೈದಾಳಿ ನಿಲ್ಲುತ್ತದೆ. ಬಹಳ ಮುಖ್ಯವಾದ ಪ್ರಶ್ನೆ, ಈ ಮೇಲಿನ ಎಲ್ಲ ಮಾತುಗಳಿಂದ ಒಡಮೂಡುವ ಅರ್ಥ ಎಂದರೆ : ಮಾನವ ಸಂಸ್ಕೃತಿಯನ್ನು ರೂಪಿಸಿದವನು ಯಾರು ? ವೈವಸ್ವತನೇ ಸ್ವಾಯಂಭುವನೇ ಎಂಬ ಪ್ರಶ್ನೆ ಬಹಳ ಮುಖ್ಯವಾಗಿ ಎದ್ದು ನಿಲ್ಲುತ್ತದೆ. ರೂಢಿ ಪರಂಪರೆ ಹೇಳುವುದು ಸ್ವಾಯಂಭುವನೇ ಮಾನವಸಂಸ್ಕೃತಿಯನ್ನು ರೂಪಿಸಿದನೆಂದು; ಆದರೆ, ರೂಢಿಮೂಢರಾಗದೆ ವಿಚಾರಿಸಿದರೆ ವೈವಸ್ವತನೇ ಈ ಮಾನವ ಸಂಸ್ಕೃತಿಯನ್ನು ರೂಪಿಸಿದವನೆಂಬ ತಾತ್ತ್ವಿಕ ಆಶಯವು ಸ್ಪಷ್ಟವಾಗಿ ಎದ್ದು ನಿಲ್ಲುತ್ತದೆ. ಉದಾಹರಣೆಗೆ, ಮತ್ತೊಂದು ನಿಟ್ಟಿನಿಂದ ನೋಡಿದರೆ ಸ್ವಯಂಭೂ>ಸೃಜನಕಾಲ ಇವನು ಬ್ರಹ್ಮನೆಂದು ಪರಂಪರೆ ಹೇಳುತ್ತದೆ. ವ್ಯಾಹೃತಿಗಳಲ್ಲಿ ಸ್ವರ್ ಪಾತಳಿಯ

ಮೇಲೆ 'ಮಹಃ' ಎಂಬುದನ್ನು ತಂದು ನಿಲ್ಲಿಸಿದೆ. ಈ 'ಮಹಃ' ಏನೆಂದರೆ 'ಬ್ರಹ್ಮ'ನೆಂಬ ವಿವರಣೆ ಅಲ್ಲಿಯೇ ದೊರಕುತ್ತದೆ. 'ಮಹಃ' ಎಂದರೆ ಚಂದ್ರನೆಂಬ ಅರ್ಥವೂ ಸಹ ಇದರೊಡನೆ ಒತ್ತಿಕೊಂಡು ಬರುತ್ತದೆ. 'ಸೂರ್ಯಲೋಕಸ್ಯ (ಸ್ವರ್ ಪಾತಳಿಯ ಮೇಲೆ) ಉಪರಿ ಚಂದ್ರಮಸ್ ಲೋಕಃ ಎಂಬ ವಿವರಣೆಯಂತೂ 'ಸ್ವಯಂಭೂ' > ಸ್ವಾಯಂಭುವ ಸಂಕೇತದ ಅರ್ಥವನ್ನು ಚೆನ್ನಾಗಿ ಮನಸ್ಸಿಗೆ ತಂದು ಕೊಡುತ್ತದೆ. ಇದು 'ಲಿಂಗಸ್ವರೂಪ' ಎಂಬುದು ಈ ಮೇಲಿನ ಎಲ್ಲಾ ವಿವರಣೆಗಳಿಂದಲೂ ಸ್ಥೂಲವಾಗಿ ತಿಳಿದು ಬಂದಿರಬೇಕೆಂದು ನಾನು ಭಾವಿಸುತ್ತೇನೆ.

'ಮನು : ವೈವಸ್ವತ ಹಾಗೂ ನರ : ಸ್ವಾಯಂಭುವ' ಈ ಪ್ರತಿಮೆಗಳ ಆಶಯಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ತಿಳಿಸಿಕೊಡುವ ಪ್ರಯತ್ನವನ್ನು ಹಿಂದಿನ ಪುಟಗಳಲ್ಲಿ ಮಾಡಿಕೊಟ್ಟಿದ್ದೇನೆ. ಇದೇ ಸಂದರ್ಭದಲ್ಲಿ **'ಭಗವದ್ಗೀತೆ'**ಯಲ್ಲಿ ಬರುವ ಒಂದು ಪ್ರಮುಖವಾದ ಮಾತು 'ವೈವಸ್ವತಮನು'ವಿನ ಪತನಕ್ಕೆ ಕೃಷ್ಣ: ಕಾಲ-ಸ್ವರೂಪೀ ಸ್ವಯಂಭೂ > ತನೂನಪಾತ್ (ವೇದ) ಹೇಗೆ ಕಾರಣನೆಂಬುದನ್ನು ಸ್ವಲ್ಪ ಮಾತ್ರದ ವಿವರಣೆಯಿಂದ ತಿಳಿಯಲು ಶಕ್ಯವಿದೆ.

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನ್ ಅಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ ಮನುಃ ಇಕ್ಷ್ವಾಕವೇಽಬ್ರವೀತ್ ॥೪–೧॥

ನಾನು 'ಅವ್ಯಯ'ವಾದ ಈ ಯೋಗವನ್ನು ವಿವಸ್ವತನಿಗೆ ಹೇಳಿದೆನು. ವಿವಸ್ವಾನನು ಮನುವಿಗೆ ಹೇಳಿದನು. ಮನುವು ಇಕ್ಷ್ವಾಕುವಿಗೆ ಹೇಳಿದನು. ಇದರ ಮುಂದಿನ ಶ್ಲೋಕ ಹೀಗಿದೆ :

ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೪–೨ ॥

ಈ ಶ್ಲೋಕದಲ್ಲಿರುವ 'ಏವಂ ಪರಂಪರಾಪ್ರಾಪ್ತಂ ಇಮಂ ರಾಜರ್ಷಯೋ ವಿದುಃ' ಪರಂಪರೆಯಿಂದ ಬಂದ ಇದನ್ನು ರಾಜರ್ಷಿಗಳು ತಿಳಿದಿದ್ದರು. ಆ ಯೋಗವು ದೀರ್ಘವಾದ ಕಾಲದ ದೆಸೆಯಿಂದ ಇಲ್ಲಿ ನಷ್ಟವಾಯಿತು.

ಮೇ ಭಕ್ತಃ ಸದಾ ಚ ಅಸಿ ಇತಿ ಸಃ ಅಯಂ ಪುರಾತನಃ ಯೋಗಃ ಏವ
ಅದ್ಯ ಮಯಾ ತೇ ಪ್ರೋಕ್ತಃ ॥

ನನಗೆ ಭಕ್ತನೂ ಸ್ನೇಹಿತನೂ ಆಗಿದ್ದೀಯೆ—ಎಂದು ಆ ಪುರಾತನವಾದ ಯೋಗವೇ ಈಗ ನನ್ನಿಂದ ನಿನಗೆ ಹೇಳಲ್ಪಟ್ಟಿತು. ಮುಂದಿನ ಶ್ಲೋಕಗಳಲ್ಲಿ ಅರ್ಜುನನು, ನೀನು ಈಚಿನ ಜನ್ಮದವನು ಎಂದು ಹೇಳಿ 'ನಿನಗೆ ಅವ್ಯಯವಾದ ಯೋಗ ಹೇಗೆ ತಿಳಿಯಿತು' ಎಂಬ ಅನುಮಾನದ ಪ್ರಶ್ನೆಯೊಂದನ್ನು ಎಸೆಯುತ್ತಾನೆ. ಆದರೆ, ಅದಕ್ಕೆ ಅವತಾರದ ವಿವರ ಹೇಳಿ ಸುಮ್ಮನಿರಿಸುತ್ತಾನೆ.

ಮೇಲೆ ಹೇಳಿದ ಶ್ಲೋಕಗಳನ್ನು ವಿವರವಾಗಿ ಪರಿಶೀಲಿಸೋಣ. 'ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನ್ ಅಹಂ' ಎಂಬಲ್ಲಿ ಸ್ವರ್‌ಪಾತಳಿ > ಪ್ರಜ್ಞಾಪಾತಳಿ

ಯನ್ನು ತಳ್ಳಿ ಹಾಕಿರುವ ಕವಡು ಪ್ರಯತ್ನ ಸ್ಪಷ್ಟವಾಗಿ ಕಾಣುವುದಲ್ಲವೇ? ಮತ್ತೊಂದು ಕಡೆಯಲ್ಲಿ 'ಪ್ರಜ್ಞಾವಾದಾಂಶ್ಚ ಭಾಷಸೇ' ಎಂಬಲ್ಲಿ 'ಪ್ರಜ್ಞೆ'ಯ ಅವಹೇಳನವೂ ಇದೆಯೆಂಬ ಸಂಗತಿಯನ್ನು ಮರೆಯುವಂತಿಲ್ಲ. 'ಮಹತಾಕಾಲೇನ ನಷ್ಟಃ' ಎಂಬಲ್ಲಿ ಹಿಂದೆ ನಷ್ಟವಾದದ್ದನ್ನು ತಿಳಿಸುತ್ತದೆ, ಅಲ್ಲವೇ? ಅಂದರೆ: ವೈವಸ್ವತ ಪರಂಪರೆ ಇದ್ದದ್ದು ನಷ್ಟವಾಯಿತೆಂಬ ಧ್ವನಿ ಇದೆ ಎಂದು ತಿಳಿಯಲು ಯಾವ ಅನುಮಾನವೂ ಇಲ್ಲ. ಇಲ್ಲಿ ಸಂದಿಗ್ಧತೆಗೆ ಏನೇನೂ ಕಾರಣವಿಲ್ಲ, ಕೃಷ್ಣ : Black Magic ತಂತ್ರ ಇರುವುದು ಅರಿಕೆಗೆ ಬರುವ ಸಂಗತಿ. ಕೃಷ್ಣ ಸಂಕೇತ ದಂತೆ; 'ಅರ್ಜುನ' ಸಂಕೇತವೂ ಅಭ್ಯಾಸನೀಯವಾದ ವಿಚಾರ. 'ಅರ್ಜುನ' ಋಗ್ವೇದ ಕಾಲದಷ್ಟು ಪ್ರಾಚೀನ. 'ಆರ್ಜುನೇಯ' ಎಂಬ ಮಾತು ಹಲವಾರು ಕಡೆ ಋಗ್ವೇದದಲ್ಲಿ ಬರುತ್ತದೆ.* ಈತ ಇಂದ್ರಸಂಬಂಧಿ ಎಂಬ ಹೇಳಿಕೆಗಳೂ ಬಹಳ ಸಾರಿ. ಶತಪಥ ಬ್ರಾಹ್ಮಣದಲ್ಲಿ ಅರ್ಜುನನೆಂದರೆ ಇಂದ್ರನ ರಹಸ್ಯನಾಮ ಎಂಬ ವಿವರಣೆಯೂ ಇದೆ. (5-4, 3-7) "ಅರ್ಜುನೋ ಹ ವೈ ನಾಮೇಂದ್ರೋ ಯದಸ್ಯ ಗುಹ್ಯಂ ನಾಮ" ಎಂಬ ಮಾತನ್ನು ಗಮನಿಸಬಹುದು. ಹೀಗೆ, 'ಅರ್ಜುನ' ಸಂಕೇತವು ಇಂದ್ರ ಸಂಬಂಧಿಯಾಗಿ ಇದ್ದದ್ದು ಗೀತೆಯ ಕಾಲಕ್ಕೆ ಕೃಷ್ಣಸಂಬಂಧಿಯಾಗಿ ಹೇಗೆ ಮೈದಾಳಿತು? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಸೂಕ್ತವಾದ ವಿವರಣೆ ನೀಡಲು ಕಷ್ಟವಾದರೂ ಅರ್ಜುನ ಪ್ರತಿಮೆಯನ್ನು ಕೃಷ್ಣಪಂಥದವರು ಅಥವಾ ಸ್ವಯಂಭೂ>ಸ್ವಾಯಂಭುವ—ಪ್ರಾಣಚೇತನಪಾತಳಿಯವರು ಈ ಭಾಷಿಕ ಪ್ರತಿಮೆ ಯನ್ನು ತಮ್ಮದಾಗಿರಿಸಿಕೊಂಡಿದ್ದಾರೆ. ಏಕೆಂದರೆ ಕೃಷ್ಣನಿಗೂ ಇಂದ್ರನಿಗೂ ಸೆಣಸಾಟ ಇತ್ತೆಂಬುದರ ವಿವರಣೆ ವೇದದಲ್ಲಿ ಬರುತ್ತದೆ. 8ನೇ ಮಂಡಲದ 96ನೇ ಸೂಕ್ತದಲ್ಲಿ ಕುತೂಹಲಿಗಳು ನೋಡಬಹುದು. ಇಲ್ಲಿ ಬರುವ ಕೃಷ್ಣನನ್ನು 'ಅಸುರ'ನೆಂದು ಸಾಯಣರು ಅರ್ಥಮಾಡಿ ಪರಂಪರೆಯ ಅರ್ಥವನ್ನು ಹೇಳಿದ್ದಾರೆ, ಇಂಥ 'ಅಸುರ' ಕೃಷ್ಣನನ್ನು ತಿಳಿದರೆ—ಗೀತೆಯ ಮೇಲಿನ 'ವೈವಸ್ವತನಿಗೆ ತಾನು ಹೇಳಿದೆ' ಎಂಬ ಮಾತೂ ಪರಂಪರಾಪ್ರಾಪ್ತವಾಗಿದ್ದ ಇದನ್ನು 'ಮಹತಾಕಾಲೇನ ನಷ್ಟಃ' ಆಯಿತು ಎಂಬ ಮಾತಿಗೂ ಕೊಂಡಿ ಸಿಗುತ್ತದೆಂದು ನಾನು ತಿಳಿದಿದ್ದೇನೆ. ಅಂದರೆ : ಗೀತೆಯ ಆಶಯದಿಂದಲೇ ಹೊರಡುವ ಅರ್ಥ ಏನೆಂದರೆ ವೈವಸ್ವತ ಪರಂಪರೆ ನಷ್ಟವಾಯಿತು. ಅದನ್ನು ನಾನು ಪುನಃ ನಿನಗೆ ಹೇಳುತ್ತಿದ್ದೇನೆ' ಎಂಬ ಮಾತಿನ ಧ್ವನಿ ಸೂಕ್ಷ್ಮಾರ್ಥ ನಿಶ್ಚಿತವಾಗುತ್ತದೆ. ಆದರೆ, 'ಭವತಃ ಜನ್ಮ ಅಪರಂ : ವಿವಸ್ವತಃ ಜನ್ಮ ಪರಂ' ಎಂದು ಹೇಳುವ (ನಿನ್ನ ಜನ್ಮ ಇತ್ತೀಚಿನದು ; ವಿವಸ್ವತನ ಜನ್ಮ ಹಿಂದಿನದು) ಅರ್ಜುನನ ಮಾತನ್ನೂ ತನ್ನ ಮಾತಿನ ಚಮತ್ಕಾರದಿಂದ ಮುಚ್ಚಿಬಿಡುತ್ತಾನೆ.

---

* ಋಗ್ವೇದ IV-26-1 ಮತ್ತು VII-19-2

**ಉಪಸಂಹಾರ :**

ವೈವಸ್ವತಮನುವೇ 'ಆದ್ಯ'ನು ಎಂಬುದಕ್ಕೆ ಆಹ್ನಿಕದ ಸಂದರ್ಭದಲ್ಲಿ ಹೇಳುವ 'ಸಂಕಲ್ಪ' ಮಂತ್ರದಲ್ಲಿ ಪರಂಪರಾಪ್ರಾಪ್ತವಾಗಿ ಉಳಿದುಕೊಂಡು ಬಂದಿರುವುದು; ಕಾಳಿದಾಸ-ಭವಭೂತಿಗಳು ವೈವಸ್ವತನೇ 'ಆದ್ಯ'ನೆಂದು ಪ್ರಾಂಜಲಮನಸ್ಸಿನಿಂದ ಒಪ್ಪಿಕೊಂಡು ತಿಳಿಸಿರುವುದು—ಗಮನಕ್ಕೆ ತೆಗೆದುಕೊಳ್ಳಬೇಕಾದ ವಿಷಯ. 'ಗೀತೆ'ಯೂ ಸಹ ಪರ್ಯಾಯವಾಗಿ 'ವೈವಸ್ವತ' ಪರಂಪರೆಯು ನಷ್ಟವಾದುದರ ಸೂಚನೆಯನ್ನು ತಿಳಿಸುತ್ತಿರುವುದೂ ಮೇಲಿನ ವಿವರಣೆಗೆ ಸಹಾಯವಾಗುತ್ತದೆ. ಹಿಂದೊಂದು ಕಾಲದಲ್ಲೆ ವೈವಸ್ವತನ ಸ್ಮರಣೆಯಲ್ಲಿ ಬಾಳದಾರಿಯ ಬೆಳಕನ್ನು ಕಂಡುಕೊಳ್ಳುತ್ತಿದ್ದ ಅಮೋಘವೂ ಉತ್ಸಾಹದಾಯಕವೂ ಅರ್ಥಪೂರ್ಣವೂ ಆದ ಚಿತ್ರ ನಮ್ಮ ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ಇಂಥ ಮನು : ವೈವಸ್ವತನಿಂದ ನಾವು ದೂರಸರಿದು ನಿಂತಿರುವುದು ತ್ರಿತಆಪ್ತ್ಯನಂತೆ ಮೃತ್ಯುಕೂಪದಲ್ಲಿ ಬಿದ್ದು ಹೊರಳುತ್ತಿರುವ-ಕೂಗುತ್ತಿರುವ ಚಿತ್ರ-ಇಂದಿಗೂ ಸಹ ನಮ್ಮ ಸಂಸ್ಕೃತಿಯ ಅಧೋಮುಖವನ್ನು ಶಬ್ದಚಿತ್ರದ ಮೂಲಕ ತೋರಿಸಿಕೊಡುತ್ತಿಲ್ಲವೇ ?

ಭಾಷಿಕ ಸಂಕೇತಗಳು ನಮ್ಮ ಸಂಸ್ಕೃತಿಯ ಸ್ಥಿತ್ಯಂತರವನ್ನು ತೆರೆದು ತೋರಿಸುವ ಅನರ್ಘ್ಯ ಸಾಧನಗಳು-ಎಂಬುದರಲ್ಲಿ ಆಧುನಿಕ ಭಾಷಾ ವಿಜ್ಞಾನಿಗಳ, ಮಾನವ-ಶಾಸ್ತ್ರಜ್ಞರ, ಮನೋವಿಜ್ಞಾನಿಗಳ ಒಮ್ಮತ ಇದೆ. ಒಂದು ಸಂಕೇತದ, ಒಂದು ಪದದ ಜಾಡು ಆ ಜನರ '**ಪಾಡು**' ಆಗಿರುತ್ತದೆ. ಒಂದು ಸಂಕೇತದ ನಷ್ಟ-ಪಲ್ಲಟವೆಂದರೆ ಆ ಜನಪದರ ಸಂಸ್ಕೃತಿಯ ನಷ್ಟವೋ ಪಲ್ಲಟವೋ ಎಂದು ತಿಳಿಯಲು ಯಾವ ಸಂದಿಗ್ಧತೆಯೂ ಇಲ್ಲ. ಮರಳಿ ನಾವು ಈಗ 'ವೈವಸ್ವತ ಮನು'ವಿನ ಜೀವನಾ-ದರ್ಶಕ್ಕೆ, ಆ ಸಂಕಲ್ಪದಲ್ಲಿ ಬದುಕಲು ನಾವು ಇಷ್ಟಪಡದೆ ಹೋದರೆ ಭಾರತಕ್ಕೆ, ಉಳಿಗಾಲವಿಲ್ಲವೆಂದು ಹೇಳದೆ ಗತ್ಯಂತರವಿಲ್ಲ. ಇಂದು ಪ್ರಾಣೋಪಾಸನೆಯಲ್ಲಿ, ಮೃತ್ಯುಕೂಪದಲ್ಲಿ ಬಿದ್ದಿರುವ ನಾವು ಮರಳಿ ಪ್ರಾಣೋಪಾಸನೆಯ ಆಚೆಯಿರುವ 'ಸ್ವರ್' (ಪ್ರಜ್ಞಾ) ಪಾತಳಿಯ ಆದರ್ಶದಲ್ಲಿ ನಾವು ಬದುಕಲು ಹೋಗಬೇಕಾದದ್ದು 'ಮನು-ಜ'ರಾದ ನಮ್ಮ ಕರ್ತವ್ಯವಲ್ಲವೇ ? ವಿಶ್ವಕ್ಕೆ ಅತ್ಯುನ್ನತವಾದ 'ಜೀವನ ದರ್ಶನ'ವನ್ನು ಕೊಡುಗೆ ನೀಡಿದ ಭಾರತೀಯ ಸಂಸ್ಕೃತಿಗೆ ನಾವು ಪೂರ್ವಾಧಿಕಾರಿಗಳು ಆಗಿದ್ದೇವಲ್ಲ, ಎಂಬ ಭಾವನೆ ಬರುವುದು ಯಾವಾಗ ? ವೈವಸ್ವತ ಮನುವಿನ ಆದರ್ಶಕ್ಕೆ, ಜಾತಿ, ಮತ, ವಿಭಿನ್ನಧರ್ಮ ಇವುಗಳಿಂದ ಹೊರಗೆ 'ಶುದ್ಧತತ್ತ್ವ'ದಲ್ಲಿ ಕೊಡುಗೆ ನೀಡಿದ 'ಭಾರತ' ಈಗಿರುವ ಸ್ಥಿತಿಯಿಂದ ಮೇಲೇಳಬೇಕಾದದ್ದು ಸಹಜವಲ್ಲವೇ ? ತುರ್ತು ಅಲ್ಲವೇ ? ಕರ್ತವ್ಯವಲ್ಲವೇ ?

---

# ಅನುಬಂಧ

## ಭಗವದ್ಗೀತೆಯು ಮೆಚ್ಚಿಕೆಯು 'ವೇದ' ಯಾವುದು ?

'ಪ್ರಚಲಿತ ಋಗ್ವೇದ' ವೆಂಬ ಮಾತನ್ನು ನನ್ನ ಉಪನ್ಯಾಸದ ಉದ್ದಕ್ಕೂ ಬಳಸಿದ್ದೇನೆ. ಹಾಗಾದರೆ ಪ್ರಚಲಿತ ಋಗ್ವೇದದ ಸ್ವರೂಪವನ್ನು ಭಗವದ್ಗೀತೆಯ ಮಾತಿನ ನೆರಳಿನಲ್ಲಿ ವಿಚಾರ ಮಾಡುವ ಆವಶ್ಯಕತೆ ಇದೆ ಎಂದು ಕೆಲವು ಮಾತುಗಳನ್ನು ಬರೆಯಬೇಕಾಗಿದೆ. ಭಗವದ್ಗೀತೆಯು ಭಗವಂತನೇ ಹೇಳಿದ್ದಾನೆ. "ವೇದಾನಾಂ ಸಾಮವೇದೋಽಸ್ಮಿ" (10-22), 'ವೇದಗಳಲ್ಲಿ ತಾನು ಸಾಮಗಾನಸ್ವರೂಪ ವೇದ' ಎಂದು ಹೇಳುವ ಸಂದರ್ಭದಿಂದ ಒಂದು ಪ್ರಶ್ನೆ ನಮ್ಮ ಮುಂದೆ ತಲೆ ಎತ್ತುತ್ತದೆ. ಋಕ್, ಯಜುಃ, ಸಾಮ, ಹಾಗೂ ಅಥರ್ವಣ—ಈ ನಾಲ್ಕು ವೇದಗಳಲ್ಲಿ ಋಗ್ವೇದಕ್ಕೆ ಅಗ್ರಸ್ಥಾನವಿದೆ—ಎಂದಿನಿಂದಲೂ. ಹೀಗೆ, ಮೊದಲನೆಯ ಸ್ಥಾನ ಮೇಲಣ ಮಾನವಿರುವ 'ಋಗ್ವೇದ'ವೇ ತಾನು ಎನ್ನುವಲ್ಲಿ ಔಚಿತ್ಯ ಇತ್ತು. ಪೂರ್ವ ಪರಂಪರೆಯಲ್ಲಿ ವೇದವೆಂದರೆ ಋಗ್ವೇದವೆಂದೇ ತಿಳಿಯಲಾಗುತ್ತಿತ್ತು.

ವಸ್ತುಸ್ಥಿತಿ ಹೀಗಿರುವಾಗ, ಗೀತೆಯ ಭಗ-ವಂತನು ತಾನು ಸಾಮ : ಗಾನ ರೂಪವೇದ ಎಂದು ಹೇಳುತ್ತಾನಲ್ಲ ? ಒಂದು ಆಶ್ಚರ್ಯದ ಸಂಗತಿಯೆಂದರೆ ಪ್ರಚಲಿತ ಋಗ್ವೇದದಲ್ಲಿ ಗೀತೆಯು ಹೇಳುವ 'ಅಶ್ವತ್ಥಃ ಸರ್ವವೃಕ್ಷಾಣಾಂ' ಎಂಬ ಈ ಅಶ್ವತ್ಥವೃಕ್ಷ ಇದೆ. ಅಲ್ಲದೆ, ಜಗತ್ತಿನ ಆರಂಭಕ್ಕೆ ಕಾರಣವೆಂಬ ಸಂಕೇತ ಪ್ರತೀಕವೂ ಇದರ ಬೆನ್ನ ಹಿಂದುಗಡೆ ಇದೆ. ಗೀತೆಯು ಹೇಳುವ 'ಆದಿತ್ಯಾನಾಂ ಅಹಂ ವಿಷ್ಣುಃ' ಎಂಬ ಈ ಆದಿತ್ಯ ಮತ್ತು ವಿಷ್ಣು ಸ್ತೋತ್ರಗಳು ಉಂಟು. ಗೀತೆಯ ಪುರುಷೋತ್ತಮನ ಪುರುಷಸೂಕ್ತವೂ ಸಹ ಇಂದಿನ ವೇದದಲ್ಲಿ ಸ್ಥಾಯಿ ಯಾಗಿ ಇದೆ.

ಹೀಗಿದ್ದರೂ ಸಹ ಭಗವಂತನು ತಾನು ಋಗ್ವೇದಸ್ವರೂಪನು ಎಂದು ಹೇಳದೆ 'ವೇದಾನಾಂ ಸಾಮವೇದೋಽಸ್ಮಿ' ಎಂದು ಹೇಳುತ್ತಿದ್ದಾನೆ. ಏಕೆ? ಪ್ರಚಲಿತ ಋಗ್ವೇದದಲ್ಲಿ ಗೀತೆಯ ಮೆಚ್ಚಿಕೆಯ ಸಂಕೇತ: ಪ್ರತೀಕಗಳು ಇರುವುದು ನಿಜವಿದ್ದರೂ ಸಹ ಇಂದಿನ ಈ ಪಾಠವು ಮೂಲಸಂಹಿತೆಯಲ್ಲಿ ಇಲ್ಲದಿರುವ ಸಾಧ್ಯತೆ ಹೆಚ್ಚಿದೆ.

ಕಾರ್ಯ ಮತ್ತು ಕಾರಣದ ಸಂಬಂಧದ ಭೂಮಿಕೆಯಿಂದ ವಿಚಾರ ಮಾಡುವ ಪಾಶ್ಚಾತ್ಯ ಸಂಶೋಧಕರ ಅಂದಾಜಿನ ನಿಟ್ಟಿನಿಂದ ಇಂದಿನ ಋಗ್ವೇದದ ಸ್ವರೂಪವು ವಿಸಂಗತವಿರುವುದಾಗಿ ಕಂಡುಬಂದಿದೆ. ಕಾರಣ-ಕಾರ್ಯದ ಭೂಮಿಕೆಯಿಂದ ಅತಿ ಪುರಾತನವೆಂಬ ಈ ಸಂಹಿತೆಯಲ್ಲಿ 'ಪ್ರವೃತ್ತಿಪರ, ಸಮಾಜಸಮ್ಮುಖಿ ಜೀವನ ರೀತಿಯ ಸ್ತೋತ್ರ ಹಾಗೂ ಸೂಕ್ತಗಳು ಇರಬೇಕು'. ಹುಟ್ಟಿನಿಂದಲೇ ಸಂಸಾರ ತ್ಯಾಗದ ಮನೋಭಾವವು ಅನೈಸರ್ಗಿಕವಾದದ್ದು. ಈ ವೇದದಲ್ಲಿ ಬರುವ ಕೇಶಿ : ಮುನಿಗಳ ಮಾನೇಯ ಸೂಕ್ತವೇ ಇದಕ್ಕೆ ಸಾಕ್ಷಿ (X-135). ಆದಕಾರಣ, ನಿವೃತ್ತಿಪರ

ಉಪದೇಶದ ಉಪನಿಷತ್ತುಗಳಿಗೂ ಮುಂಚಿನ ಋಗ್ವೇದವೂ ಇದರಲ್ಲಿ ನಿರಾಶವಾದದ ಧ್ವನಿಯ ಸೂಕ್ತ-ಮಂತ್ರಗಳು ಇರಲಾರವು, ಇರಬಾರದು ಅಲ್ಲವೇ? "There is no trace of pessimism" ಎಂದು ಡಾ॥ ವಿಂಟರ್ನಿಟ್ಸರ ನಂಬಿಕೆಯೂ ಇತ್ತು. ಇದು ಮಹಾಭಾರತದ ಸಂದರ್ಭದಲ್ಲಿ ಗಮನಕ್ಕೆ ಬರುತ್ತಿದೆ.

ಸಾಮಗಾನದ ಈ ವೇದದ ಆಶಯವು ಗೊತ್ತಾದಲ್ಲಿ, ಗೀತೆಗೆ ಋಗ್ವೇದವು ಅಮಾನ್ಯವಿರುವ ಕಾರಣ ತನ್ನ ತಾನೆ ಅರಿಕೆಗೆ ಬರುತ್ತದೆ. ಸಾಮವೇದದ ಅಂಗವಾದ ಛಾಂದೋಗ್ಯ ಉಪನಿಷತ್ತು ಇದೆ. ಛಂದ, ಛಂದಸ್ ಪದಕ್ಕಿರುವ ಸೂಕ್ಷ್ಮಾರ್ಥಗಳು ಮನನೀಯವಾಗಿವೆ. 'ಛಂದ' ಪದಕ್ಕೆ ಇಚ್ಛೆ, ಒಲವು ಎಂಬ ಅರ್ಥವೂ ಇದೆ. ಆಕರ್ಷಿಸು, ಮೋಹಿಸು—ಎಂಬ ಅರ್ಥವೂ ಆಗಬಲ್ಲುದು.

ಓಂ ಇತಿ ಏತತ್ ಅಕ್ಷರಂ ಉದ್ಗೀಥಂ ಉಪಾಸೀತ ।
ಓಂ ಇತಿ ಉದ್ಗಾಯತಿ । ತಸ್ಯ ಉಪವ್ಯಾಖ್ಯಾನಮ್ ॥ ೧ ॥
ತತ್ ಏತತ್ ಮಿಥುನಂ ಓಂ ಇತಿ ಏತಸ್ಮಿನ್
ಅಕ್ಷರೇ ಸಂಸೃಜ್ಯತೇ । ತದಾ ವೈ ಮಿಥುನೌ ಸಮಾಗಚ್ಛತ
ಆಪಯತಃ ವೈ ತಾವತ್ ಅನ್ಯೋನ್ಯಸ್ಯ ಕಾಮಮ್ ॥ ೬ ॥

ಹೀಗೆ ಈ ಆದಿತ್ಯ-ಬ್ರಹ್ಮಸ್ಥಿಯ ಸಾಧನದ ಮಂತ್ರಗಳಿವೆ. ಅದಿತಿ/ಆದಿತ್ಯ ಸಂಪ್ರದಾಯ ಎಂದೊಡನೆ ಇದರಲ್ಲಿ ಸ್ಥಲದ ಪಾತಳಿಯ ಎಂದರೆ ದೇಹ (ಸ್ಥಲ) ಪ್ರಾಣ (ಕಾಲ) ಇವೆರಡರ ನಡುವಿನ ಟೊಳ್ಳು ಇದಕ್ಕೆ ಸಂಬದ್ಧ ಸಾಧನ ಅನುಷ್ಠಾನದ ವಿವರಣೆಯು ಇರಬಹುದು.

ವಿವಸ್ವಾನ್/ಸವಿತೃ ದೇವರುಗಳು ಇರುವ ಅಹಿಹನ್ ಇಂದ್ರನಿಗೇ ಪ್ರಾಶಸ್ತ್ಯ ಪ್ರಾಧಾನ್ಯ ಇರುವ ಋಗ್ವೇದವು ಸ್ಥಲದ ಇಂದ್ರಿಯ ಪಾತಳಿಯ ಮೇಲ್ಗಡೆಗೆ ಇರುವ ಆಕಾಶತತ್ತ್ವದ ಪ್ರಕಾಶರೂಪ ಸ್ವರ್‌ಪಾತಳಿಯ ಮೇಲಿನ ದೇವತೆಗಳ ಸೂಕ್ತಗಳ ಸಂಹಿತೆಯಾಗಿದೆ ಎಂಬುದನ್ನು ನೆನಪಿಡುವ ಆವಶ್ಯಕತೆ ಇದೆ.

ಈ ಕಾರಣದಿಂದಾಗಿ 'ಗೀತೆ'ಯ ಭಗವಂತ, ಸ್ಥಲ ಸಂದರ್ಭದ ಸಾಮಗಾನ: ಛಂದೋಹಾನವಿರುವ 'ಸಾಮವೇದವು ತಾನು' ಎಂದು ಹೇಳುತ್ತಿರುವಂತೆ ಕಾಣುತ್ತಿದೆ. ಇಂದಿನ ಋಗ್ವೇದ ಸಂಹಿತೆಯನ್ನು ಪರಿಶೀಲಿಸಿದರೆ ಗೀತೆಗೆ ಋಗ್ವೇದವು ಅಮಾನ್ಯವಿರಲು ಕಾರಣವೇ ಇಲ್ಲ. ಈ ಋಗ್ವೇದದಲ್ಲಿ 'ಆದಿತ್ಯಾನಾಂ ಅಹಂ ವಿಷ್ಣುಃ' ಎಂಬ ಆದಿತ್ಯ ಮತ್ತು ವಿಷ್ಣುಗಳಿದ್ದಾರೆ. ಗೀತೆಯಲ್ಲಿಯೇ ಅಶ್ವತ್ಥವೃಕ್ಷ ಇದೆ.* ಗೀತೆಯ ಪುರುಷೋತ್ತಮ; ಪುರುಷಸೂಕ್ತ ಇದೆ. ಹೀಗಿದ್ದೂ ಭಗವಂತನು 'ತಾನು ಋಗ್ವೇದದ ಸ್ವರೂಪನು' ಎಂದು ಹೇಳಿಲ್ಲ. ಆ ಕಾರಣದಿಂದಾಗಿ ಇಂದಿನ

---

* "ಅಶ್ವತ್ಥವನ್ನು ನೋಡಲೋ ಬ್ರಹ್ಮರಾಕ್ಷಸನನ್ನು ನೋಡಲೋ" ಎಂಬ ಗಾದೆಯ ಮಾತನ್ನು ಇಲ್ಲಿ ತುಲನೆ ಮಾಡಿ ನೋಡಬಹುದು.

ಋಗ್ವೇದದಲ್ಲಿ ಸ್ಥಾನ ಪಡೆದಿರುವಂತಹ ಆದಿತ್ಯ/ಅದಿತಿ, ವಿಷ್ಣು, ಪುರುಷ ದೇವರುಗಳ ಸೂಕ್ತಗಳು ಮೂಲ ಋಗ್ವೇದದಲ್ಲಿ ಇರಲಿಲ್ಲವೆಂಬುದು ಈ ತುಲನೆಯಿಂದ ಅರಿಕೆಗೆ ಬರುವ ಸತ್ಯಸಂಗತಿಯಾಗಿದೆ.

ಋಗ್ವೇದದ ಮೂಲಪಾಠದಲ್ಲಿ ಬದಲಾವಣೆಗಳು ಆಗಿವೆ ಎಂಬುದನ್ನು ಖಚಿತ ಪಡಿಸುವ ಪ್ರಮಾಣವಾಕ್ಯಗಳು ಗೀತೆಯಲ್ಲಿಯೇ ಇವೆ. 'ವೇದಾನಾಂ ಸಾಮ ವೇದೋಽಸ್ಮಿ', 'ದೇವಾನಾಂ ಅಸ್ಮಿ ವಾಸವಃ' ಈ ವಾಕ್ಯದಲ್ಲಿರುವ 'ವಾಸವ' ಎಂಬ ಪದಕ್ಕೆ ಇಂದ್ರನೆಂದು ಅರ್ಥ ಇದ್ದರೂ—ಈ ಸಂದರ್ಭದಲ್ಲಿ ಇಂದ್ರಸಂಕೇತಕ್ಕೆ ವಿಪರೀತ ಅರ್ಥವು ಆಗುತ್ತಿದೆ. ದೇವರುಗಳಲ್ಲಿ ತಾನು ವಾಸವನು ; ಇಂದ್ರನು ಎಂಬ ಕೃಷ್ಣನು ಕರಿಕಾಲದ ಸಂಕೇತ. 'ಇಂದ್ರ' ಸಂಕೇತದ ಮೂಲಾರ್ಥ ಸೂರ್ಯ ಸದೃಶನು, ಪ್ರಕಾಶರೂಪನು ಆಗಿದ್ದಾನೆ. ಇರು, ವಾಸಿಸು ಎಂಬ ಅರ್ಥದ 'ವಸ್' ಆಖ್ಯಾತ ಸಾಧಿತ ಪದವಾದ 'ವಾಸವ'. ಆದುದರಿಂದ ವಾಸವದಲ್ಲಿ ಎಲ್ಲೆಲ್ಲೂ ಇರುವ, ವಾಸಿಸುವ ಆಕಾಶರೂಪ ಪ್ರಕಾಶತತ್ತ್ವವು ಸೂರ್ಯಸ್ಪಷ್ಟವಾಗಿತ್ತು ಎಂಬುದನ್ನು ಋಗ್ವೇದದ ಪ್ರಮಾಣವೇ ನಮ್ಮ ಮುಂದೆ ಈ ವಿಚಾರವನ್ನು ತಂದು ನಿಲ್ಲಿಸುತ್ತಿದೆ.

ಇಂದಿನ ವೇದದಲ್ಲಿ ಹೇಗೋ ಉಳಿದುಕೊಂಡಿರುವ 'ಇಂದ್ರಾಯ ಸವಿತ್ರೇ ಅಹಿಘ್ನೇ' ಈ ವಾಕ್ಯದಲ್ಲಿ ಇಂದ್ರಪಾತ್ರದ ಅರ್ಥ ; ಉದ್ದೇಶವು ಸ್ಪಷ್ಟವಿದೆ ; ಧೀ : ಪ್ರಜ್ಞಾಪ್ರಚೋದಕ ಪ್ರಕಾಶತತ್ತ್ವದ ಸವಿತೃದೇವನ ಪರ್ಯಾಯ ರೂಪ ಆಗಿದ್ದಾನೆ. ಈ ಇಂದ್ರನ ಮುಖ್ಯಕಾರ್ಯ ಎಂದರೆ ಬಾಳಿನಲ್ಲಿ ಲೈಂಗಿಕಪ್ರವೃತ್ತಿಗಳು ಎಲ್ಲೆಮೀರಿ ಪ್ರಭಾವಶಾಲಿಯಾಗದ ಹಾಗೆ ನೋಡಿಕೊಳ್ಳುವುದು. ಇಂದ್ರನನ್ನು 'ಶಿಶ್ನೋ ದೇವಾಃ' ಸಂಪ್ರದಾಯದ ಶತ್ರು ಎಂದು ವರ್ಣಿಸಲಾಗಿದೆ. ಅಲ್ಲದೆಯೇ, ಅಹಿ : ವೃತ್ರನ ವೈರಿ ಎಂಬ ಬಿರುದೂ ಸಹ ಇಂದ್ರನಿಗೆ ಇದೆ. ಮಾನವನು ಪ್ರಜ್ಞಾ : ಪ್ರಕಾಶದ ಪ್ರಭಾವದಲ್ಲಿ ಇರುವಾಗ, ಇವನ ಕಾಮುಕತೆಯು 'ಧರ್ಮಕ್ಕೆ ಅವಿರೋಧಿಯಾದ' ಧರ್ಮಸಮ್ಮತವಾದ ಕಾಮನೆ ಇದ್ದದ್ದು ಸಹಜವಾಗಿದೆ.

ಆದಕಾರಣ ಗೀತೆಯ ಭಗವಂತ 'ತಾನು ವಾಸವ' ಎಂದು ಹೇಳುತ್ತಿರುವಲ್ಲಿ ಪ್ರಕಾಶತತ್ತ್ವದ ಇಂದ್ರನು ಅಭಿಪ್ರೇತವಾಗಿರಲು ಸಾಧ್ಯವಿಲ್ಲ. ಆದಕಾರಣ ಕೃಷ್ಣನು ತಾನು ವಾಸವನು ಎನ್ನುತ್ತಿರುವ ಈ 'ವಾಸವ' ಪದದಲ್ಲಿ 'ಕತ್ತಲು ತುಂಬಿರುವ' ಕೃಷ್ಣವರ್ಣದ ಇಂದ್ರನು ಆಗುತ್ತಿದ್ದಾನೆ. ವಿಷ್ಣುವಿಗೆ 'ಉಪೇಂದ್ರ'ನೆಂಬ ಹೆಸರೂ ಇದೆ. ಇಂದ್ರ ಪ್ರತಿಮಾಭಂಜನದ ಈ ಘೋರ ದುಷ್ಕೃತ್ಯವು ಪ್ರಚಲಿತ ಋಗ್ವೇದದಷ್ಟು ಮೊದಲೇ ಆರಂಭವಾಗಿದೆ.

ಈ ಹಿನ್ನೆಲೆಯಲ್ಲಿ ಮೂಲವೇದಕಾಲೀನ ಭಾರತದಲ್ಲಿ ಇಂದ್ರನೇ ಏಕಮೇವ ಅದ್ವಿತೀಯ ರಾಷ್ಟ್ರೀಯ ದೇವತೆ ಎನಿಸಿದ್ದನು—ಎಂದು ಮೆಕಡೊನಲ್ ಹೇಳುವ ಮಾತಿನಲ್ಲಿ ವಾಸ್ತವ ಸತ್ಯ ಇದೆ. ಮೇಲೆ ಹೇಳಿದ ಗೀತೆಯು 'ವೇದಾನಾಂ ಸಾಮ ವೇದಃ ಅಸ್ಮಿ । ದೇವಾನಾಂ ಅಸ್ಮಿ ವಾಸವಃ' ಎಂಬ ಮಾತಿನಿಂದ ಗೀತೆಗೆ ಮಾನ್ಯ ವಿರುವ ವೇದದಲ್ಲಿ ಓಂಕಾರ ಪ್ರಣವನಾದ ಇರಲೇಬೇಕು, ವಾಸವಃ ಇಂದ್ರನ ತೇಜೋವಧೆ ಈ ಮೂಲಕ ಆಗಿರಲೇಬೇಕು, ಎಂಬ ಎರಡು ಪ್ರಮುಖ ವಿಚಾರ ಗಳು ನಿಶ್ಚಯವಾದ ಸ್ವರೂಪದಲ್ಲಿ ಬೆಳಕಿಗೆ ಬರುತ್ತಿದೆ.

---

# ಕೃಷ್ಣದೇವರಾಯ ಮತ್ತು ಕನ್ನಡ ಸಂಸ್ಕೃತಿ

—ಡಾ|| ಜಿ. ಎಸ್. ದೀಕ್ಷಿತ

ಈ ಉಪನ್ಯಾಸದಲ್ಲಿ ಎರಡು ಭಾಗಗಳಿವೆ. ಮೊದಲನೆಯದು ಕೃಷ್ಣರಾಯನ ವ್ಯಕ್ತಿತ್ವ ಮತ್ತು ಭಾರತೀಯ ಸಂಸ್ಕೃತಿಗೆ ಅವನು ಸಲ್ಲಿಸಿದ ಸೇವೆ. ಎರಡನೆಯದು ಕನ್ನಡ ಸಂಸ್ಕೃತಿಯ ಅವನ ಪೋಷಣೆ.

## ಕೃಷ್ಣರಾಯನ ಕೀರ್ತಿ

ಕೃಷ್ಣರಾಯನ ಕಾಲದಲ್ಲಿ (ಕ್ರಿ.ಶ. 1509–1529) ಅವನ ಕೀರ್ತಿ ಭಾರತದಲ್ಲೆಲ್ಲಾ ಹರಡಿತ್ತು. ಉದಯಾಂಬರಂನಲ್ಲಿರುವ ಅವನ ಶಾಸನದಲ್ಲಿ ಅವನು ಗಂಗಾತೀರದಿಂದ ಲಂಕೆಯವರೆಗೂ ಹೆಸರುವಾಸಿಯಾಗಿದ್ದನೆಂದು ಹೇಳಿದೆ. ಇದು ಉತ್ಪ್ರೇಕ್ಷೆಯೇನಲ್ಲ. ಗಂಗಾನದಿಗೆ ಅನತಿದೂರದಲ್ಲಿರುವ ಗಯೆಯಲ್ಲಿ ಇವನ ಶಾಸನವೊಂದಿದೆ. ಅವನ ಪರವಾಗಿ ಅವನ ಆಸ್ಥಾನಕವಿ ಮುಕ್ಕು ತಿಮ್ಮಯ್ಯನು ಗಯೆಗೆ ಹೋಗಿ ಕೃಷ್ಣರಾಯನ ಪಿತೃಗಳಿಗೆ ತರ್ಪಣವನ್ನು ಬಿಟ್ಟು ಮೇಲೆ ಹೇಳಿದ ಶಾಸನವನ್ನು ಪ್ರಕಟಿಸಿದನು.[1] ಇದು ಇತಿಹಾಸಕಾರರಿಗೆಲ್ಲಾ ತಿಳಿದ ವಿಷಯ. ಅಷ್ಟು ತಿಳಿಯದೆ ಇರುವುದೆಂದರೆ ಗಯೆಯಲ್ಲಿ ವಿಷ್ಣುಪಾದ ದೇವಸ್ಥಾನದ ಪಕ್ಕದಲ್ಲಿ ಕ್ರಿ. ಶ. 1521ರಲ್ಲಿ ಕೃಷ್ಣರಾಯ ಮತ್ತು ಅವನ ಪಟ್ಟಮಹಿಷಿ ತಿರುಮಲದೇವಿಯ ಹೆಸರಿನಲ್ಲಿ ಒಂದು ಕಲ್ಲಿನ ತೋರಣವನ್ನು ಕಟ್ಟಿಸಿದ್ದು. ಈ ವಿಷಯವನ್ನು ಬುಕ್ಯಾನ್ನನು ತನ್ನ ಪಾಟ್ನಾ-ಗಯಾ ವರದಿಯಲ್ಲಿ 1811ರಲ್ಲಿ ಬರೆದಿದ್ದಾನೆ.[2] ಗಂಗಾನದಿಯ ಉತ್ತರಕ್ಕೂ ಅವನ ಕೀರ್ತಿ ಹಬ್ಬಿತ್ತೆನ್ನಬಹುದು. 1526ರಲ್ಲಿ ಬಾಬರ್ ಮೊಗಲ್ ಸಾಮ್ರಾಜ್ಯವನ್ನು ಡೆಲ್ಲಿಯಲ್ಲಿ ಸ್ಥಾಪಿಸಿದನು. ತನ್ನ ಆತ್ಮಚರಿತ್ರೆಯಲ್ಲಿ ಆ ಕಾಲದ ಭಾರತದ ವಿವಿಧ ಭಾಗಗಳ ರಾಜರು ಯಾರು ಯಾರೆಂದು ಬರೆದಿದ್ದಾನೆ. ಕೃಷ್ಣರಾಯನ ಹೆಸರನ್ನು ಹೇಳದೆ ತನ್ನ ಕಾಲದ ವಿಜಯನಗರದ ಅರಸನು ಅತ್ಯಂತ ಬಲಾಢ್ಯನೆಂದು ಹೇಳಿದ್ದಾನೆ.

ಕೃಷ್ಣರಾಯನ ಕೀರ್ತಿ ಅವನ ರಾಜ್ಯದ ಹೊರಗೂ ಹಬ್ಬಿತ್ತೆನ್ನುವುದಕ್ಕೆ ಇನ್ನೂ ಒಂದೆರಡು ಉದಾಹರಣೆಗಳಿವೆ. ತೆಲುಗು ದೇಶದಲ್ಲಿ ಹುಟ್ಟಿದ್ದ ವಲ್ಲಭಾಚಾರ್ಯರು ಒಂದು ವೈಷ್ಣವ ಪಂಥವನ್ನು ಸ್ಥಾಪಿಸಿದರು. ಈ ಪಂಥವು ಗುಜರಾತ್ ಮತ್ತು ಉತ್ತರ ಭಾರತದಲ್ಲಿ ವಲ್ಲಭೀ ಪಂಥವೆಂದು ಹೆಸರಾಗಿದೆ. ಕೃಷ್ಣರಾಯನ ಆಸ್ಥಾನಕ್ಕೆ ವಲ್ಲಭರು ಬಂದು ತಮ್ಮ ಪಂಥವನ್ನು ಪ್ರತಿಪಾದಿಸಿ ಅವರ ವಿರೋಧಿಗಳನ್ನು ವಾದ

ದಲ್ಲಿ ಸೋಲಿಸಿದರು. ಈ ಸಭೆಗೆ ವ್ಯಾಸಯತಿಗಳು ಅಧ್ಯಕ್ಷರಾಗಿದ್ದರು. ಕೃಷ್ಣರಾಯನು ವಲ್ಲಭರಿಗೆ ಆಚಾರ್ಯರೆನ್ನುವ ಬಿರುದನ್ನು ಕೊಟ್ಟನೆಂದು ವಲ್ಲಭಾಚಾರ್ಯರ ಜೀವನಚರಿತ್ರೆಯಲ್ಲಿ ಹೇಳಿದೆ.[3]

ಕೃಷ್ಣರಾಯನ ಆಸ್ಥಾನಕ್ಕೆ ಹೊರಗಿನಿಂದ ಬಂದ ಇನ್ನೊಬ್ಬ ವಿದ್ವಾಂಸರು ರಾಮೇಶ್ವರ ಭಟ್ಟರು. ಇವರು ಮಹಾರಾಷ್ಟ್ರದ ಪೈಠಣದವರು. ಇವರು ಗಾದಿ ಮನೆತನಕ್ಕೆ ಸೇರಿದವರು. ಮುಂದೆ ಈ ಮನೆತನದವರು ಕಾಶಿಯಲ್ಲಿ ಹೋಗಿ ನೆಲಸಿ ಸಂಸ್ಕೃತ ವಿದ್ಯೆಗೆ ಹೆಸರುವಾಸಿಯಾದರು. ಈ ಮನೆತನದ ಪುರೋಭಿವೃದ್ಧಿಗೆ ಮೂಲಪುರುಷರು ರಾಮೇಶ್ವರಭಟ್ಟರು. ಕಾಶಿಗೆ ಹೋಗಿ ಅಲ್ಲಿ ನೆಲಸುವ ಮುಂಚೆ, ಇವರು ವಿಜಯನಗರಕ್ಕೆ ಹೋಗಿ ಕೃಷ್ಣರಾಯನ ಮನ್ನಣೆಗೆ ಪಾತ್ರರಾದರು. ರಾಯನು ಇವರಿಗೆ ಆನೆ ಒಂಟೆಗಳನ್ನು ಕೊಟ್ಟು ಮರ್ಯಾದೆ ಮಾಡಿದನು. ರಾಮೇಶ್ವರ ಭಟ್ಟರು ಇವುಗಳನ್ನು ಸ್ವೀಕರಿಸಲಿಲ್ಲ. ಗಾದಿ ವಂಶಾನುಚರಿತೆಯಲ್ಲಿ ಮೇಲೆ ಹೇಳಿದ ವಿಷಯಗಳೆಲ್ಲಾ ಬಂದಿವೆ.[4]

## ಕೃಷ್ಣರಾಯನ ವ್ಯಕ್ತಿತ್ವ

ಇದುವರೆಗೂ ಕೃಷ್ಣರಾಯನ ಹೆಸರು ಉತ್ತರಭಾರತದಲ್ಲಿ ಹೇಗೆ ಪ್ರಸಿದ್ಧಿಯಾಗಿತ್ತು ಮತ್ತು ಅವನ ಆಸ್ಥಾನವು ಭಾರತದಲ್ಲಿ ಸಂಸ್ಕೃತ ವಿದ್ಯೆಗೆ ಹೇಗೆ ಹೆಸರಾಗಿತ್ತೆನ್ನುವುದನ್ನು ನೋಡಿದೆವು. ಈಗ ಅವನ ವ್ಯಕ್ತಿತ್ವದ ಬಗೆಗೆ ಒಂದೆರಡು ಮಾತುಗಳು ಅವಶ್ಯ. ಯಾಕೆಂದರೆ ಈ ವ್ಯಕ್ತಿತ್ವದಿಂದಲೇ ತನ್ನ ರಾಜ್ಯಕ್ಕೆ ಭಾರತದಲ್ಲಿ ಗಣ್ಯಸ್ಥಾನವನ್ನು ಗಳಿಸಿದ್ದನು, ಅವನ ವ್ಯಕ್ತಿತ್ವದ ಬಗೆಗೆ ಇದುವರೆಗೂ ಗೊತ್ತಿರುವುದು ಪಯೆಸ್ ಮತ್ತು ನ್ಯೂನಿಜ್ ಎನ್ನುವ ಪೋರ್ಚುಗೀಸ್ ಲೇಖಕರ ಬರವಣಿಗೆಗಳಿಂದ. ತೆಲುಗಿನಲ್ಲಿರುವ 'ರಾಯವಾಚಕಂ' ಎನ್ನುವ ಗ್ರಂಥವೂ ಈ ವಿಷಯದಲ್ಲಿ ಉಪಯುಕ್ತ. ಕೃಷ್ಣರಾಯನ ವಿಷಯದಲ್ಲಿ ಯಾವ ಸಮಕಾಲೀನ ಗ್ರಂಥವೂ ಕನ್ನಡದಲ್ಲಿ ಇರಲಿಲ್ಲ. ಆದರೆ ಇತ್ತೀಚೆಗೆ "ಶ್ರೀಕೃಷ್ಣದೇವರಾಯನ ದಿನಚರಿ"* ಎನ್ನುವ ಗ್ರಂಥವನ್ನು ಬಿ.ಎಂ.ಶ್ರೀ. ಪ್ರತಿಷ್ಠಾನದವರು ಪ್ರಕಟಿಸಿ ಈ ನ್ಯೂನತೆಯನ್ನು ಸ್ವಲ್ಪಮಟ್ಟಿಗೆ ಹೋಗಲಾಡಿಸಿದ್ದಾರೆ. ಆ ಗ್ರಂಥದಲ್ಲಿ ಹೇಳಿದಂತೆ ಕೃಷ್ಣರಾಯನು ತನ್ನ ಆಸ್ಥಾನ ಕವಿಗಳಾದ ಮುಕ್ಕುತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯನವರಿಗೆ

---

* 'ಶ್ರೀಕೃಷ್ಣದೇವರಾಯನ ದಿನಚರಿ' 'ರಾಯವಾಚಕಮು' ಗ್ರಂಥವನ್ನು ಅವಲಂಬಿಸಿ ಬರೆದುದೆಂದೂ ಈಗ ಅಚ್ಚಾಗಿರುವ 'ರಾಯವಾಚಕಮು' ಗ್ರಂಥದ ಪರಿಷ್ಕರಣಕ್ಕೂ ಅದರ ಮೂಲಪಾಠದ ಪುನರ್ನಿರ್ಮಾಣಕ್ಕೂ ದಿನಚರಿಯಿಂದ ಸಹಾಯವಾಗುವುದೆಂದೂ ಈಚಿನ ಸಂಶೋಧನೆಗಳಿಂದ ಹೊರಪಟ್ಟಿದೆ. (ನೋಡಿ : ಶ್ರೀ ಕೆ. ರಾಮಾಂಜನೇಯುಲು : 'ರಾಯವಾಚಕಂ ಮತ್ತು ಕೃಷ್ಣದೇವರಾಯನ ದಿನಚರಿ : ಒಂದು ಪರಿಶೀಲನೆ' ; ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಸಂಪುಟ ೬೦–ಸಂಚಿಕೆ ೨, ಡಿಸೆಂಬರ್ ೧೯೭೫) —ಸಂ.

ಸುಮಾರು 1518-19ರವರೆಗೂ ನಡೆದ ಕೃತಿಗಳನ್ನು ಹೇಳಿಕೊಂಡು ಬರಹೇಳಿದನು. ಅವರು ಪ್ರಸಿದ್ಧ ತೆಲುಗು ಕವಿಗಳು. ಅವರು ತೆಲುಗಿನಲ್ಲಿ ಬರೆದುದರ ಕನ್ನಡ ಭಾಷಾಂತರ ಈ ಗ್ರಂಥ. ಈ ಭಾಷಾಂತರವನ್ನು ಯಾರು ಯಾವಾಗ ಮಾಡಿದರು ಮತ್ತು ಈಗ ಲಭ್ಯವಿರುವ ಕೃತಿಗೂ ಮೂಲಲೇಖನಕ್ಕೂ ಎಷ್ಟು ವ್ಯತ್ಯಾಸವಿದೆ ಎನ್ನುವುದನ್ನು ಹೇಳುವುದು ಕಷ್ಟ. ಇದಕ್ಕೂ ರಾಯವಾಚಕಂಗೂ ಸಾಮ್ಯವಿದೆ ಮತ್ತು ವೈಷಮ್ಯವಿದೆ. ಇವೆರಡೂ ಗ್ರಂಥಗಳ ತುಲನಾತ್ಮಕ ಅಭ್ಯಾಸ ಅವಶ್ಯ.[5]

ಕೃಷ್ಣರಾಯನ ವ್ಯಕ್ತಿತ್ವವು ಈ ದಿನಚರಿಯಲ್ಲಿ ಎದ್ದು ಕಾಣುತ್ತದೆ. ಚಿಕ್ಕಂದಿನಲ್ಲಿಯೆ ಗಟ್ಟಿಗನೆಂದು ಪ್ರಸಿದ್ಧಿಯಾಗಿದ್ದನು. ಆಗ ಇವನ ಅಣ್ಣ ವೀರನರಸಿಂಹ ರಾಜನಾಗಿದ್ದನು (1503-1509). ಅಣ್ಣತಮ್ಮಂದಿರು ಅನ್ಯೋನ್ಯವಾಗಿದ್ದರು. ವೀರನರಸಿಂಹನು ಕೃಷ್ಣರಾಯನನ್ನು ಯುವರಾಜನನ್ನಾಗಿ ಮಾಡಿ ರಾಜ್ಯಭಾರದಲ್ಲಿ ಅವನ ಸಹಾಯವನ್ನು ತೆಗೆದುಕೊಂಡನು.[6] ಹೀಗೆ ತರಬೇತಾದ ಕೃಷ್ಣರಾಯನು ಪಟ್ಟಕ್ಕೆ ಬಂದ ಕೂಡಲೆ ಹಿಂದಿನ ರಾಜರ ಸಡಿಲವಾದ ಆಡಳಿತಕ್ಕೆ ಬೇಸತ್ತು ತಕ್ಷಣ ಕೆಲವು ಸುಧಾರಣೆಗಳನ್ನು ಮಾಡಿ ಆಡಳಿತವನ್ನು ಬಿಗಿಪಡಿಸಿದನು. ಹಿಂದಿನ ರಾಜರು ರಾಜ್ಯದಲ್ಲೆಲ್ಲಾ ಸಂಚಾರ ಮಾಡುತ್ತಿದ್ದಿಲ್ಲ. ಕೃಷ್ಣರಾಯನ ಅಭಿಪ್ರಾಯದಲ್ಲಿ ರಾಜನಾದವನು ರಾಜ್ಯದ ನೆಲವನ್ನೆಲ್ಲಾ ಮೆಟ್ಟಬೇಕು.[7] ಎರಡನೆಯದಾಗಿ ಅಮರಗಾರರು ಅಥವಾ ಪಾಳೇಗಾರರು ತಮ್ಮ ಸೈನ್ಯವನ್ನು ಎಷ್ಟು ಇಟ್ಟುಕೊಳ್ಳಬೇಕೊ ಅಷ್ಟನ್ನೂ ಇಟ್ಟುಕೊಳ್ಳುತ್ತಿರಲಿಲ್ಲ ಮತ್ತು ಕಪ್ಪವನ್ನು ಸರಿಯಾಗಿ ಕೊಡುತ್ತಿರಲಿಲ್ಲ. ಅವರು ಕೊಡಬೇಕಾದ ಕಪ್ಪದ ಬಾಕಿಗೆ ಅವರ ಆನೆ, ಕುದುರೆಗಳನ್ನು ಕೃಷ್ಣರಾಯನು ಅವರಿಂದ ಕೊಂಡುಕೊಂಡನು.[8] ಇದರಿಂದ ಇವನ ಸೈನ್ಯವು ಅವರ ಸೈನ್ಯಕ್ಕಿಂತ ಬಲಿಷ್ಠವಾಯಿತು ಮತ್ತು ಅವರನ್ನು ಹೆಚ್ಚು ಹದ್ದುಬಸ್ತಿನಲ್ಲಿಡುವುದು ಸಾಧ್ಯವಾಯಿತು. ಮೂರನೆಯದಾಗಿ ತನ್ನ ಶತ್ರುಗಳು ತನ್ನ ಮೇಲೆ ಬೀಳುವ ಮುಂಚೆಯೆ ತಾನೇ ಅವರ ಮೇಲೆ ಯುದ್ಧವನ್ನು ಪ್ರಾರಂಭಿಸುತ್ತಿದ್ದನು.[9] 'ದಿನಚರಿ'ಯಲ್ಲಿ ಹೇಳಿದ ಈ ಗುಣಗಳ ಜತೆಗೆ ಯುದ್ಧದಲ್ಲಿ ಇವನು ಹೇಗೆ ತನ್ನ ಸಾಹಸವನ್ನು ಪ್ರದರ್ಶಿಸುತ್ತಿದ್ದನೆನ್ನುವುದಕ್ಕೆ ರಾಯಚೂರು ಯುದ್ಧದ (1520) ಒಂದು ಸನ್ನಿವೇಶವನ್ನು ನ್ಯೂನಿಜನು ಹೃದಯಂಗಮವಾಗಿ ವರ್ಣಿಸಿದ್ದಾನೆ.[10] ಈ ಕದನವು ಪ್ರಾರಂಭವಾಗುತ್ತಲೆ ಕೃಷ್ಣರಾಯನ ಸೈನಿಕರು ಎದುರಾಳಿಗಳ (ಆದಿಲ್‌ಷಹನ) ಬಂದೂಕಿನ ಹೊಡೆತಕ್ಕೆ ದಂಗುಬಡೆದು ಚಲ್ಲಾಪಿಲ್ಲಿಯಾಗಿ ಕದನಕ್ಷೇತ್ರದಿಂದ ಪಲಾಯನ ಮಾಡಲು ಆರಂಭಿಸಿದರು. ಕೃಷ್ಣರಾಯನು ಆಗ ಆ ಹೇಡಿಗಳನ್ನು ಹೀಗೆ ಸಂಬೋಧಿಸಿ "ನೀವು ಒಂದಲ್ಲ ಒಂದು ದಿನ ಸಾಯುವವರೆ. ಹೇಡಿಗಳ ಹಾಗೆ ಮನೆಯಲ್ಲಿ ಸಾಯುವುದಕ್ಕಿಂತ ವೀರರ ಹಾಗೆ ಕದನದಲ್ಲಿ ಕಾದಾಡಿ ಮಡಿದು ವೀರ ಸ್ವರ್ಗವನ್ನು ಸಂಪಾದಿಸಿ. ಹೀಗೆ ಹೊಡೆದಾಡಿ ಸಾಯಲು ಸಿದ್ಧರಾದವರು ನನ್ನ ಒಂದೆ ಬನ್ನಿ" ಎಂದು ಕರೆದ ಕೂಡಲೆ ಅವನ ಸೈನಿಕರು ಓಡಿಹೋಗುವುದನ್ನು ಬಿಟ್ಟು

ಹಿಂತಿರುಗಿ ಶತ್ರುಗಳ ಮೇಲೆ ಬಿದ್ದರು. ಇದನ್ನು ಶತ್ರುಸೈನಿಕರು ನಿರೀಕ್ಷಿಸಿರಲಿಲ್ಲ. ಆದ್ದರಿಂದ ಅವರಿಗೆ ಸೋಲಾಯಿತು. ಹೀಗೆ ಸೋಲಿನ ದವಡೆಯಿಂದ ಜಯವನ್ನು ಸಂಪಾದಿಸಿದ ಕೃಷ್ಣರಾಯನು ನಮ್ಮ ಇತಿಹಾಸದಲ್ಲಿ ಒಳ್ಳೆಯ ಸೇನಾಪತಿ ಎಂದು ಹೆಸರು ಪಡೆದಿದ್ದಾನೆ.

ಯುದ್ಧದಲ್ಲಿ ಪ್ರಸಿದ್ಧನಾದ ಹಾಗೆಯೆ ಕೃಷ್ಣರಾಯನು ಸಂಸ್ಕೃತಿ ಪೋಷಣೆಯಲ್ಲಿಯೂ ಅಷ್ಟೇ ಹೆಸರುವಾಸಿಯಾಗಿದ್ದನು. ಕನ್ನಡ ಸಂಸ್ಕೃತಿಗೆ ಇವನ ಕೊಡುಗೆಗಳನ್ನು ಗುರುತಿಸುವ ಮುಂಚೆ ಇವನು ಆಂಧ್ರನೊ ಕನ್ನಡಿಗನೊ ಎನ್ನುವ ವಾದವನ್ನು ನೋಡೋಣ. ಈಗಿನ ಆಂಧ್ರರು ಅವನು ಕನ್ನಡಿಗನೆಂದು ತಿಳಿದಿಲ್ಲ. ಅವನು ತಮ್ಮವನೇ ಎಂದು ಅವನ ಹುಟ್ಟುಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಅವನ ಹೆಸರನ್ನು ಅನೇಕ ಸಂಘಸಂಸ್ಥೆಗಳಿಗೆ ಇಟ್ಟಿದ್ದಾರೆ. ಅನಂತಪುರದಲ್ಲಿರುವ ವಿಶ್ವವಿದ್ಯಾನಿಲಯಕ್ಕೆ ಕೃಷ್ಣದೇವರಾಯನ ಹೆಸರನ್ನಿಟ್ಟಿದ್ದಾರೆ. ಹೀಗೆ ಅವನನ್ನು ನೆನಪಿಟ್ಟಿರುವುದಕ್ಕೆ ಅನೇಕ ಕಾರಣಗಳಿವೆ. ತೆಲುಗಿನಲ್ಲಿ ಅತ್ಯಂತ ಪ್ರಸಿದ್ಧವಾದ ಪ್ರಬಂಧ 'ಆಮುಕ್ತಮಾಲ್ಯದ'ದ ಕರ್ತೃ ಕೃಷ್ಣರಾಯ. ದೇಶಭಾಷೆಗಳಲ್ಲಿ ತೆಲುಗು ಸುಂದರವಾದುದೆಂದು ಅವನು ನಂಬಿದ್ದನು. ತೆಲುಗು ಕವಿಗಳಾದ ಅಲ್ಲಸಾನಿ ಪೆದ್ದನ್ನ, ಮುಕ್ಕುತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಮೊದಲಾದವರು ಇವನ ಆಸ್ಥಾನವನ್ನು ಅಲಂಕರಿಸಿದ್ದರು. ಇಂತಹ ಕವಿಗಳಿಗೆ ಆಶ್ರಯದಾತನಾದ ಇವನನ್ನು ಆಂಧ್ರಭೋಜನೆಂದು ಕರೆದರು. ಅವನ ಮಂತ್ರಿಗಳಾದ ಸಾಲುವ ತಿಮ್ಮ, ಕೊಂಡಮರಸಯ್ಯ, ಅಯ್ಯಪರಸ ಮತ್ತು ಬಾಚರಸ, ಅವನ ಮುಖ್ಯ ಸೇನಾಪತಿಗಳಾದ ಗನಿತಿಮ್ಮನಾಯುಡು ಮತ್ತು ಪೆಮ್ಮಸಾನಿ ರಾಮಲಿಂಗನಾಯುಡು–ಇವರೆಲ್ಲಾ ತೆಲುಗು ಜನ. ಈ ಎಲ್ಲಾ ಕಾರಣಗಳಿಂದ ಇವನ ಆಸ್ಥಾನ ಒಬ್ಬ ತೆಲುಗು ರಾಜನ ಆಸ್ಥಾನದ ಹಾಗಿತ್ತು.

ಅವನು ಕನ್ನಡನೆನ್ನಲಿಕ್ಕೆ ಬಲವಾದ ಆಧಾರಗಳಿವೆ. ತನ್ನ 'ಆಮುಕ್ತಮಾಲ್ಯದ'ದಲ್ಲಿ ಆತನೇ ತನ್ನನ್ನು ಕನ್ನಡ ರಾಯನೆಂದು ಕರೆದುಕೊಂಡಿದ್ದಾನೆ. ಹಾಗೆ ಕರೆದುಕೊಂಡ ಸಂದರ್ಭ ಹೀಗಿದೆ : ಕೃಷ್ಣರಾಯನಿಗೆ ಒಂದು ಕನಸು ಬಿತ್ತಂತೆ. ಅದರಲ್ಲಿ ಬೆಜವಾಡದ ಹತ್ತಿರವಿರುವ ಶ್ರೀಕಾಕುಲಂನಲ್ಲಿರುವ ಆಂಧ್ರವಿಷ್ಣುವೆನ್ನುವ ದೇವರು ಕನಸಿನಲ್ಲಿ ಕಾಣಿಸಿಕೊಂಡು ಹೀಗೆ ಹೇಳಿದರಂತೆ : "ಎಲೈ ಕನ್ನಡ ರಾಯ, ನೀನು ಕನ್ನಡ ರಾಯ, ನಾನು ತೆಲುಗು ರಾಯ. ನೀನು ನನಗೆ ಒಂದು ತೆಲುಗು ಗ್ರಂಥವನ್ನು ಬರೆದುಕೊಡು. ತೆಲುಗಿನಲ್ಲಿ ಏಕೆ ಬರೆಯಬೇಕೆಂದರೆ, ಹಲವು ಭಾಷೆಗಳನ್ನು ಬಲ್ಲ ನೀನು ಅರಿಯೆಯಾ? ದೇಶಭಾಷೆಗಳಲ್ಲಿ ತೆಲುಗು ಲೇಸು ಎಂದು. ಅದೂ ಅಲ್ಲದೆ, ಸಂಸ್ಕೃತದಲ್ಲಿ ನೀನು ಅನೇಕ ಗ್ರಂಥಗಳನ್ನು ಬರೆದಿರುವುದರಿಂದ ನಿನಗೆ ತೆಲುಗಿನಲ್ಲಿ ಬರೆಯುವುದು ಕಷ್ಟವಾಗುವುದಿಲ್ಲ."[11] ದೇವರ ಮಾತನ್ನು ಲಾಲಿಸಿ

ಕನ್ನಡ ರಾಯ ತೆಲುಗಿನಲ್ಲಿ ಬರೆದನು. ಅವನು ಒಂದು ವೇಳೆ ಆಂಧ್ರನೇ ಆಗಿದ್ದರೆ ತೆಲುಗಿನಲ್ಲಿ ಬರೆಯಲು ಮೇಲೆ ಹೇಳಿದ ಕಾರಣಗಳು ಏಕೆ ಬೇಕಾಗಿತ್ತು?

ಕೃಷ್ಣರಾಯ ತಾನು ಕನ್ನಡನೆಂದು ತಿಳಿದುಕೊಂಡಿದ್ದನಲ್ಲದೆ ಆ ಕಾಲದ ತೆಲುಗು ಜನರು ಅವನನ್ನು ಕನ್ನಡನೆಂದು ತಿಳಿದಿದ್ದರು. ಅವನನ್ನು ಪೆದ್ದನ ಕನ್ನಡ ರಾಜ್ಯರಮಾರಮಣನೆಂದು ಕರೆದಿದ್ದಾನೆ. ಹೀಗೆ ಕರೆದಿದ್ದರಿಂದ ಅವನು ಕನ್ನಡನೆಂದು ಈಗಿನ ತೆಲುಗು ವಿದ್ವಾಂಸರು ಒಪ್ಪುವುದಿಲ್ಲ. ತೆಲುಗು ಆದವರು ಕನ್ನಡ ರಾಜ್ಯ ರಮಾರಮಣನಾಗಲು ಬರುವುದಿಲ್ಲವೇನೆಂದು ಕೇಳುತ್ತಾರೆ. ಇಷ್ಟಾದರೂ ನೀವು ಅವನನ್ನು ನಿಮ್ಮವನೆಂದು ತಿಳಿದರೆ ಅದು ನಮಗೆ ಬೇಕಾದದ್ದೆ. ನಮ್ಮ ತೆಲುಗು ರಾಜ ನಿಮ್ಮವನು ಎನ್ನುವ ಹಾಗೆ ವರ್ತಿಸಿದನೆನ್ನುತ್ತಾರೆ. ಕನ್ನಡಿಗರೂ ನಮ್ಮ ಕನ್ನಡರಾಯ ನೀವು ತೆಲುಗು ಅನ್ನುವಷ್ಟು ನಿಮ್ಮವನಾದನೆಂದು ಹೇಳಲು ಆಸ್ಪದ ಇದೆ.

ಅವನ ಮಾತೃಭಾಷೆ ಮತ್ತು ಹುಟ್ಟೂರುಗಳು ಯಾವುವು? ಈ ಪ್ರಶ್ನೆಗಳ ಉತ್ತರಗಳಿಂದ ಈ ವಾದಕ್ಕೆ ಉತ್ತರ ಸಿಗಬಹುದೇನೊ, ಈಗ ನೋಡೋಣ. ಶ್ರೀ ರಾಳ್ಳಪಲ್ಲಿ ಅನಂತಕೃಷ್ಣಶರ್ಮರು ಅವನ ಮಾತೃಭಾಷೆ ವಿಷಯಕ್ಕೆ ಹೀಗೆ ಹೇಳುತ್ತಾರೆ: "ಆತನಿಗೆ ಅನೇಕ ದೇಶಭಾಷೆಗಳನ್ನು ಮಾತನಾಡುವ ಪರಿಚಯ ವಿದ್ದಿರಬಹುದು. ಆದರೆ ವ್ಯಾಸಂಗಮೂಲವಾದ ಪಾಂಡಿತ್ಯವನ್ನು ತೆಲುಗಿನಲ್ಲಿ ಹೆಚ್ಚಾಗಿ ಪಡೆದಿದ್ದನು. ಆದ್ದರಿಂದಲೇ ತೆಲುಗಿನ ವಿಷಯದಲ್ಲಿ ಇಷ್ಟು ಅಭಿಮಾನ. ಅಷ್ಟೇ ಹೊರತು, ಕೃಷ್ಣದೇವರಾಯನ ತಾಯ್ನುಡಿ-ಮನೆಯ ಮಾತು ತೆಲುಗೊ, ಕನ್ನಡವೊ ನನಗೆ ತಿಳಿಯದು. ಅವನ ಮಾತೃಭಾಷೆ ಇವೆರಡೂ ಅಲ್ಲದೆ ತುಳು ಅಂದರೆ ನಾನು ಅಲ್ಲ ಅನ್ನುವ ಹಾಗಿಲ್ಲ."[12] ಆದರೆ ಕನ್ನಡ ಅವನ ಮಾತೃಭಾಷೆ ಎಂದು ಹೇಳಲು ಅವಕಾಶವಿದೆ. ಇದು ಇವನ ಊರು ಯಾವುದೆನ್ನುವುದರ ಮೇಲೆ ಅವಲಂಬಿಸಿದೆ.

ಕೃಷ್ಣರಾಯನ ಇತ್ತೀಚಿನ ಪೂರ್ವಜರು ಉತ್ತರ ಆರ್ಕಾಟು ಜಿಲ್ಲೆಯ ದೇವಕಿ ಪುರಂನವರು. ಇದು ತೆಲುಗು ಪ್ರದೇಶಕ್ಕೆ ಹೊಂದಿಕೊಂಡಿರುವುದರಿಂದ ಇವರು ತೆಲುಗು ಅನ್ನಬಹುದು, ಅಂದಿದ್ದಾರೆ. ಆದರೆ ಇವರು ತಮ್ಮನ್ನು ತುಳು ಪ್ರದೇಶ ದವರೆಂದು ಹೇಳಿಕೊಳ್ಳುತ್ತಾರೆ.[13] ಆದ್ದರಿಂದ ತುಳುವದಿಂದ ಇವರು ವಿಜಯನಗರದ ಅಧಿಕಾರಿಗಳಾಗಿ ದೇವಕೀಪುರಂಗೆ ಹೋಗಿ ಕೆಲವು ವರ್ಷಗಳು ಅಲ್ಲಿ ನೆಲಸಿರಬೇಕು. ಅವರ ಅನೇಕ ಶಾಸನಗಳಲ್ಲಿ ತಮ್ಮನ್ನು ತುಳುವೇಂದ್ರರೆಂದು ಕರೆದುಕೊಳ್ಳುತ್ತಾರೆ. ಆ ಶಾಸನಗಳಲ್ಲಿ ಇವರ ಪೂರ್ವಜರಲ್ಲಿ ತಿಮ್ಮ, ಅವನ ಮಗ ಈಶ್ವರ, ಅವನ ಮಗ ನರಸ. ಈ ಮೂರೇ ಜನರ ಹೆಸರುಗಳನ್ನು ಹೇಳುತ್ತಾರೆ. ನರಸನ ಮಕ್ಕಳು ವೀರನರಸಿಂಹ, ಕೃಷ್ಣ ಮತ್ತು ಅಚ್ಯುತ.[14] ಈ ವಂಶಾವಳಿಯಲ್ಲಿ ಮೊದಲನೆಯವ ನಾದ ತಿಮ್ಮನು ತುಳುವದಲ್ಲಿ ಒಬ್ಬ ತಂಡರಸನಾಗಿರಬೇಕು. ಅವನೋ ಅವನ

ಮಗ ಈಶ್ವರನೋ ವಿಜಯನಗರ ಅರಸರ ಸೇವಕನಾಗಿರಬೇಕು. ಡಾ॥ ಸೂರ್ಯ ನಾಥ ಕಾಮತರು[15]_ 'ತುಳುವರಲ್ಲಿ ಇವರು ಗೆರಸೊಪ್ಪೆಯ ಅರಸರಾಗಿದ್ದರು. ಅಲ್ಲಿ ಅವರು ಸಾಳುವರೆಂದುಕೊಳ್ಳುತ್ತಿದ್ದರು. ವಿಜಯನಗರಕ್ಕೆ ಬಂದಮೇಲೆ ಅಲ್ಲಿಯ ಸಾಳುವ ಅರಸರಿಗಿಂತ ತಾವು ಬೇರೆಯೆಂದು ತೋರಿಸಿಕೊಳ್ಳಲಿಕ್ಕೆ ತಮ್ಮನ್ನು ತುಳುವರೆಂದುಕೊಂಡಿದ್ದಾರೆ' ಎನ್ನುತ್ತಾರೆ. ಇದು ಅಸಾಧ್ಯವೇನೂ ಅಲ್ಲ. ಕನ್ನಡ ನಾಡಿನ ಒಂದು ಭಾಗವಾದ ತುಳುನಾಡು ಕೃಷ್ಣರಾಯ ವಂಶಜರ ಜನ್ಮಭೂಮಿ ಯಾದ್ದರಿಂದ ಅವನ ಮಾತೃಭಾಷೆ ಕನ್ನಡವೆನ್ನಬಹುದು. ವಿಜಯನಗರದಲ್ಲಿ ಅನೇಕ ತೆಲುಗು ಕವಿಗಳು ರಾಜಾಶ್ರಯ ಪಡೆದು ನೆಲಸಿದ್ದರು. ಅವರ ಸಹವಾಸದಿಂದ ಕೃಷ್ಣರಾಯನಿಗೆ ತೆಲುಗು ಭಾಷೆ ಮತ್ತು ಸಾಹಿತ್ಯಗಳ ಮೇಲೆ ಅಭಿಮಾನ, ಅದರಲ್ಲಿ ಬರೆಯಬೇಕೆಂಬ ಆಸಕ್ತಿ ಹುಟ್ಟಿರಬೇಕು. ಅವನ ಆಮುಕ್ತಮಾಲ್ಯದದಲ್ಲಿ ಅನೇಕ ಕನ್ನಡ ಶಬ್ದಗಳು, ಕೆಲವು ತುಳು ಶಬ್ದಗಳು ಇರುವುದರಿಂದ ಅವನ ವಂಶಜರು ತುಳುವರೆಂಬುದು ಖಚಿತ.[16]

ಕೃಷ್ಣರಾಯನು ಕನ್ನಡ ಸಾಹಿತ್ಯಕ್ಕೆ ಕೊಟ್ಟ ಪ್ರೋತ್ಸಾಹದಿಂದ ಅವನ ಕನ್ನಡತನ ಹೆಚ್ಚು ಪ್ರಕಟವಾಗುತ್ತದೆ. ಇವನು ಕನ್ನಡ ಕವಿಗಳಿಗೆ ಕೊಟ್ಟ ಪ್ರೋತ್ಸಾಹದ ಒಂದೇ ಒಂದು ನಿದರ್ಶನ ಎಲ್ಲರಿಗೂ ಗೊತ್ತಿದೆ. ಅದೇದರೆ ಅವನ ಆಸ್ಥಾನದಲ್ಲಿದ್ದ ಕವಿ ತಿಮ್ಮಣ್ಣನಿಗೆ, ಕುಮಾರವ್ಯಾಸ ಭಾರತದ ಹತ್ತು ಪರ್ವಗಳನ್ನು ಬರೆದನು ; ಉಳಿದ ಪರ್ವಗಳನ್ನು ನೀನು ಬರೆ, ಎಂದು ಹೇಳಿದ್ದು. ಈ ಆಜ್ಞೆಯನ್ನು ಅನುಸರಿಸಿ ಅವನು 'ಕೃಷ್ಣರಾಯ ಭಾರತ'ವನ್ನು ಬರೆದನು.[17] ಆದರೆ ನಿಜವಾಗಿ ನೋಡಿದರೆ ಕೃಷ್ಣರಾಯನು ಒಬ್ಬ ಕನ್ನಡ ಕವಿಗೆ ಮಾತ್ರ ಆಶ್ರಯದಾತನಾಗಿರಲಿಲ್ಲ. ಅವನಿಂದ ಅನೇಕ ಕನ್ನಡ ಕವಿಗಳು ಪ್ರೋತ್ಸಾಹವನ್ನು ಪಡೆದರು. ಇದರಿಂದ ಕನ್ನಡ ಸಾಹಿತ್ಯದಲ್ಲಿ ಭಾಗವತ ಸಾಹಿತ್ಯದ ಸುವರ್ಣಯುಗವಾಯಿತೆಂದು ಹೇಳ ಬಹುದು.[18]

ಚಾಟು ವಿಠ್ಠಲನಾಥನು ಕನ್ನಡ ಭಾಗವತವನ್ನು ಕೃಷ್ಣರಾಯ ಅಚ್ಯುತರಾಯರ ಕಾಲದಲ್ಲಿ ಬರೆದನೆಂದು ಕವಿಚರಿತೆಕಾರರು[19] ಹೇಳುತ್ತಾರೆ. ಅದಕ್ಕೆ ಆಧಾರವಾಗಿ ಕೆಳಗಿನ ಪದ್ಯಗಳನ್ನು ಉದಾಹರಿಸುತ್ತಾರೆ :

> ಸದಮಲಾಚ್ಯುತ ಕೃಷ್ಣರಾಯರ ।
> ಹೃದಯವೆನಿಸುವ ಭಾಗವತ ಶಾ-।
> ಸ್ತ್ರದ ಮಹಾಸತ್ಕೀರ್ತಿ ಲಕ್ಷ್ಮಿಯ ವಿಜಯಮಂದಿರವ ॥

ಇದರಿಂದ ಭಾಗವತವು ಕೃಷ್ಣರಾಯನ ಹೃದಯದಂತಿತ್ತು ಎಂದು ಅರ್ಥ ವಾಗುತ್ತದೆ. ಈ ಕೃಷ್ಣರಾಯನು ವಿಜಯಮಂದಿರ ಅಥವಾ ವಿಜಯನಗರದವನು ಎಂದು ಕವಿಚರಿತೆಕಾರರು ಹೇಳುತ್ತಾರೆ. ಮುಂದಿನ ಪದ್ಯದಲ್ಲಿ ಕೃಷ್ಣರಾಯನು ಭಾಗವತವನ್ನು ಕನ್ನಡದಲ್ಲಿ ಬರೆಯಿಸಿದನೆಂದು ಸ್ಪಷ್ಟವಾಗಿ ಹೇಳಿದೆ :

ನಿರುಪಮೋಚ್ಯುತ ಕೃಷ್ಣರಾಯರ ।
ಪರಮ ತೇಜಃಪುಂಜವೇ ಚೇ ।
ತರಿಸಿ ಗುರುರೂಪಾಗಿ ಭಾಗವತಾಂತರಂಗವನು ॥
ಧರೆಗೆ ಕನ್ನಡವಾಗಿ ತೆಗೆದು-।
ದ್ಧರಿಸಿ ಕಡೆಗಾಣಿಸಿದನತ್ಯ-।
ಚ್ಚರಿಯವೆನಲು ಸದಾಚ್ಯುತಾರಣ್ಯಾಖ್ಯ ಯತಿರಾಯ ॥

ಅಂದರೆ ಭಾಗವತರೂಪವಾಗಿರುವ ಕೃಷ್ಣರಾಯನ ಹೃದಯವು ಗುರುರೂಪವನ್ನು ಧರಿಸಿ ಭಾಗವತವನ್ನು ಕನ್ನಡದಲ್ಲಿ ನುಡಿಯಿಸಿತು. ಈ ಭಾಗವತ ಸಾಹಿತ್ಯವನ್ನು ಚಾಟುವಿಠ್ಠಲನಾಥನು ಆರಂಭಿಸಲಿಲ್ಲ. ಅವನು ತನ್ನ ಇನ್ನೊಂದು ಕೃತಿಯಾದ ಭಾರತದಲ್ಲಿ ಕುಮಾರವ್ಯಾಸನ ಆಸ್ತಿಕ ಮತ್ತು ಪೌಲೋಮ ಪರ್ವಗಳನ್ನು ಅನುಸರಿಸಿದ್ದಾನೆ. ಆದ್ದರಿಂದ ಕುಮಾರವ್ಯಾಸನೇ ಕನ್ನಡದಲ್ಲಿ ಭಾಗವತ ಸಾಹಿತ್ಯ ರಚನೆಗೆ ಮೊದಲನೆಯವನು. ಕುಮಾರವ್ಯಾಸನಿಗೆ ಯಾರಿಂದ ಸ್ಫೂರ್ತಿ ಬಂತೆನ್ನುವ ಪ್ರಶ್ನೆಗೆ ಅವನೇ ಹೀಗೆ ಉತ್ತರವನ್ನು ಹೇಳುತ್ತಾನೆ: "ತಿಳಿಯಹೇಳುವೆ ಕೃಷ್ಣಕಥೆಯನು ಕೃಷ್ಣ ಮೆಚ್ಚಲಿಕೆ." ಈತನ ಮೆಚ್ಚುಗೆಯಕ್ಕರೆಯ ಕೃಷ್ಣನು ಶ್ರೀಕೃಷ್ಣನೋ ಅಥವಾ ವಿಜಯನಗರದ ಕೃಷ್ಣರಾಯನೋ ಎಂದು ಬಿ.ಎಂ.ಶ್ರೀ.ಯವರು ಕೇಳುತ್ತಾರೆ.[20] ಅವರು ಹೀಗೆ ಕೇಳಿದಾಗ ಕೃಷ್ಣರಾಯನಿಗೂ ಕುಮಾರವ್ಯಾಸನಿಗೂ ಇರಬಹುದಾಗಿದ್ದ ಸಂಬಂಧವು ಅಷ್ಟು ಗೊತ್ತಿರಲಿಲ್ಲ. ಈ ವಿಷಯದಲ್ಲಿ ಈಗ ಹೆಚ್ಚು ಮಾಹಿತಿಯು ಲಭ್ಯವಾಗಿದೆ.

ಕುಮಾರವ್ಯಾಸ ಅಥವಾ ಗದುಗಿನ ನಾರಣಪ್ಪನ ವಂಶಜರು ಗದುಗಿನ ಹತ್ತಿರವಿರುವ ಕೋಳಿವಾಡ ಗ್ರಾಮದಲ್ಲಿ ಇಂದಿಗೂ ಇದ್ದಾರೆ. ಅವರು ತಮ್ಮ ಕುಲವೃತ್ತಾಂತವನ್ನು ಕಾಪಾಡಿಕೊಂಡು ಬಂದಿದ್ದಾರೆ. ಕವಿವರ್ಯ ಬೇಂದ್ರೆಯವರು ಈ ಕುಲವೃತ್ತಾಂತವನ್ನು ನೋಡಿ ಗದುಗಿನ ನಾರಣಪ್ಪನ ಜೀವಿತ ಕಾಲ 15ನೆಯ ಶತಮಾನದ ಕೊನೆಯ ಭಾಗವೆಂದಿದ್ದಾರೆ.[21] ಕೋಳಿವಾಡದಲ್ಲಿಯೇ ದೊರಕುವ ಇನ್ನೊಂದು ಆಧಾರದಿಂದ ನಾರಣಪ್ಪನ ಕಾಲವನ್ನು ಕೃಷ್ಣರಾಯನ ಕಾಲದವರೆಗು ಅಂದರೆ 16ನೆಯ ಶತಮಾನದ ಮೊದಲು ಕಾಲುಭಾಗದವರೆಗು ತೆಗೆದುಕೊಂಡು ಹೋಗಬಹುದು. ಕೋಳಿವಾಡ ಗ್ರಾಮದ ಮಾಧವ ಜನಾರ್ದನ ದೇವಸ್ಥಾನದಲ್ಲಿರುವ ಕ್ರಿ.ಶ. 1563ರ ಶಾಸನವು[22] ನಾರಣಪ್ಪನ ಮನೆತನದ ಮೇಲೆ ಹೆಚ್ಚು ಬೆಳಕನ್ನು ಚೆಲ್ಲುತ್ತದೆ. ಅದರ ಪ್ರಕಾರ ಈ ಮನೆತನದವರು ವಿಜಯನಗರದ ಸೈನ್ಯದಲ್ಲಿ ಗಜಸೇನಾಧಿಪತಿಗಳಾಗಿದ್ದರು. ಈ ಶಾಸನವನ್ನು ಬರೆದಾಗ ಅಂದರೆ ಕ್ರಿ.ಶ. 1563ರಲ್ಲಿ ಆನೆಯ ದೇವಪ್ಪಯ್ಯ ಗಜಸೇನಾಧಿಪತಿಯಾಗಿದ್ದನು. ಇವನು ವೀರನಾರಯಣಯ್ಯನ ಮೊಮ್ಮಗ. ಮೊಮ್ಮಗ ಕ್ರಿ.ಶ. 1563ರಲ್ಲಿ ಗಜಸೇನಾಧಿಪತಿಯಾಗಿದ್ದರೆ ಅವರ ತಾತ ಕುಮಾರವ್ಯಾಸ ಆ ಶತಮಾನದ ಆದಿಭಾಗದಲ್ಲಿಯೂ

ಇದ್ದನೆನ್ನಬಹುದು. ಈ ಕಾರಣದಿಂದ ಅವನಿಗೆ ಯುವಕ ಕೃಷ್ಣರಾಯನ ಪರಿಚಯವಿದ್ದಿರಬೇಕು. ಕುಮಾರವ್ಯಾಸನು ಕವಿಯಾಗಿದ್ದರಿಂದಲೂ ಗಜಸೇನಾಧಿಪತಿಯಾಗಿದ್ದರಿಂದಲೂ ಅವನಿಗೂ ಕೃಷ್ಣರಾಯನಿಗೂ ನಿಕಟ ಪರಿಚಯವಿದ್ದಿರಬೇಕು. ತಿಮ್ಮಣ್ಣ ಕವಿಗೆ ಕುಮಾರವ್ಯಾಸನ ಕೃತಿಯನ್ನು ಪೂರ್ಣಗೊಳಿಸೆಂದಿರಬೇಕಾದರೆ ಕೃಷ್ಣರಾಯನಿಗೆ ಆ ಕಾವ್ಯದ ಮಹತಿಯ ಪರಿಚಯ ಚೆನ್ನಾಗಿರಬೇಕು. ಆದ್ದರಿಂದ ಶ್ರೀಯುವರ ಊಹೆ ಅಂದರೆ ಕುಮಾರವ್ಯಾಸ ಕೃಷ್ಣಕಥೆ ಹೇಳಿದ್ದು ಕೃಷ್ಣರಾಯನನ್ನು ಮೆಚ್ಚಿಸಲಿಕ್ಕೆ ಎನ್ನುವ ಊಹೆ ಸತ್ಯಕ್ಕೆ ಅಷ್ಟು ದೂರವಾಗಿರಲಿಕ್ಕಿಲ್ಲ. ನಾರಣಪ್ಪನಿಂದ ಕನ್ನಡದಲ್ಲಿ ಭಾಗವತ ಸಾಹಿತ್ಯ ಉದಯವಾಗಿರಬೇಕು. ಇದಕ್ಕೆ ಕೃಷ್ಣರಾಯನ ಮೆಚ್ಚಿಗೆ ದೊರೆತಿರಬೇಕು.

ಭಾಗವತ ಸಾಹಿತ್ಯವನ್ನು ಕನ್ನಡದಲ್ಲಿ ಮುಂದುವರಿಸಿದ ಕವಿಗಳು ತಿಮ್ಮಣ್ಣ. ಚಾಟುವಿಠ್ಠಲನಾಥ, ಲಕ್ಷ್ಮೀಶ ಮತ್ತು ಕನಕದಾಸ. ಇವರೆಲ್ಲರೂ ತಮ್ಮ ಕಥೆಗಳಿಗೆ ನಾಯಕ ಕೃಷ್ಣನೇ ಎಂದಿದ್ದಾರೆ. ಅವರ ಮುಖಾಂತರ ಚಾಟುವಿಠ್ಠಲನಾಥ ಹೇಳಿದ ಹಾಗೆ ಕೃಷ್ಣರಾಯನು ಪ್ರತ್ಯಕ್ಷವಾಗಿ ಆಗಲಿ ಪರೋಕ್ಷವಾಗಿಯಾಗಲಿ ಗುರುರೂಪವಾಗಿ ಭಾರತಾಂತರಂಗವನು ಧರೆಗೆ ಕನ್ನಡವಾಗಿ ತೆಗೆದು ಉದ್ಧರಿಸಿದನು.

ಈ ಚಳವಳಿಯಲ್ಲಿದ್ದವರು ಇನ್ನೊಬ್ಬ ಪ್ರಮುಖರು ಮತ್ತು ಕೃಷ್ಣರಾಯನಿಗೆ ಅತ್ಯಂತ ನಿಕಟವರ್ತಿಗಳಾಗಿದ್ದವರು ವ್ಯಾಸರಾಯರು. ಇವರು ಕೃಷ್ಣರಾಯನಿಗೆ ರಾಜಗುರುವಿನ ಸ್ಥಾನದಲ್ಲಿದ್ದರು. ಆತನು ತನ್ನ ತಂದೆ ನರಸರಾಯನಿಗೆ ವ್ಯಾಸರಾಯರು ಗುರುಗಳಾಗಿದ್ದುದನ್ನು ನೋಡಿದ್ದನು. ಕೃಷ್ಣರಾಯನು ರಾಜಧಾನಿಯಲ್ಲಿದ್ದಾಗ ವ್ಯಾಸರಾಯರ ದರ್ಶನವಿಲ್ಲದೆ ಇರುತ್ತಿರಲಿಲ್ಲ. ವ್ಯಾಸರಾಯರು ವಿಜಯನಗರದಲ್ಲಿ ಒಂದು ವಿಶ್ವವಿದ್ಯಾನಿಲಯದಂತಹ ಸಂಸ್ಥೆಯನ್ನು ಸ್ಥಾಪಿಸಿದ್ದರು. ಅವರ ಚಟುವಟಿಕೆಗಳಲ್ಲಿ ಕೃಷ್ಣರಾಯನು ಪಾಲುಗೊಳ್ಳುತ್ತಿದ್ದನು.

ಕೃಷ್ಣರಾಯನ ಆಸ್ಥಾನದಲ್ಲಿ ಧರ್ಮದ ಬಗೆಗೆ ಚರ್ಚೆ ಬಂದಾಗ ವ್ಯಾಸರಾಯರದು ಕೊನೆಯ ನಿರ್ಣಯ. ಸೋಮನಾಥನ ವ್ಯಾಸಯೋಗಿ ಚರಿತ್ರೆಯಲ್ಲಿ[23] ಇದಕ್ಕೆ ಒಂದು ನಿದರ್ಶನವಿದೆ. ಕಳಿಂಗದ ವಿದ್ಯಾಧರ ಮಹಾಪಾತ್ರನು ಒಂದು ಮಹಾಗ್ರಂಥವನ್ನು ರಚಿಸಿ ಅದನ್ನು ವ್ಯಾಸರಾಯರಿಗೆ ತೋರಿಸುವಂತೆ ಹೇಳಿಕಳಿಸಿದ್ದನಂತೆ. ಅಂದರೆ ಅಂತಹ ಗ್ರಂಥವನ್ನು ಇನ್ನಾರಿಂದಲೂ ಬರೆಯಲು ಸಾಧ್ಯವಿಲ್ಲವೆನ್ನುವ ಹೆಮ್ಮೆಯಿಂದ ವ್ಯಾಸರಾಯರು ಆ ಗ್ರಂಥಕ್ಕೆ ಖಂಡನ ರೂಪವಾದ ಉತ್ತರವನ್ನು ತಕ್ಷಣ ಬರೆಯಿಸಿದ್ದನ್ನು ನೋಡಿ ಕೃಷ್ಣರಾಯನಿಗೆ ಆಶ್ಚರ್ಯ ಆನಂದಗಳಾದವಂತೆ.

ವ್ಯಾಸರಾಯರಿಗೆ ಕೃಷ್ಣರಾಯನು ಅನೇಕ ದತ್ತಿಗಳನ್ನು ಕೊಟ್ಟನು. ಅವರು ಅವನ ಕೆಲಸವನ್ನು ಮೆಚ್ಚುತ್ತಿದ್ದರು. ಕೃಷ್ಣರಾಯನು ಉದಯಗಿರಿಯನ್ನು ಗೆದ್ದು

ಅಲ್ಲಿಂದ ಬಾಲಕೃಷ್ಣ ವಿಗ್ರಹವನ್ನು ತಂದು ಅದಕ್ಕೆ ವಿಜಯನಗರದಲ್ಲಿ ಕೃಷ್ಣ ದೇವಸ್ಥಾನವನ್ನು ಕಟ್ಟಿಸಿದಾಗ

> ಧರೆಗಧಿಕವೆಂದೆನಿಪ ವಿದ್ಯಾನಗರ ಒಳಿತೆಂದು ಉದ್ದ
> ಗಿರಿಯಿಂದ ಬಂದ ಮುದ್ದು ಬಾಲಕೃಷ್ಣನಮ್ಮ

ಎಂದು ಹಾಡಿದರು. ಕೃಷ್ಣರಾಯನಿಗೆ ಕುಹುಯೋಗ ಬಂದಾಗ ಅವನಿಗೆ ವ್ಯಾಸ ರಾಯರು ನೆರವಾದುದು ಎಲ್ಲರಿಗೂ ಗೊತ್ತಿದೆ.

ವ್ಯಾಸರಾಯರು ಸ್ಥಾಪಿಸಿದ ವ್ಯಾಸಕೂಟದಿಂದ ವಿದ್ವಾಂಸವರ್ಗವನ್ನು ಯತಿಗಳ ಗುಂಪನ್ನು ಬೆಳೆಸಿದರು. ದಾಸಕೂಟದಿಂದ ದೀಕ್ಷಾಬದ್ಧ ದಾಸರ ಗುಂಪನ್ನು ಕಟ್ಟಿ ಕನ್ನಡ ಸಾಹಿತ್ಯ ಮತ್ತು ಕರ್ನಾಟಕ ಸಂಗೀತಗಳಿಗೆ ಒಂದು ಹೊಸ ತಿರುವನ್ನು ಕೊಟ್ಟರು. ಅಲ್ಲದೆ, ದಾಸರ ಮುಖಾಂತರ ಭಕ್ತಿಮಾರ್ಗವನ್ನು ಮನೆಮನೆಗೂ ಮುಟ್ಟುವಂತೆ ಮಾಡಿದರು. ಹೀಗೆ ವ್ಯಾಸರಾಯರಿಗೂ ಮತ್ತು ಅವರ ಅನುಯಾಯಿ ಗಳಿಗೂ ಕೊಟ್ಟ ಪ್ರೋತ್ಸಾಹದಿಂದ ಕೃಷ್ಣರಾಯನು ಕನ್ನಡ ಸಂಸ್ಕೃತಿಯು ಸರ್ವತೋ ಮುಖವಾಗಿ ಬೆಳೆಯುವಂತೆ ಮಾಡಿದನು.

ಸಾಹಿತ್ಯ, ಸಂಗೀತ, ಭಕ್ತಿಮಾರ್ಗ, ನೀತಿಬೋಧೆಗಳಿಗೆ ಕೊಟ್ಟ ಪ್ರೋತ್ಸಾಹ ವಲ್ಲದೆ ಇನ್ನೂ ಅನೇಕ ಕ್ಷೇತ್ರಗಳಲ್ಲಿ ಕೃಷ್ಣರಾಯನು ಎಸಗಿದ ಕೆಲಸವನ್ನು ನಾವು ಮರೆಯುವಂತಿಲ್ಲ. ದೇವಸ್ಥಾನಗಳನ್ನು ತೆಗೆದುಕೊಂಡರೆ ಹಂಪೆಯಲ್ಲಿರುವ ಎಲ್ಲಾ ಮುಖ್ಯ ದೇವಸ್ಥಾನಗಳನ್ನು ಕಟ್ಟಿಸಿದನು ಇಲ್ಲವೆ ಪುನರುದ್ಧಾರ ಮಾಡಿದನು. ರಾಜ್ಯ ದಲ್ಲಿಯ ಎಲ್ಲಾ ಮುಖ್ಯ ದೇವಸ್ಥಾನಗಳ ಪುನರುದ್ಧಾರ ಮಾಡಿ ಅವುಗಳಿಗೆ ರಾಯ ಗೋಪುರಗಳನ್ನೂ ಕಟ್ಟಿಸಿದನು. ಅಂತೆಯೆ ಅವೆಲ್ಲಾ ಇವತ್ತಿನವರೆಗೂ ಸುರಕ್ಷಿತ ವಾಗಿವೆ. ಅವನು ಕಟ್ಟಿಸಿದ ಎಷ್ಟೋ ಕೆರೆಗಳು ಕಾಲುವೆಗಳು ಇವತ್ತಿನವರೆಗೂ ಹಂಪೆಯ ಸುತ್ತಮುತ್ತ ಕೆಲಸ ಮಾಡುತ್ತಿವೆ. ರೈತರಿಗೆ ಅನುಕೂಲವಾಗುವಂತೆ ಭೂಕಂದಾಯವನ್ನು ನಿಗದಿ ಮಾಡಿದನು. ರೈತರಿಗೆ ಇದು ವರದಾನವಾಯಿತು. ಈ ಪದ್ಧತಿಯನ್ನು ಇವನ ಶತ್ರುಗಳ ರಾಜ್ಯದಲ್ಲಿ ಕೂಡ ಅನುಸರಿಸಿದರು. ಈ ಪದ್ಧತಿಗೆ ರಾಯರೇಖಾ ಎಂದು ಹೆಸರು.[24]

ಹೀಗೆ ಕನ್ನಡದಲ್ಲಿ ಭಾಗವತ ಸಾಹಿತ್ಯ, ದಾಸ ಸಾಹಿತ್ಯ ಮತ್ತು ವಿಜಯನಗರ ಸಾಮ್ರಾಜ್ಯದಲ್ಲಿ ರಾಯರೇಖಾ, ರಾಯಗೋಪುರ, ಮತ್ತು ರಾಯಕಾಲುವೆ ಅಥವಾ ಕೆರೆಗಳನ್ನು ಒದಗಿಸಿ ಕೊಟ್ಟು, ತೆಲುಗು ಮತ್ತು ತಮಿಳು ಜನರಿಗೂ[25] ಬೇಕಾದವ ನಾಗಿದ್ದು, ಭಾರತದಲ್ಲಿ ಸಂಸ್ಕೃತ ವಿದ್ಯೆಗೆ ಮತ್ತು ಹಿಂದೂಧರ್ಮಕ್ಕೆ ಆಶ್ರಯ ದಾತನೆಂದು ಹೆಸರಾದ ಕೃಷ್ಣರಾಯನನ್ನು ತೆಲುಗು ಜನರು ನೆನಪಿಟ್ಟುಕೊಂಡ ಹಾಗೆ ಕನ್ನಡಿಗರೂ ನೆನಸಬೇಕು.

## ಟಿಪ್ಪಣಿಗಳು ಮತ್ತು ಆಧಾರಗಳು

1 ಕೃಷ್ಣರಾಯನ ಗಯಾ ಶಾಸನದ ಬಗ್ಗೆ ಎನ್. ವೆಂಕಟರಮಣಯ್ಯ ಮತ್ತು ಕೆ. ಹೆಚ್. ಶರ್ಮಾ ಇವರ ನಡುವೆ ನಡೆದ ಚರ್ಚೆಯನ್ನು ತೆಲುಗು ಭಾರತೀ ಪತ್ರಿಕೆಯಲ್ಲಿ ಕೆಳಗೆ ನಮೂದಿಸಿದ ಸಂಚಿಕೆಗಳಲ್ಲಿ ಓದಬಹುದು–1959 ಆಗಸ್ಟ್, ಅಕ್ಟೋಬರ್ ಮತ್ತು ಡಿಸೆಂಬರ್.

2 ಬುಕ್ಯಾನನ ವರದಿಯನ್ನು ಎಲ್. ಪಿ. ವಿದ್ಯಾರ್ಥಿ, **The Sacred Complex in Hindu Gaya**-ಈ ಪುಸ್ತಕ 27ನೆಯ ಪುಟದಲ್ಲಿ ಉದಾಹರಿಸಿದೆ.

3 **The Cultural Heritage of India**–Ramakrishna Mission Publication Vol. III P. 34 ಮತ್ತು ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ (ಸಂ). The Sources of Vijayanagar History ಪು. 154–5.

4 ಹರಪ್ರಸಾದಶಾಸ್ತ್ರಿ : "Dakhini Pandits in Banaras" in **Indian Antiquary** Vol. 41, PP 7-13.

5 ಪ್ರಧಾನ ಸಂಪಾದಕ : ಎಂ. ವಿ. ಸೀತಾರಾಮಯ್ಯ, "ಶ್ರೀ ಕೃಷ್ಣದೇವರಾಯನ ದಿನಚರಿ" ಮತ್ತು ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ (ಸಂ.) **"Sources"** P. 110 ಮತ್ತು ಮುಂದಿನ ಪುಟಗಳಲ್ಲಿ "ರಾಯವಾಚಕಂ".

6 "ಶ್ರೀ ಕೃಷ್ಣದೇವರಾಯನ ದಿನಚರಿ" ಪು. 5.

7 ದಿನಚರಿ ಪು. 10.

8 ಅದೇ ಪುಸ್ತಕ ಪು. 16–17.

9 ಅದೇ ಪುಸ್ತಕ ಪು. 19.

10 Sewell, R, **The Forgotten Empire**, P. 322-3.

11 ಆಮುಕ್ತಮಾಲ್ಯದ (ವಾವಿಳ್ಳ ಪ್ರಕಟನೆ) ಪು. 15.

12 ರಾಳ್ಳಪಲ್ಲಿ ಅನಂತಕೃಷ್ಣಶರ್ಮ : "ಸಾಹಿತ್ಯ ಮತ್ತು ಜೀವನಕಲೆ" ಪು. 122.

13 **Epigraphia Carnatica** ಸಂಪುಟ 7 ಶಿವಮೊಗ್ಗ 1ನೆಯ ಶಾಸನ.

ತದ್ವಂಶೇ ದೇವಕೀ ಜಾನಿರ್ದಿ ದೀಪೇತಿಯ ಭೂಪತಿಃ
ಯಶಸ್ವೀ ತುಳುವೇಂದ್ರೇಷು ಯದೋಃ ಕೃಷ್ಣ ಇವಾನ್ವಯೆ

ಮತ್ತು 'ಆಮುಕ್ತಮಾಲ್ಯದ' ಮೊದಲನೆಯ ಅಧ್ಯಾಯ 23ನೆಯ ಪದ್ಯ.

14 ಶಿವಮೊಗ್ಗ 1ನೆಯ ಶಾಸನ.

15 ಸೂರ್ಯನಾಥಕಾಮತ : "ತುಳುವ ವಂಶದ ಮೂಲಸ್ಥಾನ", ಶ್ರೀಕಂಠತೀರ್ಥ ಸಂ. ಎಂ. ಚಿದಾನಂದಮೂರ್ತಿ ಪು. 708–11.

16 ಕೆ. ವೆಂಕಟರಾಮಪ್ಪ: "ಶ್ರೀ ಕೃಷ್ಣದೇವರಾಯನ ಕಾಲದ ಕರ್ಣಾಟಾಂಧ್ರ ಸಾಹಿತ್ಯ ಸಮೀಕ್ಷೆ." ಅದೇ ಪುಸ್ತಕದ 70–71 ಪುಟಗಳಲ್ಲಿ ಕೃಷ್ಣದೇವರಾಯನು "ಆಮುಕ್ತ ಮಾಲ್ಯದ"ದಲ್ಲಿ ಬಳಸಿದ ತುಳು ಕನ್ನಡ ಶಬ್ದಗಳ ಪಟ್ಟಿ ಇದೆ.

17 ತಿಮ್ಮಣ್ಣ ಕವೀಂದ್ರ ವಿರಚಿತ "ಕರ್ಣಾಟ ಕೃಷ್ಣರಾಯ ಭಾರತ". ಕ. ಸಾ. ಪರಿಷತ್ತು, 1979, ಪೀಠಿಕೆ.

18 ಈ ಅಭಿಪ್ರಾಯವನ್ನು ಸದಾನಂದ ನಾಯಕರು ಮೊದಲು ಸೂಚಿಸಿದ್ದಾರೆ. ಇದನ್ನು ಅವರ "ವೈದಿಕ ಪುರಾಣಗಳು" ಎನ್ನುವ ಪುಸ್ತಕದ 28–30 ಮತ್ತು 44–56

ಪುಟಗಳಲ್ಲಿ ವಿವರಿಸಿದ್ದಾರೆ. ನನ್ನ ಅವಗಾಹನೆಗೆ ಈ ಅಭಿಪ್ರಾಯವನ್ನು ತಂದದ್ದಕ್ಕೆ ಅವರಿಗೆ ನಾನು ಋಣಿ.

19 **ಕರ್ಣಾಟಕ ಕವಿಚರಿತೆ II**, ಪುಟಗಳು 172–173.

20 ಬಿ.ಎಂ.ಶ್ರೀ. : "ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ" ಭಾಗ 2, ಪುಟ 542.

21 ಬಸವನಾಳ ಸ್ಮಾರಕ ಸಂಪುಟ. ದ. ರಾ. ಬೇಂದ್ರೆಯವರ ಲೇಖನ.

22 ಡಿ. ವಿ. ಶೇಷಗಿರಿರಾವ್: "ಕುಮಾರವ್ಯಾಸನ ಕಾಲದೇಶಾದಿ ಚರಿತ್ರೆ"; **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ**, ಸಂ. 4. ಭಾಗ 1, ಪುಟ 65–66.

23 ಜಯತೀರ್ಥ ರಾಜಪುರೋಹಿತರ ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಮಾಲೆಯಲ್ಲಿ ಬರೆದಿರುವ "ವ್ಯಾಸಯೋಗಿ ಚರಿತ್ರೆ"ಯಿಂದ, ಇಲ್ಲಿ ವ್ಯಾಸರಾಯರ ಬಗೆಗೆ ಬರೆದಿರುವ ವಿಷಯವನ್ನು ಆಯ್ದಿದೆ.

24 Bombay Govt. Records, 549 of 1834, PP 94-95 ಅದರಲ್ಲಿ ರಾಯರೇಖಾದ ಪ್ರಶಂಸೆ ಹೀಗಿದೆ: "The foundation for all future systems of land assessment was established by the great Krishnadeva Raya of Vijayanagar. The system was so good that the settlement was accepted in toto by the rulers of Bijapur, Savanur and the Marathas."

25 ಕೃಷ್ಣರಾಯನ ಆಸ್ಥಾನದಲ್ಲಿ ಕುಮಾರ ಸರಸ್ವತಿ ಎನ್ನುವ ತಮಿಳು ಕವಿ ಇದ್ದನು. ತಮಿಳುನಾಡಿನ ಮುಖ್ಯ ದೇವಾಲಯಗಳನ್ನು ಪುನರುದ್ಧಾರ ಮಾಡಿ ಅವುಗಳಿಗೆ ರಾಯ ಗೋಪುರಗಳನ್ನು ಕಟ್ಟಿಸಿ, ಅವರಿಗೆ ಪ್ರಿಯವಾದ ಗೋದಾದೇವಿಯ ಕಥೆಯನ್ನು ಆಮುಕ್ತ ಮಾಲ್ಯದ ಗ್ರಂಥದಲ್ಲಿ ಬರೆದು ಮತ್ತು ಅವರಲ್ಲಿ ಉದಿಸಿದ ಶ್ರೀವೈಷ್ಣವ ಪಂಥವನ್ನು ದಕ್ಷಿಣ ಭಾರತದಲ್ಲೆಲ್ಲಾ ಪ್ರೋತ್ಸಾಹಿಸಿ ತಮಿಳು ಜನರಿಗೆ ಬೇಕಾದವನಾದನು. ಅವನು ಪ್ರೋತ್ಸಾಹಿಸಿದ ಕುಮಾರಸರಸ್ವತಿ ಬಗೆಗೆ ಮತ್ತು ಇತರ ತಮಿಳು ಕವಿಗಳು ಕೃಷ್ಣರಾಯನ ಬಗೆಗೆ ಬರೆದುದಕ್ಕೆ 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಸಂ. 4, ಭಾಗ 2ರಲ್ಲಿ ಎಂ. ಶಿವಕುಮಾರಸ್ವಾಮಿಯವರ ಲೇಖನವನ್ನು ನೋಡಿ.

ಮೇಲೆ ಹೇಳಿದ ಪುಸ್ತಕಗಳ ಜತೆಗೆ ಇನ್ನು 2 ಪುಸ್ತಕಗಳನ್ನು ಇಲ್ಲಿ ಹೇಳಬಹುದು. ಶ್ರೀಮತಿ ನಿರುಪಮಾ ಇವರ "ಆಮುಕ್ತಮಾಲ್ಯದ"ದಲ್ಲಿ ಕನ್ನಡಿಗರು ಈ ತೆಲುಗು ಗ್ರಂಥದ ಪರಿಚಯವನ್ನು ಮಾಡಿಕೊಳ್ಳಬಹುದು. ವಿಜಯನಗರ ಸಂಸ್ಕೃತಿಯ ಬಗೆಗೆ ಡಾ॥ ಕೆ. ಶ್ರೀಕಂಠಯ್ಯನವರ ಪುಸ್ತಕ ಓದತಕ್ಕಂಥಾದ್ದು.

---

# ಕೆಲವು ಛಂದಸ್ಸಂಜ್ಞೆಗಳು

—ಕ. ಪು. ಸೀತಾರಾಮ ಕೆದಿಲ್ಲಾಯ

ಹೊಸಗನ್ನಡದ ಅನೇಕ ಛಂದೋಬಂಧಗಳ ಲಕ್ಷಣವನ್ನು ನಿರೂಪಿಸುವ ಸಂದರ್ಭದಲ್ಲಿ ಛಂದಶ್ಶಾಸ್ತ್ರಗಳಲ್ಲಿ ಉಕ್ತವಾಗದ ನೂತನ ಸಂಜ್ಞೆಗಳನ್ನು ಬಳಸಬೇಕಾಗುವುದು. ಆದುದರಿಂದ ಕೆಲವು ಮುಖ್ಯ ಪಾರಿಭಾಷಿಕ ಸಂಜ್ಞೆಗಳ ವಿಚಾರವನ್ನು ಈ ಲೇಖನದಲ್ಲಿ ವಿವೇಚಿಸಲಾಗುವುದು.

**ವರಣ :**

ಒಂದು ಪದ್ಯದ ಪಾದದ್ವಂದ್ವಗಳ ಮಧ್ಯದಲ್ಲಿ ಗಣಪೂರಕವಾಗಿ ನಿಲ್ಲುವ ವಿಭಕ್ತ ಅಕ್ಷರಪುಂಜಕ್ಕೆ 'ವರಣ'ವೆಂಬ ಹೆಸರಿದೆ. ಹಿಂದಿನ ಯಕ್ಷಗಾನ ಕೃತಿಗಳಲ್ಲಿ ಇದರ ಉಲ್ಲೇಖವು ಕಂಡುಬರುವುದು. ಪ್ರಾಚೀನ ಕಾವ್ಯಗಳಲ್ಲಿ 'ವರಣ'ದ ಪ್ರಯೋಗವಿಲ್ಲದಿದ್ದುದರಿಂದ ಪೂರ್ವಛಂದಶ್ಶಾಸ್ತ್ರಗಳಲ್ಲಿ ಈ ಸಂಜ್ಞೆಯ ವಿಷಯವನ್ನು ವಿವರಿಸಿರುವುದಿಲ್ಲ. ಪದ್ಯದ ಉಭಯ ಚರಣಗಳನ್ನು ಸೇತುವಿನಂತೆ ಜೋಡಿಸಿ ಪರಸ್ಪರ ವರಿಸುವಂತೆ ಮಾಡುವ ಈ ವಿಭಕ್ತ ಅಕ್ಷರ ಸಮೂಹಕ್ಕೆ 'ವರಣ'ವೆಂಬ ಸಂಜ್ಞೆ ಉಚಿತವಾಗಿದೆ. [ವರಣ=ಸೇತು ; ಕೋಟೆ. ವರಣಂ=ವರಿಸುವಿಕೆ ; ಸುತ್ತುವಿಕೆ]. ಕೆಲವು ವಿದ್ವಾಂಸರು ಈ ಗಣಪೂರಕವಾದ ಅಕ್ಷರಗಳಿಗೆ 'ಹುಸಿಗಣ'ವೆಂದೂ,[1] 'ಉಯ್ಯಾಲೆಗಣ'ವೆಂದೂ[2] ಹೆಸರಿಟ್ಟಿರುವರು. ಆದರೆ ಈ ಭಾಗದಲ್ಲಿ ಪೂರ್ಣಗಣವೇ ಬರಬೇಕೆಂಬ ನಿರ್ಬಂಧವಿಲ್ಲ. ಆದುದರಿಂದ ಇದನ್ನು ಗಣವೆಂದು ಸೂಚಿಸುವುದು ಸರಿಯಾಗದು. ಇದನ್ನು ವರಣವೆಂದೇ ನಿರೂಪಿಸುವುದು ವಿಹಿತ.

ಪ್ರಾಚೀನ ಕಾವ್ಯಗಳಲ್ಲಿ ವರಣವಿರುವ ಪದ್ಯಗಳು ಲಭಿಸುವುದಿಲ್ಲ. ಷಡಕ್ಷರಿ ಕವಿಯ "ಬಸವರಾಜ ವಿಜಯ" ಮಹಾಕಾವ್ಯದಲ್ಲಿ ಮಾತ್ರವೇ ವರಣವಿರುವ ರಗಳೆ ಗೋಚರಿಸುವುದು.

ಹಾ ಮದೀಶಯಿದೆತ್ತಡಂಗಿದೆ ಕಿನ್ನರೇಶಾ ॥ **ಹಾ ಗುಣ** ।
ಧಾಮ ನೀನಕಟೆಂತು ಪೋಪುದೆ ? ಕಿನ್ನರೇಶಾ ॥

ಇದರಲ್ಲಿ "ಹಾಗುಣ" ಎಂಬ ಪಾದಖಂಡವು ವರಣವಾಗಿದೆ.

ಕೆಲವು ಗೀತಗಳಲ್ಲಿ ಪಾದ ದ್ವಂದ್ವಗಳ ನಡುವೆ ವರಣವು ಕಂಡುಬರುವುದು.

ಡಂಗುರ ಪೊಯ್ಯುವುದದೇನೇ ॥ **ಜನ** ।
ಜಂಗುಳಿಗೆಲ್ಲ ನೀಂ ಸಾರ್ವುದದೇನೇ ॥
ಅಂಗಜವಾರ್ತೆಯಿದೇನೇ ॥ **ಎಲೆ** ।
ಶೃಂಗಾರ ಶೀಲೆ ನಿನ್ನಯ ಸುದ್ದಿಯೇನೇ ॥

—ಡಿ.ವಿ.ಜಿ.ಯವರ ಕವನ.

ಕೆಲವು ಪದ್ಯಗಳ ಪೂರ್ವಭಾಗದಲ್ಲಿ ವರಣವಿದ್ದು ಅಂತ್ಯದಲ್ಲಿ ಬರುವುದಿಲ್ಲ:

ಕಿರಿಯು ಗಡ ಕಿರಿಯರೊಳಗೆಲ್ಲ ॥ **ನೀನು** ।
ಪಿರಿಯು ಗಡ ಪಿರಿಯರೊಳಗೆಲ್ಲ ॥ **ಈ** ।
ಕಿರಿಪಿರಿಯತನದೊಂದು ಕೀಲ ನೀನೇ ಬಲ್ಲೆ ॥

—ಗೀತ ಗೋಪಾಲ.

ಕೆಲವು ಪದಗಳ ಅಂತ್ಯಭಾಗದಲ್ಲಿ ವರಣವು ಬರುವುದು.

ಈ ಪರಿಯಲಿ ಭಾಷೆಗಳನು । ಭೂಪನೊಡನೆ ಪೇಳ್ದು ದೈತ್ಯ ।
ಚಾಪವನ್ನು ನೆಗಹಿ ಶರವ । ತಾಪದಿಂದ ಬಿಡಲು ರಾಮ ।
ಕೋಪದಿಂದ ತಿರುಗಿ ನೋಡಿದ ॥ **ಧನುವ ಪಿಡಿದಾ** ।
ಟೋಪದಿಂದ ಶರವ ಪೂಡಿದ ॥ **ಬಹಳ ಸುಪ್ತ** ।
ತಾಪದಿಂದ ಯುದ್ಧ ಮಾಡಿದ ॥

—ಪಂಚವಟಿ ರಾಮಾಯಣ ಪ್ರಸಂಗ.

ಕೆಲವು ಪದಗಳ ಮಧ್ಯಭಾಗದಲ್ಲಿ ವರಣವು ಬರುತ್ತದೆ.

ಕುಂಭಕುಚಾನ್ವಿತೆ ಯಾರೀಕೆಯು ಜಲ । ಜಾಂಬಕಿ । ಗುಣವತಿಯು ॥
**ಚಂದ್ರಮ** । ಬಿಂಬಸಮಾನ ಶುಭಾನನೆ ಕಾಣ್ಬಳು । ಮುಂಭಾಗದಿ.
ಸತಿಯು ॥ **ಗಿರಿಜೆಯು** । ಹಂಬಲ ಬಿಡು ನಿನಗಿಂಬುಕೊಡುವೆ ತಾ ।
ನೆಂಬಂದದೆ ಬಲು ಸಂಭ್ರಮದೋರುತ ॥

—ಭಸ್ಮಾಸುರ ಮೋಹಿನಿ ಪ್ರಸಂಗ.

ಅಂಶಿಗಣ* ಮಾತ್ರಾಗಣ ಮಿಶ್ರಿತ ಪದ್ಯಗಳ ಪೂರ್ವಭಾಗದಲ್ಲಿ ಮಾತ್ರವೇ ವರಣವು ಬರುತ್ತದೆ:

ಏಕಿನಿ,ತುಸಿರುವಿ,ರಿ ॥ **ಎ,ನ್ನೊಳು ಬರಿ**।ದೇಕಿನಿ,ತುಸಿರುವಿರಿ ॥
ಏಕ,ದಿನಿತುಸಿ,ರುವಿರಿ, ಸುಮ್ಮಗ।ನೇಕ,ರೈತಂ,ದೊರಲು,
ತನ್ನಯ । ಶೋಕ,ತಮ್ಮಟೆ,ಗರುಹಿ,ದಂದದಿ । ಪಾಕ,ಶಾಸನ,
ಧಿಷಣ,ಮುಖ್ಯರು ॥

—ಕುಮಾರ ವಿಜಯ ಪ್ರಸಂಗ.

**ವರಣದ ಲಕ್ಷಣ**: ಪದ್ಯದ ಛಂದೋನಿಯಮವನ್ನು ಪರಿಶೀಲಿಸಿದರೆ ವರಣವು ಪೂರ್ವಪಾದಾಂತ್ಯ ಭಾಗವೆಂದು ಖಚಿತವಾಗುವುದು. ಆದರೆ ಪೂರ್ವಪಾದವನ್ನು

---

* ವಿ. ಸೂ: ಬ್ರಹ್ಮ-ವಿಷ್ಣು-ರುದ್ರ ಗಣಗಳಿಗೆ ಅಂಶಗಣಗಳೆಂಬ ಹೆಸರು ಉಚಿತವಾದರೂ ಅಂಶವೆಂಬುದಕ್ಕೆ ಗಣವೆಂಬ ಅರ್ಥವೂ ಛಂದಶ್ಶಾಸ್ತ್ರದಲ್ಲಿ ಬರುವುದರಿಂದ ಸ್ಪಷ್ಟತಾರ್ಥವೊದಗುವಂತೆ ಇಲ್ಲಿ ಅಂಶಿಗಣಗಳೆಂದು ಸೂಚಿಸಲಾಗಿದೆ.

ಓದಿದ ಅನಂತರ ನಿಲ್ಲಿಸಿ ಮತ್ತೆ ವರಣದ ಭಾಗವನ್ನೂ ಉತ್ತರ ಪಾದವನ್ನೂ ಸೇರಿಸಿ ಹಾಡಬೇಕಾಗುತ್ತದೆ. ಹೀಗಾಗಿ ಪಾದದ್ವಂದ್ವದ ನಡುವೆ ವರಣವಿದ್ದರೆ ಹಾಡುವ ಧಾಟಿ ಒಮ್ಮೆ ವಿರಾಮವನ್ನು ಪಡೆದು ಮುಂದೆ ಥಟ್ಟನೆ ನೆಗೆದಂತೆ ಭಾಸವಾಗುವುದು. ಈ ಸಂದರ್ಭದಲ್ಲಿ ಪೂರ್ವಪಾದವನ್ನು ಓದಿದ ಮೇಲೆ ರಾಗಾಲಾಪನೆಯಿಂದಾಗಲೀ ಮೌನದಿಂದಾಗಲೀ ಅವಶ್ಯವಾದ ಮಾತ್ರಾಮೌಲ್ಯವನ್ನು ತುಂಬಿಸಿಕೊಂಡು ಪಠಿಸಬೇಕಾಗುವುದು. ಇದರಿಂದಾಗಿ ಗೀತದಲ್ಲಿ ರಾಗಾಲಾಪನೆಗೂ ತಾಳಘಾತದ ವಿಸ್ತರಣಕ್ಕೂ ಅನುಕೂಲವಾಗುವುದು.

ಒಂದು ಹಾಡಿನಲ್ಲಿ ಪಾದದ್ವಂದ್ವದ ನಡುವೆ ವರಣವಿದ್ದರೆ ಅದರ ಪೂರ್ವಪಾದ ಮತ್ತು ಉತ್ತರ ಪಾದಗಳ ಅಂತ್ಯಸ್ಥಾನಗಳಲ್ಲಿ ಗುರುವಾಗಲೀ ಗುರ್ವಂತ ಚತುರ್ಮಾತ್ರಾಗಣ (ಬ್ರಹ್ಮಗಣ) ವಾಗಲೀ ಅನ್ಯಗಣಕ್ಕೆ ಸಮಾನವಾದ ನಿರ್ದಿಷ್ಟ ಗಣವಾಗಲೀ ಬರಬಹುದು. ಕೆಲವು ಛಂದೋಬಂಧಗಳ ವರಣದಲ್ಲಿ ಇತರ ಗಣಕ್ಕೆ ಸಮವಾದ ಗಣವೇ ಇರುವುದುಂಟು. ಕೆಲವು ಗೀತಗಳ ವರಣದಲ್ಲಿ ಆದಿಗೆ ಗಣ ವಿಭಜನೆಗೆ ಬಾಹಿರವಾಗಿ ನಿಲ್ಲುವ ಅಕ್ಷರವೂ (ಅಕ್ಷರಗಳೂ) ಬರುವುದುಂಟು. ಈ ಅಕ್ಷರವನ್ನು (ಅಕ್ಷರಗಳನ್ನು) ಪಠಿಸುವ ಮುಂಚೆ ನಿಶ್ಚಿತ ಗಣಕ್ಕೆ ಅವಶ್ಯವಾಗಿರುವ ಲುಪ್ತಭಾಗವನ್ನು ರಾಗಾಲಾಪನೆಯಿಂದಾಗಲೀ ನಿರ್ದಿಷ್ಟ ಕಾಲಯಾಪನೆಯಿಂದಾಗಲೀ ತುಂಬಿಸಿಕೊಳ್ಳಬೇಕಾಗುವುದು. ಆದುದರಿಂದ ಈ ಅಕ್ಷರವನ್ನು (ಅಕ್ಷರಗಳನ್ನು) **ಗಣಶೇಷ**ವೆಂದು ಹೇಳಬಹುದು. ಮಾತ್ರಾಗಣ ಬಂಧಗಳ ವರಣದಲ್ಲಿ ನಿಶ್ಚಿತ ಮಾತ್ರೆಗಳ ಗಣಶೇಷವಿರುವುದರಿಂದ ಮಾತ್ರಾಸಂಖ್ಯೆಯನ್ನು ಸೂಚಿಸಬಹುದು. ಅಂಶಿಗಣಬಂಧಗಳ ವರಣದಲ್ಲಿ ಮೂಲಾಂಶವನ್ನು ಬಿಟ್ಟು ಮುಂದಿನ ಅಂಶದ (ಅಂಶಗಳ) ಗಣಶೇಷವಿರುವುದರಿಂದ ಗುರು ಲಘುಗಳಲ್ಲಿ ಯಾವ ಅಕ್ಷರವೂ ನಿಲ್ಲಬಹುದು. ಹೀಗಾಗಿ ಈ ಗಣಶೇಷದಲ್ಲಿ ನಿರ್ದಿಷ್ಟ ಅಕ್ಷರ ಸಂಜ್ಞೆಯನ್ನಾಗಲೀ ಮಾತ್ರಾಸಂಖ್ಯೆಯನ್ನಾಗಲೀ ಸೂಚಿಸಲು ಸಾಧ್ಯವಿಲ್ಲ. ಅಂಶಿಗಣಬಂಧಗಳ ವರಣದ ಗಣಶೇಷದಲ್ಲಿ ಒಂದು ಅಕ್ಷರವಿದ್ದರೆ ಅದನ್ನು ಗಣದ **ಅಂತ್ಯಾಂಶ**ವೆಂದೂ ಎರಡು ಅಕ್ಷರಗಳಿದ್ದರೆ ಅವುಗಳನ್ನು ಗಣದ **ಮಧ್ಯಾಂಶ ಅಂತ್ಯಾಂಶ**ಗಳೆಂದೂ ಭಾವಿಸಬೇಕು. ಬ್ರಹ್ಮಗಣ-ಪ್ರಧಾನ ಬಂಧಗಳ ವರಣದ ಗಣಶೇಷದಲ್ಲಿ ಒಂದು ಅಕ್ಷರ ಮಾತ್ರವೇ ಇರಬಹುದು. ವಿಷ್ಣುಗಣಪ್ರಧಾನ ಬಂಧಗಳ ವರಣದ ಗಣಶೇಷದಲ್ಲಿ ಒಂದು ಅಕ್ಷರವಾಗಲೀ ಎರಡು ಅಕ್ಷರಗಳಾಗಲೀ ಬರಬಹುದು. ಎರಡು ಅಕ್ಷರಗಳಿರುವ ಗಣಶೇಷದಲ್ಲಿ ವಿರಳವಾಗಿ ಲಘುವಿನ ಅನಂತರ ಗುರುವೂ ನಿಲ್ಲುವುದುಂಟು. ಆದರೆ ಇಲ್ಲಿ ಲುಪ್ತವಾದ ಮೂಲಾಂಶವನ್ನು ಹಾಡುವಾಗ ತುಂಬಿಕೊಂಡು ಗಣಶೇಷವನ್ನು ಸೇರಿಸಿಕೊಳ್ಳಬೇಕಾಗುವುದರಿಂದ ಲಘುವಿನ ಬಳಿಕ ಗುರುವಿದ್ದರೂ ವಿಲಕ್ಷಣವಾಯಿತೆಂದು ಭಾವಿಸುವಂತಿಲ್ಲ. ಹೀಗೆ ಅನಿರ್ದಿಷ್ಟ ರೂಪದಲ್ಲಿರುವ ಈ ಅಕ್ಷರದ (ಅಕ್ಷರಗಳ) ಪ್ರಸ್ತಾರವನ್ನು ಸೂಚಿಸುವಾಗ **ಶೇಷಾಂಶ**ವೆಂದು ಬರೆಯಬಹುದು.

ತಾಳಬದ್ಧವಾದ ಗೀತಗಳಲ್ಲಿ ನಾನಾ ರೀತಿಯ ವರಣಗಳು ನಿಂತರೂ ತಾಳ ಲಯಕ್ಕೆ ಅನ್ವಯಿಸುವ ನಿರ್ದಿಷ್ಟ ನಿಯಮವು ಕಂಡುಬರುವುದು. ವರಣದ ವೈವಿಧ್ಯ ವನ್ನು ಪರಿಶೀಲಿಸಿದರೆ ಇದರ ಅರಿವಾಗುವುದು.

**ತ್ರಿಮಾತ್ರಾಗಣ ಬಂಧದ ವರಣಗಳು**

೧ ಚಿಂತೆ,ಯೇತ,ಕೋ ॥ **ಬಯಲ** । ಭ್ರಾಂತಿ,ಯೇತ,ಕೋ ।

—ಪುರಂದರದಾಸರ ಪದ

೨ ನಡೆಯೆ,ಲೋ ಮು,ರಾರಿ,ಸುಖದೊಳು ॥ **ಸಲುಗೆ ಮಾತ** ।
ನುಡಿದು,ಪೆಟ್ಟು, ತಿನ್ನದೆನ್ನೊಳು ॥

—ಕೃಷ್ಣಸಂಧಾನ ಪ್ರಸಂಗ

೩ ಜಯತು, ಯತಿಕು,ಲಾಬ್ಜ, ಭಾಸ್ಕರ ॥**ಸಂ,ರಕ್ಷಿಸಯ್ಯ** ।
ದಯದೊ,ಳೆಮ್ಮ,ನಿಂದು, ಶುಭಕ,ರ ॥

—ವೃತ್ರಾಸುರ ಕಾಳಗ

**ಚತುರ್ಮಾತ್ರಾಗಣ ಬಂಧದ ವರಣಗಳು**

೧ ಎಲವೋ, ಸೂತನ, ಮಗನೇ ॥ **ನೀ** । ಕಲಹದಿ, ಬಲು ಸಹ,ಸಿಗನೇ ॥

—ಕರ್ಣಪರ್ವ ಪ್ರಸಂಗ

೨ ನಾಚಿಕೆ,ಗೊಳಬೇ,ಡ ॥ **ಮನದಲಿ** । ಯೋಚಿಸಿ. ಕೆಡಬೇ,ಡ ॥

—ಪುರಂದರದಾಸರ ಪದ

೩ ಆರತಿ,ಬೆಳಗಿದ,ರು ॥ **ಕಾ,ಮಿನಿಯರು** । ಆರತಿ, ಬೆಳಗಿದ,ರು ॥

—ಬ್ರಹ್ಮಕಪಾಲ ಪ್ರಸಂಗ

೪ ಬಿಡಿರೋ ॥ **ಈ.ಧಡಿಗರ,ಭಯಬಿಡಿ** । ಬಿಡಿರೋ ॥

—ಕುಮಾರವಿಜಯ ಪ್ರಸಂಗ

**ಪಂಚಮಾತ್ರಾಗಣ ಬಂಧದ ವರಣಗಳು**

೧ ವರವ ಕೊಡು, ಎನಗೆ ವಾ,ಗ್ದೇವಿ ॥ **ನಿನ್ನ** । ಚರಣಕಮ,ಲಂಗಳನು,
ದಯಮಾಡು, ದೇವಿ ॥

—ಕನಕದಾಸನರ ಪದ

೨ ನಳಿನಾಕ್ಷಿ.ಕೇಳೆಈ,ಗ ॥ **ನರನೊಡನೆ** । ಕಲಹಕೈದುವೆನುಬೇ,ಗ ॥

—ಸುಧನ್ವಕಾಳಗ ಪ್ರಸಂಗ

**ತ್ರಿಮಾತ್ರಾಗಣ ಚತುರ್ಮಾತ್ರಾಗಣ ಬಂಧದ ವರಣಗಳು**

೧ ಬಂದ,ರಾಗ ॥**ಧುರಕ್ಕೆ**।ತಂದ,ರಾಗ ॥

—ಕುಮಾರವಿಜಯ ಪ್ರಸಂಗ

೨ ಮಂಗ,ಲಂಗಿರಿ,ಜಾತೆ.ಶಂಕರಿ,ಯೆ ॥ **ಶ್ರೀ,ಶಂಕರ,ಪ್ರಿಯೆ** ।
ತುಂಗ, ಸಂಪದ, ದಾತೆ, ಶುಭಕರಿ,ಯೆ ॥

—ಹೆಂಗಸರ ಹಾಡು

೩ ಹಿಮದ,ಗಿರಿಯಲಿ,ಸುಳಿದೆ,ನು ॥ **ಕುಡಿ** । ನಿಮಿರಿ,ಕೆರೆಗಳ,ತುಳಿದೆನು, ॥

—ಇಂಗ್ಲಿಷ್ ಗೀತಗಳು

**ವಿಷ್ಣುಗಣಪ್ರಧಾನ ಬಂಧಗಳ ವರಣಗಳು**

೧ ಶರಣಸೇ,ವೆಯುಮಾಡು,ಬೇಗ ॥ **ಗುರು** । ಕರುಣವ,
ಪಡೆದುನಿ,ಜವ ನೋಡಿ,ರೀಗ ॥

—ಶಿವಶರಣ ಗೀತ

೨ ಈಗ ಮಾ,ಡೆಲೊ ರಾಮ,ಧ್ಯಾನವ ॥ **ನೀ** । ಮೂಗನಾ,ಗಿರಬೇಡ,
ಮಾನವ ॥

—ಪುರಂದರದಾಸರ ಪದ

೩ ಎಲ್ಲಿಗೆ,ಎದ್ದು ಪೋ,ದ ॥ **ಗೋಪಾಲ** । ಎಲ್ಲಿಗೆ, ಎದ್ದು ಪೋ,ದ ॥

—ಸಭಾಲಕ್ಷಣ

೪ ಆನೆಯ,ನೋಡಿರ,ಯ್ಯ ॥ ನೀ,ವೆಲ್ಲರು । ಆನಂದ,ಪಡೆಯಿರ,ಯ್ಯ ॥

—ಕನಕದಾಸರ ಪದ

೫ ತಂಗಿ ಪೇ,ಳೇನು ಚೋ,ದ್ಯ ॥ **ಶಕ್ರ,ನೆಲ್ಲಂಬು**॥ದಂಗಜಾಂ,ತಕಗೆಮೇ,ದ್ಯ ॥

—ಕುಮಾರವಿಜಯ ಪ್ರಸಂಗ

೬ ನೋಡಿರೈ ॥ **ಕಲ್ಪ,ಭೂರುಹ,ರೆನಿಪರ** । ನೋಡಿರೈ ॥

—ಪುರಂದರದಾಸರ ಪದ

**ಬ್ರಹ್ಮಗಣಪ್ರಧಾನ ಬಂಧದ ವರಣಗಳು**

೧ ಮುದ್ದು,ತಾರೋ ॥ **ರಂಗ** । ಎದ್ದು.ಬಾರೋ ॥

—ಪುರಂದರದಾಸರ ಪದ

೨ ಮೋಸ,ಮಾಡಿ,ಪೋದ.ಕಾಣ.ಮ್ಮ ॥ **ಆ,ಪೊಡವಿ,ಯಧಿಪ**।ನೀಸು,
ಕೃತಕ.ಕಾರ,ತಾನ,ಮ್ಮ ॥

—ಶಕುಂತಲಾ ಪರಿಣಯ ಪ್ರಸಂಗ

**ರುದ್ರಗಣಪ್ರಧಾನ ಬಂಧದ ವರಣ**

ಬಂದಿರೇನ್ನೈ ॥...**ನಡೆ** । ತಂದಿರೇನ್ನೈ ॥

—ಪುತ್ರಕಾಮೇಷ್ಟಿ ಪ್ರಸಂಗ

ಕೆಲವು ಗೀತಗಳಲ್ಲಿ ಬ್ರಹ್ಮಗಣಯುಗ್ಮಕದ ಸ್ಥಾನದಲ್ಲಿ ಒಂದು ರುದ್ರಗಣವು ಬರುವುದುಂಟು. ರುದ್ರಗಣವನ್ನು ಓದುವಾಗ ಎರಡು ಬ್ರಹ್ಮಗಣಗಳ ಓಟವೇ

ಸ್ಫುರಿಸುವುದರಿಂದ ಬ್ರಹ್ಮಗಣ ರುದ್ರಗಣಗಳನ್ನು ಮಿಶ್ರವಾಗಿ ಪೂರ್ವಕವಿಗಳು ಪ್ರಯೋಗಿಸಿರುವರು. ಬ್ರಹ್ಮಗಣ ರುದ್ರಗಣ ಮಿಶ್ರಿತ ಛಂದೋಬಂಧಗಳ ವರಣ ದಲ್ಲಿ ಬ್ರಹ್ಮಗಣವಾಗಲೀ ರುದ್ರಗಣವಾಗಲೀ ಅವುಗಳ ಶೇಷಾಂಶಗಳಾಗಲೀ ಕಂಡು ಬರುವುವು.

ದಾನವರು,ತಿನ್ನ,ರೇನೋ । ರಾಮ ರಾಮ ॥ ನಿ,ನ್ನೀಕೈ,ಪಿಡಿದ ।
ಮಾನಿನಿಗಿ,ನ್ನೇನು,ಗತಿಯೋ ? । ರಾಮ ರಾಮ ॥

—ರಾಮಪಟ್ಟಾಭಿಷೇಕ

ಹೀಗೆ ನಾನಾವಿಧವಾಗಿ ಗೀತಗಳಲ್ಲಿ ಪಾದದ್ವಂದ್ವಗಳ ನಡುವೆ ವರಣವು ಗೋಚರಿಸುತ್ತದೆ.

## ಅತೀತಾಕ್ಷರ

ಕೆಲವು ಗೀತಗಳಲ್ಲಿ ಆದಿಗೆ ಗಣವಿಭಜನೆಗೆ ಸಿಕ್ಕದ ಬಿಡಿಯಾದ ಅಕ್ಷರವು ಬರು ವುದುಂಟು. ಹೀಗಿದ್ದರೆ ಇದನ್ನು ಪಠಿಸಿದ ಅನಂತರ ಮುಂದಿನ ಅಕ್ಷರದಿಂದ ತಾಳಘಾತ ವನ್ನು ಆರಂಭಿಸಿ ಹಾಡಬೇಕಾಗುವುದು. ಈ ಅಕ್ಷರವನ್ನು **ಅತೀತಾಕ್ಷರ**ವೆಂದು ಹೇಳಬಹುದು.

**ಆ**।ನಂದಮುಖೀ ಸುಂದರಾಂಗಿ ಮಂದಗಾಮಿನೀ ॥
ಬಂದ ಬವಣೆ ಪೇಳ್ವೆನಾದಿಯಿಂದ ಕಾಮಿನೀ ॥

—ಕುಮಾರವಿಜಯ ಪ್ರಸಂಗ

ಇದರಲ್ಲಿ ಆದಿಯ ಗುರು ಅತೀತಾಕ್ಷರವಾಗಿದೆ.

**ಅ**।ನಾಥೆಯಿವಳಿನ್ನೊಬ್ಬಳೀ ಜನ್ಮ ರೋಸಿ ॥
ವೇಧೆಯನು ತಾಳದೆಯೆ ಮುಳುಗಿದಳು ಹೊಳೆಗೆ ॥

—ಇಂಗ್ಲಿಷ್ ಗೀತಗಳು

ಇದರಲ್ಲಿ ಆದಿಯ ಒಂದು ಲಘು ಅತೀತಾಕ್ಷರವಾಗುತ್ತದೆ.

**ಗುರು**।ದೇವನ ಮೂರ್ತಿಯ ಮಣ್ಣಿನೊಳರ್ತಿಯಲಿಸಗುತದರ
ಮುಂದಕೆ ನಿಂದು ॥
ಗುರಿಗೆಸೆವನು ದೋಣೆಯಂ ತೀವಿದ ಕಣೆಯುಂ ತೆಗೆತೆಗೆ
ದೊಂದರ ಮೇಲೊಂದು ॥

—ಹೆಬ್ಬೆರಳು

ಇದರಲ್ಲಿ ಆದಿಯ ಎರಡು ಲಘುಗಳು ಅತೀತಾಕ್ಷರಗಳಾಗಿ ನಿಲ್ಲುವುವು.

ಹೀಗೆ ಪದ್ಯದ ಪ್ರಾರಂಭದಲ್ಲಿ ತಾಳಘಾತಕ್ಕೆ ಒಡಂಬಡದೆ ಒಂದು ಗುರು ವಾಗಲೀ ಒಂದು ಲಘುವಾಗಲೀ ಎರಡು ಲಘುಗಳಾಗಲೀ ವಿಶಿಷ್ಟ ರೀತಿಯಲ್ಲಿ ನಿಲ್ಲ

ಬಹುದು. ಆದರೆ ಆರಂಭದಲ್ಲಿ ಒಂದು ಲಘು ಮಾತ್ರವೇ ಇದ್ದರೆ ಅನಂತರ ಬರುವ ಗಣದ ಆದಿಯ ಅಕ್ಷರವು ಗುರುವಾಗಬೇಕು. ಹೀಗೆ ಗುರ್ವಾದಿಗಣವು ಬಾರದಿದ್ದರೆ ಹಾಡಲು ಅನುಕೂಲವಾಗುವುದಿಲ್ಲ. ತಾಳಘಾತದ ಮುಂಚೆ ಬರುವ ಆದಿಯ ಅಕ್ಷರಕ್ಕೆ ಕೆಲವರು **ಅನಾಗತ**ವೆಂದು ಹೆಸರಿಟ್ಟಿರುವರು.[3] ಆದರೆ ಈ ಸಂಜ್ಞೆ ಸರಿಯಲ್ಲವೆಂದು ತೋರುವುದು. ಸಂಗೀತ ಶಾಸ್ತ್ರದಲ್ಲಿ ಗೀತದೊಡನೆ ತಾಳಘಾತವು ಪ್ರಾರಂಭವಾದರೆ **ಸಮಗ್ರಹ**ವೆಂದೂ ಗೀತದ ಅನಂತರ ಆರಂಭವಾದರೆ **ಅತೀತಗ್ರಹ**ವೆಂದೂ, ಗೀತದ ಪೂರ್ವದಲ್ಲಿ ಪ್ರಾರಂಭವಾದರೆ **ಅನಾಗತಗ್ರಹ**ವೆಂದೂ ನಿರೂಪಿಸಲಾಗಿದೆ. ಸಂಗೀತಶಾಸ್ತ್ರಕಾರರು **ಸಮಗ್ರಹ–ವಿಷಮಗ್ರಹ**ಗಳೆಂಬ ಎರಡು ಮುಖ್ಯ ಪ್ರಭೇದಗಳನ್ನು ನಿರೂಪಿಸಿ ಅತೀತಗ್ರಹ ಅನಾಗತಗ್ರಹಗಳನ್ನು ವಿಷಮಗ್ರಹದ ಉಪಭೇದಗಳಾಗಿ ಪರಿಗಣಿಸಿರುವರು. ಕೆಲವರು ಸಮಗ್ರಹ-ಅತೀತಗ್ರಹ-ಅನಾಗತಗ್ರಹ-ವಿಷಮಗ್ರಹಗಳೆಂಬ ೪ ಭೇದಗಳನ್ನು ಕಲ್ಪಿಸಿರುವರು. ಇವರ ಮತದಂತೆ ಗೀತದ ಯಾವ ಸ್ಥಾನದಲ್ಲಿಯಾದರೂ ಹಾಡುವಾಗ ತಾಳವನ್ನೇ ಆರಂಭಿಸುತ್ತಿದ್ದರೆ ವಿಷಮಗ್ರಹವೆನಿಸುವುದು.[4] ಹೇಗಿದ್ದರೂ ಸಂಗೀತಶಾಸ್ತ್ರಗಳಲ್ಲಿ ಅತೀತ ಅನಾಗತ ಗ್ರಹಗಳ ಲಕ್ಷಣ ನಿರೂಪಣೆ ಸಮಾನವಾಗಿದೆ. ಆದುದರಿಂದ ಪದ್ಯದ ಆದಿಯಲ್ಲಿ ತಾಳಘಾತಕ್ಕೆ ಸೇರದೆ ನಿಲ್ಲುವ ಅಕ್ಷರಕ್ಕೆ **ಅತೀತಾಕ್ಷರ (ಅತೀತಕ)**ವೆಂದು ಹೆಸರಿಡಬಹುದು. ಇದಕ್ಕೆ ಅನಾಗತವೆಂಬ ಸಂಜ್ಞೆ ಉಚಿತವಾಗುವುದಿಲ್ಲ.

## ಅನುಪದ

ಕೆಲವು ಪದ್ಯಗಳ ಪ್ರತಿಪಾದಾಂತ್ಯದಲ್ಲಿಯೂ ಒಂದೇ ಪದವು ಮರಳಿ ಬರುವುದುಂಟು. ಇದು ಹೆಚ್ಚಾಗಿ ಹಾಡುಗಳಲ್ಲಿ ಗೋಚರಿಸುವುದು. ಇದನ್ನು **ಅನುಪದ**ವೆಂದು ಹೇಳಬಹುದು.

**ರಗಳೆಯಲ್ಲಿ ಅನುಪದ**

ಮಗನೆ ನೀನಿಂತಳಿಯೆ ಸೈರಿಪೆನೆಂತೊ ಪೇಳ್ಳೈ **ಶಂಕರಾ** ॥
ಸುಗುಣನಿಧಿ ನೀನೆಮ್ಮ ಮೊರೆಗಳನೊರ್ಮೆ ಕೇಳ್ಳೈ **ಶಂಕರಾ** ॥

—ರಾಜಶೇಖರ ವಿಲಾಸ

**ಮಾತ್ರಾಗಣಬಂಧದಲ್ಲಿ ಅನುಪದ**

ಎಂತಹ ಚೆಲುವಗೆ ಮಗಳನು ಕೊಟ್ಟನು ಗಿರಿರಾಜನು **ನೋಡಮ್ಮಮ್ಮ** ॥
ಕಂತುಹರನು ಬಲು ಚೆಲುವನು ಎನ್ನುತ ಮೆಚ್ಚಿದನೇ **ನೋಡಮ್ಮಮ್ಮ** ॥

—ಪುರಂದರದಾಸರ ಪದ

**ಅಂಶಿಗಣಬಂಧದಲ್ಲಿ ಅನುಪದ**

ಉರಗಕುಂಡಲ ಚಂದ್ರಧರ ಸೂರ್ಯಸಂಕಾಶ । **ಪಾಹಿ ಶಂಭೋ** ॥
ಶರಜನ್ಮಜನಕ ಶಂಕರ ಶರ್ವ ಭೂತೇಶ । **ಪಾಹಿ ಶಂಭೋ** ॥
ದುರಿತಸಂಕುಲನಾಶ ಗಿರಿಶ ಪಾವನವೇಷ । **ಪಾಹಿ ಶಂಭೋ** ॥
ಕರಿನಕ್ರಂಚರಸಂಹಾರಣ ಶಿವ ಗೌರೀಶ । **ಪಾಹಿ ಶಂಭೋ.**

—ಪಾರಿಜಾತ ಪ್ರಸಂಗ

ಕೆಲವು ಗೀತಗಳಲ್ಲಿ ಪಾದದ್ವಂದ್ವಗಳ ನಡುವೆ 'ವರಣ'ವಿದ್ದು ಅದರ ಪೂರ್ವ ಪಾದ ಮತ್ತು ಉತ್ತರಪಾದಗಳ ಅಂತ್ಯಸ್ಥಾನಗಳಲ್ಲಿ ಅನುಪದಗಳು ಬರುವುವು.

**ರಗಳೆಯಲ್ಲಿ ವರಣ–ಅನುಪದಗಳು**

ಸಾರವೀರಗುಣಾನುರಂಜನ **ಕಿನ್ನರೇಶಾ** ॥ ಡಾ ಮದ ।
ದೂರ ದುರ್ಮತ ಗರ್ವಭಂಜನ **ಕಿನ್ನರೇಶಾ** ॥

—ಬಸವರಾಜ ವಿಜಯ

**ಮಾತ್ರಾಗಣಬಂಧದಲ್ಲಿ ವರಣ–ಅನುಪದಗಳು**

ನಿನ್ನ ಕಂಡು ಧನ್ಯನಾದೆ **ರಾಮಚಂದ್ರ** ॥ ಇಂದಿ।
ಗೆನ್ನ ಜನ್ಮ ಸಫಲವಾಯ್ತು **ರಾಮಚಂದ್ರ** ॥
ಕನ್ನೆಯನುಜರೊಂದುಗೂಡಿ **ರಾಮಚಂದ್ರ** । ರಾಜ್ಯ।
ವನ್ನು ಬಿಟ್ಟುಪೋಪಿರೆಲ್ಲಿ ? **ರಾಮಚಂದ್ರ** ॥

—ರಾಮರಾಜ್ಯವಿಯೋಗ ಪ್ರಸಂಗ

**ಅಂಶಿಗಣಬಂಧದಲ್ಲಿ ವರಣ–ಅನುಪದಗಳು**

ವಾಣೀ ಸರೀಸೃಪವೇಣಿ ನಂಬಿದೆ ನಿನ್ನ । **ಶಾರದಾಂಬಾ** ॥ ಕೀರ ।
ವಾಣಿ ವಾಗ್ದೇವಿ ಕಲ್ಯಾಣಿ ನೀಸಲಹೆನ್ನ **ಶಾರದಾಂಬಾ** ॥

—ವಿಶ್ವಾಮಿತ್ರ ಪ್ರತಾಪ ಪ್ರಸಂಗ

ಹೀಗೆ ಅನೇಕ ಗೀತಗಳಲ್ಲಿ ಅನುಪದವು ಬರುವುದುಂಟು. ಈ ಅನುಪದಕ್ಕೂ ಯಮಕಕ್ಕೂ ವ್ಯತ್ಯಾಸವಿದೆ. ಅನೇಕಾಕ್ಷರದ ಪದವು ನಿಯತಸ್ಥಾನದಲ್ಲಿ ಅರ್ಥ-ವ್ಯತ್ಯಾಸವನ್ನು ಪಡೆದು ಪುನಃ ಪುನಃ ಬಂದರೆ ಯಮಕಾಲಂಕಾರವಾಗುವುದು.

ಪದ್ಯದ ಪಾದಾಂತ್ಯ ಸ್ಥಾನದಲ್ಲಿ ಬರುವ ಯಮಕವನ್ನು ಅನುಪದವೆಂದು ಎಣಿಸಬಾರದು :

ಪಾಲಯಮಾಂ ದೇವಿ **ಶಾರದೆ** ॥ ಅಂಬಾ । ಲೋಲಾಕ್ಷಿ ಗಾನಪಿ **ಶಾರದೆ** ॥

ಇವರ ಪಾದಾಂತ್ಯದ ಪದಭಾಗಗಳು ಸಮಾನವಾಗಿದ್ದರೂ ಅನುಪದವಾಗುವು ದಿಲ್ಲ. ಯಮಕವಾಗುತ್ತದೆ.

## ಶಿಖಾಪಾದ

ಒಂದು ಪದ್ಯದ ಅಂತ್ಯಭಾಗದಲ್ಲಿ ಬೇರೆಯಾಗಿ ನಿಲ್ಲುವ ಚರಣಕ್ಕೆ **ಶಿಖಾಪಾದ**ವೆಂದು ಹೆಸರಿಡಬಹುದು. ಕೆಳಗಿನ ಗೀತಗಳ ಅಂತ್ಯಭಾಗದಲ್ಲಿ ಶಿಖಾಪಾದವಿದೆ.

**ಮಾತ್ರಾಗಣ ಬಂಧ**

ಶ್ರೀ ಗಣಪ ಗಿರಿಜಾತೆಯಾತ್ಮಜ ।
ಯೋಗಿನುತ ಪದಪಂಕಜ ॥
ನಾಗಭೂಷಣ ಸುತಗುಹಾಗ್ರಜ ।
ನಾಗವದನ ಚತುರ್ಭುಜ ॥ **ಶರಣುಶರಣು** ॥

—ಅತಿಕಾಯಕಾಳಗ ಪ್ರಸಂಗ

**ವಿಷ್ಣುಗಣಪ್ರಧಾನ ಬಂಧ**

ತೋರೇ ಬೇಗನೆ ಸಖಿ ತೋರ ಮುತ್ತಿನ ಹಾರ ।
ಭಾರವಾಗಿದೆಯೆನಗೆ ॥
ಈರೇಳು ಲೋಕವ ಪೊರೆವ ದಯಾನಿಧಿ ।
ಬಾರನೇತಕೆ ಮನೆಗೆ ॥ **ಹೇ ಸಖಿಯೇ** ॥

—ಕನಕದಾಸರ ಪದ

ಕೆಲವು ಗೀತಗಳಲ್ಲಿ ಅನೇಕ ಶಿಖಾಪಾದಗಳು ಬರುವುವು.

ದುರುಳರ ಭಯಕಂಜಿ ಶರಣು ಹೊಕ್ಕವರನ್ನು ।
ಪೊರೆವುದೆಮ್ಮಯ ಬದ್ಧ ಕಾರ್ಯ ॥ ಧೈರ್ಯ ॥ ಶೌರ್ಯ ॥ ಗುಣವರ್ಯ ॥

—ಕುಮಾರವಿಜಯ ಪ್ರಸಂಗ

ಹೊಳೆಯ ಒರತೆಯಲ್ಲಿ ಮಳಲು ಚೆಲ್ಲಿರ್ಪಂತೆ ।
ಕೆಳದಿಯರೊಡಗೂಡಿ ಕಲಿತೆಯೊ ಬೆಡಗs ॥
ಎಲೆ ಹುಡುಗs ॥ ಬಲು ತುಡುಗs ॥ ಬಿಡು ಎನ್ನ ಸೆರಗs ॥

—ಕನಕದಾಸರ ಪದ

ಅನೇಕ ಶಿಖಾಪಾದಗಳಿದ್ದರೆ ಹೆಚ್ಚಾಗಿ ಅವುಗಳಲ್ಲಿ ಅಂತ್ಯಪ್ರಾಸವು ಬರುವುದು.

## ಪ್ರಗೀತಕ

ಛಂದಶ್ಶಾಸ್ತ್ರದಲ್ಲಿ ಒಂದು ಮಾತ್ರೆಯ ಅಕ್ಷರಕ್ಕೆ ಲಘುವೆಂದೂ ಎರಡು ಮಾತ್ರೆಗಳ ಅಕ್ಷರಕ್ಕೆ ಗುರುವೆಂದೂ ಮೂರು ಮಾತ್ರೆಗಳ ಅಕ್ಷರಕ್ಕೆ ಪ್ಲುತವೆಂದೂ ಸಂಜ್ಞಾನಾಮಗಳನ್ನು ಇಡಲಾಗಿದೆ. ಆದರೆ ಕೆಲವು ಪದ್ಯಗಳಲ್ಲಿ ಪ್ಲುತಕ್ಕಿಂತ ಅಧಿಕ ಮಾತ್ರೆಗಳ ಬೆಲೆಯನ್ನು ಪಡೆಯುವ ಅಕ್ಷರವೂ ಬರುವುದುಂಟು. ಇದಕ್ಕೆ ಬಿ. ಎಂ. ಶ್ರೀಕಂಠಯ್ಯನವರು ಕೆಳಗಿನ ದೃಷ್ಟಾಂತವನ್ನು ಕೊಟ್ಟಿರುವರು :

ನನ್ನ ಬೆಳ್ಳಿಯು ಕೂದಲಂದ ।
ನನ್ನ ಕಣ್ಣಿಗದೇನುಚಂದ ।
ಮೂಡ ಬೆಳ್ಳಿಯು ಥಳಕು ಮಂದ ।
ನನ್ನ । ಮೋ । ರಿ ॥

"ಮೂರಕ್ಕಿಂತಲೂ ಹೆಚ್ಚು ಮಾತ್ರೆಗಳ ಬೆಲೆ ಒಂದು ಅಕ್ಷರಕ್ಕೆ ಇರುವಲ್ಲಿ ಅವನ್ನು 'ಮೋ' ಹೀಗೆ ಗುರುತಿಸಬಹುದು. ಅಂಥ ಅಕ್ಷರವನ್ನು 'ಕಂಪಿತ'ವೆಂದು ಕರೆಯಬಹುದು" ಎಂದು ಅವರು ಅಭಿಪ್ರಾಯಪಟ್ಟಿರುವರು.5 ["ನನ್ನ। ಮೋರಿऽ॥" ಎಂದು "ಮೋ"ಯನ್ನು ಗುರುವಾಗಿಯೇ ಉಚ್ಚರಿಸಿ "ರೀ"ಯನ್ನು ವಿಕರ್ಷಿಸಿ ಪಠಿಸ ಲಿಕ್ಕೂ ಸಾಧ್ಯವಾಗುವುದು.]

ಸಂಗೀತಶಾಸ್ತ್ರದಲ್ಲಿ ಗಮಕದ ಒಂದು ಭೇದಕ್ಕೆ 'ಕಂಪಿತ'ವೆಂಬ ಹೆಸರಿದೆ. ದ್ರುತವ ಅರ್ಧಾಂಶವೇಗದಲ್ಲಿ ಸ್ವರಕಂಪನ ಮಾಡಿದರೆ ಕಂಪಿತವಾಗುವುದೆಂದು ಸೂಚಿಸಲಾಗಿದೆ ["ದ್ರುತಾರ್ಧಮಾನ ವೇಗೇನ ಕಂಪಿತಂ ಗಮಕಂ"-ಸಂಗೀತದರ್ಪಣ]. ತಾಳಾಂಗ ಸಂಜ್ಞೆಯಾದ ಅನುದ್ರುತಕ್ಕೆ ಒಂದು ಅಕ್ಷರಕಾಲವೆಂದೂ ದ್ರುತಕ್ಕೆ ಎರಡು ಅಕ್ಷರಕಾಲವೆಂದೂ ಸಾಮಾನ್ಯವಾಗಿ ಎಣಿಸುವ ರೂಢಿಯಿದೆ.

ಸಂಗಿತದ ಕಾಲಮಾತ್ರೆಗೂ ಛಂದಸ್ಸಿನ ವರ್ಣಮಾತ್ರೆಗೂ ವ್ಯತ್ಯಾಸವಿದೆ. ಆದರೂ ಸಾಧಾರಣವಾಗಿ ದ್ರುತದ ಎರಡು ಕಾಲಮಾತ್ರೆಗಳನ್ನು ಛಂದಸ್ಸಿನ ಒಂದು ಮಾತ್ರೆಗೆ ಸಮಾನವೆಂದು ಪರಿಗಣಿಸಲಾಗುವುದು. ಹೀಗಾಗಿ ಒಂದು ಅಕ್ಷರ ಕಾಲ ಕಂಪನವನ್ನು ಪಡೆಯುವ ಕಂಪಿತಕ್ಕೆ ನಿಶ್ಚಿತಮಾತ್ರಾಮೌಲ್ಯವು ಬರುತ್ತದೆ. ವೇದ-ಪಠನ ಕಾಲದಲ್ಲಿ ಕೆಲವೆಡೆಗಳಲ್ಲಿ ಕೇಳಿಬರುವ ಕಂಪಿತಕ್ಕೂ ನಿಶ್ಚಿತ ಕಂಪನ ಕಾಲವನ್ನು ನಿರ್ಧರಿಸಲಾಗುವುದು. ಹೀಗಾಗಿ ಕಂಪನಕ್ಕೆ **ಒಳಗಾಗದೆ** ಪ್ಲುತಕ್ಕಿಂತ ಹೆಚ್ಚು ವಿಕರ್ಷಣೆಗೊಳ್ಳುವ ಅಕ್ಷರಕ್ಕೆ ಕಂಪಿತವೆಂಬ ಹೆಸರು ಉಚಿತವಾಗುವುದಿಲ್ಲ.

ಪಾತಂಜಲಿ ಮಹಾಭಾಷ್ಯದಲ್ಲಿ ಸ್ವರದೋಷವನ್ನು ನಿರೂಪಿಸುವ ಸಂದರ್ಭದಲ್ಲಿ ಒಂದು ಅಕ್ಷರವನ್ನು ವಿಕರ್ಷಿಸಿ ಓದುವಂತಾದರೆ 'ಪ್ರಗೀತ'ವೆಂಬ ದೋಷವಾಗುವು ದೆಂದು ಸೂಚಿಸಲಾಗಿದೆ. ಶಾಸ್ತ್ರೀಯ ರೀತಿಯನ್ನು ಲಕ್ಷಿಸಿದರೆ ಪ್ಲುತಕ್ಕಿಂತ ಅಧಿಕ ಮಾತ್ರಾಮೌಲ್ಯವನ್ನು ಪಡೆಯುವ ಅಕ್ಷರವು ಸ್ವರದೋಷಕ್ಕೆ ಒಳಗಾಗುವುದೆಂದು ಹೇಳಬೇಕಾಗುತ್ತದೆ. ಆದರೆ ದೇಶೀಯ ಭಾಷೆಗಳಲ್ಲಿ ಇದನ್ನು ನಿರ್ದೋಷವೆಂದು ಪರಿಗಣಿಸಲಾಗುವುದು. ಹೀಗಾಗಿ "ಪ್ರಗೀತ" ಸ್ವರವನ್ನು ಪಡೆಯುವ ಅಕ್ಷರಕ್ಕೆ **"ಪ್ರಗೀತಕ"** ಎಂಬ ಸಂಜ್ಞೆಯನ್ನು ಕೊಡಬಹುದು.

ಲೌಕಿಕ ಛಂದಶ್ಶಾಸ್ತ್ರದಲ್ಲಿ ಪ್ಲುತವನ್ನು ಗುರುವೆಂದೇ ಭಾವಿಸುವಂತೆ 'ಪ್ರಗೀತಕ' ವನ್ನು ಗುರುವೆಂದೇ ಬರೆಯುವ ರೂಢಿ ಪ್ರಚಲಿತವಾಗಿದೆ. ಮಾರ್ಗೀಯ ಕಾವ್ಯ ಗಳಲ್ಲಿ ಪ್ರಗೀತಕದ ಪ್ರಯೋಗವು ಕಂಡುಬರುವುದಿಲ್ಲ. ಆದುದರಿಂದ ಈ ಸಂಜ್ಞೆ ಯನ್ನು ಛಂದಶ್ಶಾಸ್ತ್ರಗಳಲ್ಲಿ ಉಲ್ಲೇಖಿಸುವ ಅಗತ್ಯವೇ ಉಂಟಾಗಲಿಲ್ಲ.

# ಅನುಬಂಧ

## ಗುರ್ವಂಶ

ಕೆಲವು ಪದ್ಯಗಳ ನಿಶ್ಚಿತ ಪಾದಾಂತ್ಯ ಗಣಸ್ಥಾನದಲ್ಲಿ ಒಂದು ಅಕ್ಷರ ಮಾತ್ರವೇ ನಿಲ್ಲುವುದುಂಟು :

ಮಿನುಗೆಲೆ ಮಿನುಗೆಲೆ ನಕ್ಷತ್ರ ॥
ನನಗಿದು ಚೋದ್ಯವು ಬಹುಚಿತ್ರ ॥
ಘನಗಗನದಿ ಬಲು ದೂರದಲಿ ॥
ಮಿನುಗುವೆ ವಜ್ರಾಕಾರದಲಿ ॥

—ಪಂಜೆಯವರ ಕವನ

ಇದರ ಪ್ರತಿಪಾದಾಂತ್ಯದಲ್ಲಿಯೂ ಚತುರ್ಮಾತ್ರಾಗಣಸ್ಥಾನದಲ್ಲಿ ಒಂದು ಅಕ್ಷರ ಮಾತ್ರವೇ ಬಂದಿದೆ.

ಹೆದರುವೆನು ನಾನಿನ್ನ ಬಿನ್ನಾಣಕೆಲೆ ಹೆಣ್ಣೆ ।
ಹೆದರದಿರು ನೀನು ನನಗೆ ॥
ಹೊರಲಾರದಳಲಿಂದ ನೊಂದವನು ತಂದವನು ।
ಹೊರಿಸುವೆನೆ ಹೇಳು ನಿನಗೆ ॥

—ಇಂಗ್ಲಿಷ್ ಗೀತಗಳು

ಇದರ ಸಮ ಪಾದಾಂತ್ಯದಲ್ಲಿ ಪಂಚಮಾತ್ರಾಗಣ ಸ್ಥಾನದಲ್ಲಿ ಒಂದು ಅಕ್ಷರ ಮಾತ್ರವಿದೆ.

ಇರುಬಿನೊಳು ಸಿಲುಕಿರ್ದ ಹುಲಿಯನು ।
ಮುರಿದು ಕಳೆಯದೆ ತಳಪಟಕೆ ಬಿ ।
ಟ್ಟಿರಿಯಬಹುದೇ ಕೊಂದು ಕೂಗದೆ ಬಿಡುವುದೇ ಬಳಿಕ ॥

ಈ ಷಟ್ಪದಿಯ ಅರ್ಧಭಾಗದ ಅಂತ್ಯಗಣ ಸ್ಥಾನದಲ್ಲಿ ಒಂದು ಅಕ್ಷರ ಮಾತ್ರವೇ ಇದೆ.

ಹೀಗೆ ನಿಶ್ಚಿತ ಪಾದಾಂತ್ಯಸ್ಥಾನದಲ್ಲಿ ನಿಲ್ಲುವ ಅಕ್ಷರವು ಲಘುವಾದರೂ ಗುರುವಾದರೂ ಅದನ್ನು ಇತರ ಗಣಮೌಲ್ಯಕ್ಕೆ ಸರಿಯಾಗುವಂತೆ ವಿಕರ್ಷಿಸಿ ಓದಬೇಕು : ಅಥವಾ ಇದನ್ನು ಪಠಿಸಿದ ಬಳಿಕ ಉಳಿಯುವ ಕಾಲವನ್ನು ಮೌನದಿಂದ ತುಂಬಬೇಕು. ಹೇಗಿದ್ದರೂ ಈ ಅಕ್ಷರವನ್ನು ಗುರೂಚ್ಚಾರ ಕಾಲ ಪ್ರಮಾಣವಾದರೂ ವಿಕರ್ಷಿಸಿ ಪಠಿಸಲೇಬೇಕಾಗುವುದು. ಇದನ್ನು ಹೀಗೆ ಓದಲು ಅನುಕೂಲವಾಗುವಂತೆ ಇದರ ಅನಂತರ ವಿರಾಮವು ಬರಲೇಬೇಕಾಗಿದೆ. ಇಲ್ಲಿ ಬರುವ ವಿರಾಮವು ಪಾದಮಧ್ಯ-ಯತಿಗಿಂತ ಭಿನ್ನವಾಗಿದೆ. ಸಂಸ್ಕೃತ ಛಂದಸ್ಸಿನಲ್ಲಿ ಅಗಾಯತಿ-ಯತಿ-ವಿರತಿ-

ವಿಚ್ಛೇದ-ಅವಸಾಯಗಳೆಂಬ ಪ್ರಭೇದಗಳನ್ನು ಗುರುತಿಸಲಾಗಿದೆ.[6] ಇಲ್ಲಿ ಅವಸಾಯ ವಿರಾಮವು ಬರುವುದೆಂದು ನಿರ್ಧರಿಸಬಹುದು. ದಿ॥ ತೀ. ನಂ. ಶ್ರೀಕಂಠಯ್ಯನವರು ಚರಣದ ಕೊನೆಗೆ ನಿಂತು ಮುಡಿವ ಕೊಡುವ ಬಿಡಿಯಾದ ಅಕ್ಷರಕ್ಕೆ "ಮುಡಿ" ಎಂದು ಹೆಸರಿಟ್ಟಿರುವರು. ಆದರೆ "ಮುಡಿ" ಎಂಬ ಶಬ್ದವು ನ್ಯಾಸಸ್ಥಾನ (ಮುಗಿತಾಯ) ವನ್ನು ಸೂಚಿಸುವ ಪಾರಿಭಾಷಿಕ ಸಂಜ್ಞೆಯಂತೆ ಭಾಸವಾಗುವುದು. ಎಲ್ಲಾ ಭಾರತೀಯ ಭಾಷೆಗಳ ಛಂದೋಬಂಧಗಳಲ್ಲಿಯೂ ಗೋಚರಿಸುವ ಈ ಬಿಡಿಯಾದ ಅಕ್ಷರಕ್ಕೆ ಇತರ ಸಂಜ್ಞಾನಾಮಗಳಂತೆ ಸಂಸ್ಕೃತದ ಹೆಸರನ್ನೇ ಇಡುವುದು ವಿಹಿತ ವಾಗಿದೆ. ಅಂತ್ಯಗಣದ ಆದ್ಯಕ್ಷರವಾಗಿ ಕರ್ಷಣವನ್ನು ಪಡೆದು ಗಣಸ್ಥಾನದಲ್ಲಿ ನಿಲ್ಲುವ ಈ ಅಕ್ಷರವನ್ನು **ಗುರ್ವಂಶ**ವೆಂದು ಹೇಳಬಹುದು. ಇದರ ಅನಂತರ ತಪ್ಪದೆ ಅವಸಾಯ ವಿರಾಮವು ಬರುವುದರಿಂದ ಇದಕ್ಕೆ ಇತರ ಗಣದ ಮೌಲ್ಯವು ಘಟಿಸುವುದೆಂದು ಹಾಡುವಾಗ ಮನವರಿಕೆಯಾಗುವುದು. ಆದುದರಿಂದ ಪೂರ್ವಿಕರು ಇದನ್ನು ಸೂಚಿಸಿದಂತೆ **ಗುರು**ವೆಂದೇ ನಿರೂಪಿಸಿದರೂ ಸಾಕೆಂದು ತೋರುತ್ತದೆ. ಅಂತೂ ಇದಕ್ಕೆ ಬೇರೆ ಹೆಸರನ್ನು ಇಡುವ ಅವಶ್ಯವಿಲ್ಲವೆನ್ನಬಹುದು.

## ಅಲ್ಪಮಾತ್ರಾಘಟಕ-ಬ್ರಹ್ಮಗಣ

ಕೆಲವು ಮಾತ್ರಾಗಣ ಬಂಧಗಳಲ್ಲಿ ನಿಶ್ಚಿತ ಪಾದಾಂತ್ಯಕ್ಕೆ ಅಲ್ಪಮಾತ್ರಾ ಘಟಕವು ಬರುವುದುಂಟು. ಆದರೆ ಇದರ ಅಂತ್ಯಾಕ್ಷರವನ್ನು ವಿಕರ್ಷಿಸಿ ಓದುವುದ ರಿಂದಾಗಿ ಇದಕ್ಕೆ ಇತರ ಗಣದ ಮಾತ್ರಾಮೌಲ್ಯವು ಬರುವುದು.

ಅರಸಿನ ಕುಲವೋ ಏನಿದ್ದೇನು ? ।
ಸುರವಧು ರೂಪೋ ಏನಿದ್ದೇನು ? ॥

—ಇಂಗ್ಲಿಷ್ ಗೀತಗಳು

ಇದರ ಪಾದಾಂತ್ಯಗಣವು ಚತುರ್ಮಾತ್ರಾ ಮೌಲ್ಯವನ್ನು ಪಡೆಯುವುದು.

ಸಿರಿಯುರಸ ನೊಲ್ಮೆಗೆಲಸಂಗೆಯ್ಯುತಿ**ಹೆನು** ॥
ಪೊರೆಯೊಂದೆನುತ್ತಾನದೇಕೆ ಬೇ**ಡುವೆನು** ॥
ಪೊರೆಯದಿರಲವನೇಳ್ಗೆಯೇ ಪಾರಿ**ಪೋಕುಂ** ॥
ತಿರಿವುತಿಪ್ಪವತೆಯೆನ್ನುಂ ನೆಲಸಿ **ನಿಲ್ಕುಂ** ॥

—ಸೊಬಗಿನ ಬಳ್ಳಿ

ಇದರ ಪಾದಾಂತ್ಯಗಣವು ಪಂಚಮಾತ್ರಾ ಮೌಲ್ಯವನ್ನು ಗಳಿಸುತ್ತದೆ.

ಖಗಸಂಕುಲ ಹಾರುತ್ತಿರೆ ಕರಿಮೋಡದ **ತೆರದಿ** ॥
ಚೆಲುವುಕ್ಕಿದೆ ಮುದ ಮೂಡಿದೆ ಯಾದವಗಿರಿ**ಸಭದಿ** ॥

—ಪಾತೆ

ಇದರ ಪಾದಾಂತ್ಯಗಣವು ಷಣ್ಮಾತ್ರಾ ಮೌಲ್ಯವನ್ನು ಹೊಂದುತ್ತದೆ.

ಕಾಡಬಳಗದ ಸಸ್ಯ ಶಾದ್ವಲದ ಶಾಂತಿಯುಲಿ ।
ತಲೆಗರೆದ ತತ್ವಗಳನರಸು ॥
ಬಾಳುವೆಯು ನಡುಹಗಲ ಕವಿವ ಚಿಂತೆಯು ಮುಗಿಲ ।
ತೊಲಗಿಸುತ ಕಂಬನಿಯು ನೊರಸು ॥

—ಮಾದ್ರಿಯ ಚಿತೆ

ಇದರ ಸಮಪಾದಾಂತ್ಯ ಗಣಕ್ಕೆ ಪಂಚಮಾತ್ರಾಮೌಲ್ಯವು ಬರುತ್ತದೆ.

ಶ್ರೀ ವೀರಭದ್ರವರ । ಪಾವನಾತ್ಮಕದೇವ । ದೇವ ಮಂಗಳ
ಮತಿಯು।ನೀವುದನವರತ ॥

—ಶಿವಕಲ್ಯಾಣ ಪ್ರಸಂಗ

ಇದರಲ್ಲಿ ಚತುರ್ಥ ಪಾದಾಂತ್ಯ ಗಣಕ್ಕೆ ಪಂಚಮಾತ್ರಾ ಮೌಲ್ಯವು ಬರುತ್ತದೆ.

ಹೀಗೆ ಮಾತ್ರಾಗಣ ಬಂಧಗಳಲ್ಲಿ ನಿಶ್ಚಿತ ಪಾದಾಂತ್ಯಕ್ಕೆ ಬರುವ ಅಲ್ಪಮಾತ್ರಾ ಘಟಕದ ಆದಿಯ ದ್ವಿಮಾತ್ರೆಗಳನ್ನು ಪಠಿಸಿದ ಅನಂತರ ಇತರ ಗಣಪ್ರಮಾಣಕ್ಕೆ ಸರಿಯಾಗುವಂತೆ ಅಂತ್ಯಾಕ್ಷರವನ್ನು ವಿಕರ್ಷಿಸಿ ಓದಬೇಕು ; ಅಥವಾ ಗುರೂಚ್ಚಾರ ಕಾಲ ಪ್ರಮಾಣವಾದರೂ ಓದಿ ಉಳಿದ ಕಾಲವನ್ನು ಮೌನದಿಂದ ತುಂಬಬೇಕು. ಹೀಗಾಗಿ ಅಂತ್ಯಾಕ್ಷರವು ಲಘುವಾಗಿದ್ದರೂ ಗುರುವೆಂದೇ ಎಣಿಸಲ್ಪಡುವುದು. [ಪದಾಂತಲಘು ವಿಕಲ್ಪವಾಗಿ ಗುರುವಾಗುವುದೆಂದು ಪೂರ್ವಿಕರು ಸೂಚಿಸಿರುವರು.]

ಇದರ ಅಂತ್ಯದಲ್ಲಿ ಅವಸಾಯ ವಿರಾಮವೂ ಬರುವುದು. ಈ ಅಲ್ಪಮಾತ್ರಾ ಘಟಕವನ್ನು 'ದ್ವಿಕಲ' ಮತ್ತು 'ಗುರು'ವೆಂದು ವಿಭಜಿಸಿ, ಲಕ್ಷಣವನ್ನು ನಿರೂಪಿಸ ಬಹುದು.

ಕೆಲವು ವಿದ್ವಾಂಸರು ಇದಕ್ಕೆ ಬೇರೆ ಸಂಜ್ಞೆಯನ್ನು ಕೊಟ್ಟಿರುವರು. ಡಿ॥ ತೀ.ನಂ.ಶ್ರೀಕಂಠಯ್ಯನವರು 'ಪದ್ಮಗಣ'ವೆಂಬ ಹೆಸರನ್ನು ಇಟ್ಟಿರುವರು.[8] ಈ ಸಂಜ್ಞಾನಾಮವನ್ನೇ ಅನಂತರ ಅನೇಕ ವಿದ್ವಾಂಸರು ಅಂಗೀಕರಿಸಿ ತಮ್ಮ ಗ್ರಂಥ ಗಳಲ್ಲಿ ಪ್ರಯೋಗಿಸಿರುವರು. ಶ್ರೀ ಸೇಡಿಯಾಪು ಕೃಷ್ಣಭಟ್ಟರು ಇದನ್ನು 'ಊನ ಮಾತ್ರಾಗಣ' (ಊನಗಣ) ವೆಂದೇ ಬರೆದಿರುವರು.[9] ಈ ಸಂಜ್ಞೆಗಳ ಕುರಿತು ಪರಿಶೀಲಿಸುವ ಅವಶ್ಯವಿದೆ.

ಕರ್ಣಾಟಕ ವಿಷಯ ಜಾತಿ ಬಂಧಗಳಲ್ಲಿ ಕಂಡುಬರುವ ಬ್ರಹ್ಮ (ರತಿ) ಗಣಕ್ಕೂ ಈ ಅಲ್ಪಮಾತ್ರಾಘಟಕಕ್ಕೂ ವ್ಯತ್ಯಾಸವಿಲ್ಲ. ಬ್ರಹ್ಮಂ-ದ್ರುಹಿಣಂ-ಧಾತೃ-ವಿಧಿಯೆ. ಎಂಬ ಗಣವಾಚಕಗಳಂತೆಯೇ ವಿರಾಮಪೂರ್ವದ ಅಲ್ಪಮಾತ್ರಾ ಘಟಕಗಳು ಕಂಡು ಬರುವುವು. ಕೆಲವು ಅಂಶಗಣಬಂಧಗಳಲ್ಲಿ ವಿರಾಮದ ಪೂರ್ವದಲ್ಲಿ ನಿಲ್ಲುವ ಬ್ರಹ್ಮ ಗಣವೂ ವಿಷ್ಣುಗಣದ ಅಥವಾ ರುದ್ರಗಣದ ಮೌಲ್ಯವನ್ನು ಪಡೆಯುವುದುಂಟು.

ಜೋಗುಳ ಹಾಡನ್ನು ಲಾಲಿಸು **ಜೋಜೋ** ॥
ತೂಗುವೆ ತೊಟ್ಟಿಲ ಮಲಗಿರು **ಜೋಜೋ** ॥

—ಪಂಜೆಯವರ ಕವನ

ಇದರ ಪಾದಾಂತ್ಯದ ಬ್ರಹ್ಮಗಣಕ್ಕೆ ವಿಷ್ಣುಗಣದ ಮೌಲ್ಯವು ಬರುತ್ತದೆ.

ಕಬ್ಬಿಗರೋದುಗಬ್ಬವ ಹಾಡುಗಬ್ಬವ ।
ಕಬ್ಬದೊಳೊರೆವರಿ**ವೆರಡು** ॥
ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ ।
ಕಬ್ಬ ಹೇಳಿಲೆ ಸರಸ್ವ**ತಿಯೆ** ॥

—ಭರತೇಶ ವೈಭವ

ಇದರ ಸಮಪಾದಾಂತ್ಯಗಣಕ್ಕೆ ವಿಷ್ಣುಗಣದ ಮೌಲ್ಯವು ಬರುವುದು.

ಈ ವಿಷಯವನ್ನು ಪರಿಶೀಲಿಸಿದರೆ ಮಾತ್ರಾಗಣಬಂಧಗಳಲ್ಲಿಯೂ ಅಂಶಿಗಣ ಬಂಧಗಳಲ್ಲಿಯೂ ಏಕರೂಪದಿಂದ ಸ್ಥಾನ ಪಡೆಯುವ ಈ ಗಣಕ್ಕೆ 'ಬ್ರಹ್ಮಗಣ'ವೆಂಬ ಹೆಸರನ್ನೇ ಇಡಬಹುದೆಂದೂ 'ಪದ್ಮಗಣ'ವೆಂಬ ಬೇರೆ ಸಂಜ್ಞೆಯು ಅವಶ್ಯವಿಲ್ಲವೆಂದೂ ತೋರುತ್ತದೆ. ಶ್ರೀ ಸೇಡಿಯಾಪು ಕೃಷ್ಣಭಟ್ಟರು ಬರೆದಂತೆ 'ಊನ (ಮಾತ್ರಾ)ಗಣ'ವೆಂದು ಇದನ್ನು ಹೇಳಬಹುದಾದರೂ ಗಣದ ನಿರ್ದಿಷ್ಟ ಸ್ವರೂಪವನ್ನು ಆ ಹೆಸರು ಸೂಚಿಸುವುದಿಲ್ಲ. ಮಾತ್ರಾಗಣಬಂಧಗಳಲ್ಲಿ ನಿಶ್ಚಿತ ಮಾತ್ರಾಗಣದ ಮಾತ್ರಾ ಸಂಖ್ಯೆಯಿಂದ ಒಂದು ಮಾತ್ರೆ ಕಡಮೆಯಾದರೂ ಅನೇಕ ಮಾತ್ರೆಗಳು ಕಡಮೆಯಾದರೂ ಊನ ಮಾತ್ರಾಗಣವೆನಿಸುತ್ತದೆ. ಷಣ್ಮಾತ್ರಾಗಣಬಂಧದಲ್ಲಿ ಪಂಚಮಾತ್ರಾಗಣವು ಊನ ಮಾತ್ರಾಗಣವಾಗಬಹುದು. ಹಾಗೆಯೇ ಅವಸಾಯ ವಿರಾಮದ ಪೂರ್ವದಲ್ಲಿ ಗಣಸ್ಥಾನದಲ್ಲಿ ನಿಲ್ಲುವ ಅಕ್ಷರವೂ ಊನ ಮಾತ್ರಾಗಣವೆನಿಸಬಹುದು. ಆದುದರಿಂದ ಮಾತ್ರಾ ನಿಯಮವನ್ನು ಅನುಸರಿಸಿ ಹಿಂದೆ ನಿರ್ದೇಶಿಸಿದ ಗಣವನ್ನು ಸೂಚಿಸುವುದಾದರೆ ದ್ವಿಕಲ ಮತ್ತು ಗುರುವೆಂದೇ ವಿಭಜಿಸಿ ಬರೆಯಬೇಕಾಗುವುದು.[10] ಗಣಸಂಜ್ಞೆಯನ್ನು ಕೊಡುವುದಾದರೆ ಇದನ್ನು ಬ್ರಹ್ಮಗಣವೆಂದೇ ಹೇಳಬಹುದು.

ಕೆಲವರು ಮಾತ್ರಾಗಣ ಬಂಧಗಳ ಲಕ್ಷಣ ನಿರೂಪಣೆಯಲ್ಲಿ ಅಂಶಿಗಣದ ಉಲ್ಲೇಖವು ಉಚಿತವಲ್ಲವೆಂದು ಆಕ್ಷೇಪಿಸಬಹುದು. ಆದರೆ ಪೂರ್ವಿಕರು ಛಂದಶ್ಶಾಸ್ತ್ರಗಳಲ್ಲಿ ಆರ್ಯಾದಿ ಜಾತಿ ಬಂಧಗಳ ಲಕ್ಷಣವನ್ನು ನಿರೂಪಿಸುವ ಸಂದರ್ಭದಲ್ಲಿ ಮಾತ್ರಾಗಣಗಳೊಡನೆ ಜಗಣ ನಗಣಾದಿ ಅಕ್ಷರ ಗಣಗಳ ಹೆಸರನ್ನೂ ಪ್ರಸ್ತಾಪಿಸಿರುವರು. ಆದುದರಿಂದ ಮಾತ್ರಾಬಂಧಗಳ ಛಂದೋನಿಯಮವನ್ನು ಸೂಚಿಸುವಾಗ ಬೇರೆ ಜಾತಿಯ ಗಣಗಳನ್ನೂ ನಿರ್ದೇಶಿಸಬಹುದೆಂದು ವ್ಯಕ್ತವಾಗುವುದು. ಅಲ್ಲದೆ ಕನ್ನಡದಲ್ಲಿ ಪ್ರಯೋಗಗೊಂಡಿರುವ ಮಾತ್ರಾಗಣಗಳಿಗೂ ಅಂಶಿಗಣಗಳಿಗೂ ಮೂಲ

ಭೂತವಾದ ತಾಳಲಯಕ್ಕೆ ಸಂಬಂಧಿಸಿದ ಸಮಾನ ಲಕ್ಷಣವು ಕಂಡುಬರುವುದು. ಅಂಶಿಗಣಗಳಲ್ಲಿ ಆದಿಗೆ ಲಘುವಿದ್ದರೆ ಅನಂತರ ಗುರು ಬರಬಾರದೆಂಬ ನಿಯಮವಿದೆ. ಮಾತ್ರಾಗಣಗಳಲ್ಲಿ ಈ ನಿರ್ಬಂಧವಿಲ್ಲದ ಗಣಭೇದಗಳಿದ್ದರೂ ಕನ್ನಡದಲ್ಲಿ ಪ್ರಥಮ ಲಘು ದ್ವಿತೀಯ ಗುರುವಿರುವ ಮಾತ್ರಾಗಣಗಳನ್ನು ಪ್ರಯೋಗಿಸುವುದಿಲ್ಲ. [ವಿರಳ ವಾಗಿ ಕೆಲವು ಗೀತಗಳಲ್ಲಿ ಇಂತಹ ಗಣಗಳು ಗೋಚರಿಸಬಹುದು.] ಕೆಲವು ಹಾಡು ಗಳಲ್ಲಿ ಅಂಶಿಗಣಗಳೂ ಮಾತ್ರಾಗಣಗಳೂ ಮಿಶ್ರವಾಗಿ ಬರುವುವು. ಇದರಿಂದಾಗಿ ಇವುಗಳಲ್ಲಿ ಅನ್ಯೋನ್ಯ ಸಂಬಂಧವಿರುವುದೆಂದು ಖಚಿತವಾಗುವುದು. ಆದುದರಿಂದ ಮಾತ್ರಾಗಣಬಂಧಗಳ ಲಕ್ಷಣ ನಿರೂಪಣೆಯ ಸಂದರ್ಭದಲ್ಲಿ ಮಾತ್ರಾಗಣಗಳೊಡನೆ ಅಂಶಿಗಣಗಳನ್ನೂ ಸೂಚಿಸಿದರೆ ತಪ್ಪಾಗದೆಂದು ಭಾವಿಸಬಹುದು.

---

## ಅಡಿಟಿಪ್ಪಣಿಗಳು

1 ಡಾ॥ ಕೆ. ಶಿವರಾಮ ಐತಾಳರು–ಹುಸಿಗಣ ವೃತ್ತಾಂತ–ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೪೯–೨ ದಶಂಬರ ೧೯೬೪.

ಡಾ॥ ಡಿ. ಎಸ್. ಕರ್ಕಿಯವರು–ಕನ್ನಡ ಛಂದೋವಿಕಾಸ–ಪುಟ ೨೪೫–೨೪೬–ಮುದ್ರಣ ೧೯೫೬.

2 ಡಾ॥ ಚಿದಾನಂದಮೂರ್ತಿಯವರು–ಸಾಧನೆ–ಸಂಪುಟ ೯ ಸಂಚಿಕೆ ೧.

3 ಡಾ॥ ಚಿದಾನಂದಮೂರ್ತಿಯವರು–ಲಯಗ್ರಾಹಿ ಮತ್ತು ಲಯೋತ್ತರ ಲೇಖನ ಸಂಶೋಧನ ತರಂಗ, ಪುಟ ೧೮೭, ಸರಸ ಸಾಹಿತ್ಯ ಪ್ರಕಾಶನ ೧೯೬೬.

ಕೆ. ಜಿ. ನಾರಾಯಣ ಪ್ರಸಾದರು–ಕನ್ನಡ ಛಂದಸ್ಸಿನ ಚರಿತ್ರೆ ಎರಡನೆಯ ಸಂಪುಟ. ಪುಟ ೩೮೫ ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆ ೧೯೮೦.

4 ಚತುರದಾಮೋದರ ವಿರಚಿತಂ ಸಂಗೀತದರ್ಪಣಂ ತಾಳಾಧ್ಯಾಯ ಶ್ಲೋಕ ೬೯೧. ತಂಜಾವೂರು ಸರಸ್ವತೀಮಹಲ್ ಪ್ರಕಟಣೆ ೧೯೫೨.

ಸಂಗೀತ ವಿದ್ವಾನ್ ವಿ. ರಾಮರತ್ನಂ ಮತ್ತು ಎ. ಎಸ್. ಸಂಪತ್ಕುಮಾರಾಚಾರ್ಯರು– ಕರ್ನಾಟಕ ಸಂಗೀತ ಸುಧಾ ಪುಟ ೫೦. ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆ.

5 ಮಧುಸೂದನ ವಿದ್ಯಾವಾಚಸ್ಪತಿ–ಪಿಂಗಳ ಛಂದಶ್ಶಾಸ್ತ್ರ ಭೂಮಿಕಾ–ಛಂದೋವಾದ ಪುಟ ೪೪. ನಿರ್ಣಯ ಸಾಗರ ಪ್ರಕಟಣೆ ೧೯೩೮.

6 ಡಾ॥ ತೀ. ನಂ. ಶ್ರೀಕಂಠಯ್ಯನವರು – ಮಾತ್ರೆ–ಮುಡಿ ಪದ್ಯಗಳ ಲೇಖನ – ಸಮಾಲೋಕನ ಪುಟ ೨೦೦, ಶಾರದಾ ಮಂದಿರ ಪ್ರಕಟಣೆ ೧೯೫೮.

ಕೆ. ಜಿ. ನಾರಾಯಣ ಪ್ರಸಾದರು. ಕನ್ನಡ ಛಂದಸ್ಸಿನ ಚರಿತ್ರೆ ಎರಡನೆಯ ಸಂಪುಟ ಪುಟ ೩೯೦.

7. ಡಾ॥ ತೀ. ನಂ. ಶ್ರೀಕಂಠಯ್ಯನವರು–ಸಮಾಲೋಕನ ಪುಟ ೨೧೩, ಪೂರ್ವೋಕ್ತ.

8 ಸೇಡಿಯಾಪು ಕೃಷ್ಣಭಟ್ಟರು–ಛಂದೋಗತಿ, ಪುಟ ೧೩೧. ಗೀತಾ ಬುಕ್ ಹೌಸ್ ಪ್ರಕಟಣೆ ೧೯೮೫.

9 ಕ. ಪು. ಸೀತಾರಾಮ ಕೆದಿಲ್ಲಾಯ–ಛಂದೋದರ್ಪಣಂ. ಸಪ್ತಮಾಧ್ಯಾಯದ ಕೆಲವು ಪದ್ಯಗಳು, ೧೯೮೫.

10 ಡಾ॥ ತೀ. ನಂ. ಶ್ರೀಕಂಠಯ್ಯನವರು–ಸಮಾಲೋಕನ ಪುಟ ೨೦೫. ಪೂರ್ವೋಕ್ತ.

ಕೆ. ಜಿ. ನಾರಾಯಣ ಪ್ರಸಾದರು–ಕನ್ನಡ ಛಂದಸ್ಸಿನ ಚರಿತ್ರೆ ಎರಡನೆಯ ಸಂಪುಟ, ಪುಟ ೩೯೫–ಪೂರ್ವೋಕ್ತ.

---

**ಕಿರುಟಿಪ್ಪಣಿ :**

# ಧ್ರುವಚರಿತೆ–ಯಕ್ಷಗಾನ ಕೃತಿ

ಬೆಂಗಳೂರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಪ್ರಕಟನೆಯಾದ ಕವಿ ತಿಮ್ಮಪ್ಪದಾಸರ 'ಧ್ರುವಚರಿತೆ'ಯ ಸಂಪಾದಕರಾದ ಡಾ॥ ಎನ್. ಎಸ್. ಲಕ್ಷ್ಮೀನಾರಾಯಣಭಟ್ಟರು 'ಮುನ್ನುಡಿ'ಯಲ್ಲಿ ಧ್ರುವಚರಿತೆ – ಯಕ್ಷಗಾನ ಕೃತಿಯ ಬಗೆಗೆ ಪ್ರಸ್ತಾವಿಸಿದ್ದಾರೆ.

1. ವ್ರಜಪುರಾಧಿಪ ಲೋಕನಾಥನೊಲವಿನಲಿ' ಎಂದು ಕೃತಿಕಾರ ಹೇಳಿಕೊಂಡಿದ್ದಾನೆ. **ಕೃತಿಕಾರ ಯಾರು ಎಂದು ತಿಳಿಯದು** (ಪುಟ 6).

2. **'ಅಪ್ರಕಟಿತ ಕೃತಿಗಳಲ್ಲಿ ಎರಡನೆಯದಾದ ಧ್ರುವನ ಯಕ್ಷಗಾನ'** (ಪುಟ 17).

**ವಿವರಣ :** ಈ ಯಕ್ಷಗಾನ ಕೃತಿಯ ಉಲ್ಲೇಖನ ಕರ್ಣಾಟಕ ಕವಿಚರಿತೆಯಲ್ಲಿದೆ (3-392). ಹಟ್ಟಿಯಂಗಡಿ ರಾಮಭಟ್ಟನು ಕವಿ : ಈತ ಕುಂದಾಪುರ ತಾಲ್ಲೂಕಿನವನು : ಹಲವಾರು ಕೃತಿಗಳ ರಚಕನೆಂದು ತಿಳಿಯುತ್ತದೆ. (ಯಕ್ಷಗಾನ-ಬಯಲಾಟ : ಡಾ॥ ಕೆ. ಶಿವರಾಮ ಕಾರಂತ). ವ್ರಜಪುರವೆಂದು ಈ ಕೃತಿಯು ಮೊದಲಿಗೆ ಹೇಳಿದೆ : **'ಗೋಷ್ಠಿಪುಟ'**ವೆಂದು 1ನೇ-2ನೇ ಸಂಧಿಗಳ ಕೊನೆಯಿದೆ. **ಈ ಕೃತಿ 1951ರಲ್ಲಿ** ಉಡುಪಿ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದಲ್ಲಿ **ಪ್ರಕಟಿತ**. ವಾಚಕರು ಇದನ್ನು ಗಮನಿಸಬಹುದು.

—ವಿದ್ವಾನ್ ಕೆ. ವೆಂಕಟರಾಯಾಚಾರ್ಯ

# ಕನ್ನಡ ಲಿಪಿಯ ವಿಕಾಸ

—ಡಾ॥ ಎನ್. ಅನಂತರಂಗಾಚಾರ್

(ಹಿಂದಿನ ಸಂಚಿಕೆಯಿಂದ)

ಮೇಲೆಯೇ ತಿಳಿಸಿರುವಂತೆ ಬಹುಕಾಲದವರೆಗೆ ಬ್ರಾಹ್ಮೀ ಲಿಪಿಯು ಸುಮಾರು ಕ್ರಿ.ಪೂ. ೧೨೦೦ರ ವೇಳೆಯಲ್ಲಿ ಫಿನಿಷಿಯನ್ ವರ್ಣಮಾಲೆಯಿಂದ ಅಂತಿಮವಾಗಿ ರೂಪಗೊಂಡಿರಬೇಕೆಂದೂ ಔತ್ತರೇಯ ರೂಪದಲ್ಲಿ ನೇರವಾಗಿ ಭಾರತಕ್ಕೆ ಬಂದಿರಬೇಕೆಂದೂ ಇಲ್ಲವೇ ದಕ್ಷಿಣ ಅರೇಬಿಯಾದಲ್ಲಿ ಬೆಳೆದು ಬಂದಂತೆ ದಾಕ್ಷಿಣಾತ್ಯ ದೇಶದಲ್ಲಿ ಬೆಳೆದು ಬಂದಿರಬೇಕೆಂದೂ ಭಾವಿಸಿದ್ದರು. ಇದಕ್ಕೆ ಹಿಂದೆ ಆರ್ಯರಿಗೆ ಯಾವ ಲಿಪಿಯೂ ಗೊತ್ತಿರಲಿಲ್ಲವೆಂದೂ ಮೆಸಪೊಟೋಮಿಯ ಮತ್ತು ದಕ್ಷಿಣ ಅರೇಬಿಯಾ ದೇಶಗಳಿಗೆ ವ್ಯಾಪಾರಕ್ಕೆ ಹೋಗುತ್ತಿದ್ದ ಭಾರತೀಯ ವರ್ತಕರು ಅದನ್ನು ತಂದು ಪ್ರಾಕೃತ ಮತ್ತು ಸಂಸ್ಕೃತ ಲೇಖನಗಳಿಗೆ ಉಪಯೋಗಿಸಿಕೊಂಡಿರಬೇಕೆಂದೂ ಅದು ಸು. ಕ್ರಿ.ಪೂ. ೫೦೦ರ ವೇಳೆಯಲ್ಲಿ ಆಗಿರಬೇಕೆಂದೂ ಸಂಶೋಧಕರು ಊಹಿಸಿದ್ದರು. ಅದರ ಸಂಪೂರ್ಣ ಪರಿಪುಷ್ಟ ರೂಪವೇ ಮೌರ್ಯರ ಬ್ರಾಹ್ಮಿಯಾಗಿರಬೇಕೆಂಬುದು ಅವರ ಮತವಾಗಿತ್ತು. ಸೆಮೆಟಿಕ್ ಮತ್ತು ಬ್ರಾಹ್ಮೀ ಅಕ್ಷರಗಳಲ್ಲಿರುವ ಕೆಲವು ಸಾಮ್ಯಗಳು ಅವರ ಊಹೆಗೆ ಕಾರಣವಾಗಿತ್ತು. ಆದರೆ ಮೊಹೆಂಜೊದಾರೋ ಸಂಶೋಧನೆಯಾದಮೇಲೆ ಅಲ್ಲಿಯ ಮುದ್ರಿಕಾಕ್ಷರಗಳಲ್ಲಿ ಬ್ರಾಹ್ಮಿಯ ಸಾಮ್ಯವು ಕಂಡುಬರುತ್ತದೆಯೆಂದು ತಿಳಿಯಿತು. ವ್ಯಂಜನಾಕ್ಷರಗಳಿಗೆ ಸ್ವರವನ್ನು ಕೂಡಿಸುವ ಪದ್ಧತಿಯು ಬ್ರಾಹ್ಮೀಯಲ್ಲಿರುವಂತೆ ಇಲ್ಲಿಯೂ ಇರುವುದು ಕಂಡುಬಂದುದರಿಂದ ಬ್ರಾಹ್ಮೀಲಿಪಿಯು ಈ ಸಿಂಧುಪಂಜಾಬಿಲಿಪಿಯ ವಿವಿಧ ಹಂತಗಳಲ್ಲಿ ಬೆಳೆದುಬಂದ ಉತ್ತರಾಧಿಕಾರಿಯಾಗಿರಬೇಕೆಂದು ಊಹಿಸಬಹುದು. ಇದರ ಪ್ರಕಾರ ಬ್ರಾಹ್ಮೀ ಲಿಪಿಯು ಈ ಸಿಂಧುಪಂಜಾಬಿ ಲಿಪಿಯ ರೂಪಾಂತರವೇ ಆಗಿರಬೇಕು. ಅದು ಕ್ರಿ.ಪೂ. ೧೫೦೦ಕ್ಕಿಂತ ಹಿಂದೆಯೇ ರೂಪಾಂತರವಾಗಿರಬೇಕು. ವೇದಕಾಲದಲ್ಲಿ ಆರ್ಯರು ತಮ್ಮ ಸಂಸ್ಕೃತಲೇಖನಕ್ಕೆ ಇದನ್ನೇ ಉಪಯೋಗಿಸಿಕೊಂಡಿರಬೇಕು. ಆದುದರಿಂದ ಕ್ರಿ.ಪೂ. ೯೦೦ರ ವೇಳೆಗೆ ಪೂರ್ವಬ್ರಾಹ್ಮಿಯೂ ಕ್ರಿ.ಪೂ. ೩೦೦ರ ವೇಳೆಗೆ ಮೌರ್ಯನ್ ಬ್ರಾಹ್ಮಿಯೂ ಪೂರ್ಣರೂಪವನ್ನು ಕಂಡಿರಬೇಕು. ಕ್ರಿ.ಶ. ಒಂದನೆಯ ಶತಮಾನದ ವೇಳೆಗೆ ಸಂಪೂರ್ಣವಾಗಿ ವ್ಯಾಪಿಸಿರಬೇಕು ಎಂಬುದು ಇಂದಿನ ವಾದಸರಣಿ.

ಹಿಂದೆಯೇ ತಿಳಿಸಿರುವಂತೆ ಈ ಬ್ರಾಹ್ಮೀಲಿಪಿಯು ಕ್ರಿ.ಶ. ೫-೬ ನೆಯ ಶತಮಾನದ ವೇಳೆಗೆ ವಿಶೇಷ ವ್ಯತ್ಯಾಸವಾಗದೆ ಮುಂದೆ ಕುಶಾನರ ಶಾಸನಗಳ ಆಧಾರದ ಮೇಲೆ ಔತ್ತರೇಯ ಲಿಪಿಗಳೂ ಪಲ್ಲವರ ಶಾಸನಗಳ ಆಧಾರದ ಮೇಲೆ

ದಕ್ಷಿಣದಲ್ಲಿ ತಮಿಳು, ಮಲಯಾಳ ಗ್ರಂಥ ಮತ್ತು ಕನ್ನಡ, ತೆಲುಗು ಲಿಪಿಗಳೂ ರೂಪಗೊಂಡಿವೆ. ಇವುಗಳಲ್ಲಿ ತಮಿಳು ಸುಮಾರು ೫೦೦ ರ ವೇಳೆಗೆ ತನ್ನ ಧ್ವನಿ ಸಂಯೋಜನೆಯಲ್ಲಿ ಸರಳವಾಯಿತು. ಅದರ ವರ್ಣಮಾಲೆಯೂ ಸರಳವಾಗಿ ವ್ಯಂಜನಗಳಲ್ಲಿ ವರ್ಗದ ೨-೩-೪ ನೆಯ ಊಷ್ಮವರ್ಣಗಳೇ ಇಲ್ಲದೆ ಒಂದು ವಿಶಿಷ್ಟ ರೀತಿಯನ್ನು ರೂಢಿಗೆ ತಂದಿತು. ಆದರೆ ತಮಿಳು ಸಂಸ್ಕೃತವನ್ನು ಬರೆಯಲು ಮೂಲಬ್ರಾಹ್ಮೀಸಂಪ್ರದಾಯವನ್ನೇ ಅನುಸರಿಸಬೇಕಾಯಿತು. ಇದರ ರೂಪಾಂತರವೇ ಗ್ರಂಥಲಿಪಿ. ಮಲೆಯಾಳವು ತಮಿಳುಲಿಪಿಯನ್ನು ಅನುವರ್ತಿಸಿದೆ.

ಅಶೋಕನ ಬ್ರಾಹ್ಮೀಲಿಪಿಯು ಕರ್ಣಾಟಕದಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನ ಬ್ರಹ್ಮಗಿರಿ, ಸಿದ್ದಾಪುರ, ಜಟ್ಟಿಂಗರಾಮೇಶ್ವರ ಎಂಬ ಸ್ಥಳಗಳಲ್ಲಿಯೂ ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಪಾಲ್ಕಿ ಗುಂಡು ಗವಿ ಮಠಗಳಲ್ಲಿಯೂ ಇರುವ ಶಾಸನಗಳಲ್ಲಿ ಸಿಕ್ಕುತ್ತವೆ. ಈಚೆಗೆ ಕೊಪ್ಪಳದಲ್ಲಿ ಕೂಡ ಎರಡು ಲಘುಪ್ರಸ್ತರಗಳು ದೊರೆತಿವೆ. ಈ ಶಾಸನಗಳ ಭಾಷೆ ಪಾಲಿ. ಇವುಗಳ ಕಾಲ ಕ್ರಿ.ಪೂ. ೨೫೨. ಬ್ರಹ್ಮಗಿರಿಶಾಸನದ ಕಡೆಯಲ್ಲಿ ಬರುವ 'ಲಿಪಿಕರೇಣ' ಎಂಬ ಪದವು ಖರೋಷ್ಠೀಲಿಪಿಯಲ್ಲಿರುತ್ತದೆ.

ಮುಂದೆ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದ ತಾಲ್ಲೂಕಿನ ಮಳವಳ್ಳಿ ಎಂಬ ಊರಿನಲ್ಲಿ ಎರಡು ಶಾಸನಗಳು ಅಶೋಕನ ಗುಹೆಯ ಅಕ್ಷರದಲ್ಲಿಯೂ ಪಾಲಿ ಭಾಷೆಯಲ್ಲಿಯೂ ಇರುತ್ತವೆ. ಇವು ಕದಂಬರ ಶಾಸನಗಳು. ಒಂದು (S.K. 263) ಕ್ರಿ.ಶ. ೧೫೦ನೆಯ ವರ್ಷಕ್ಕೂ ಮತ್ತೊಂದು (S.K. 264) ಕ್ರಿ.ಶ. ೩೫೦ ನೆಯ ವರ್ಷಕ್ಕೂ ಸೇರಿವೆ. ಇದಲ್ಲದೆ ಶಿಕಾರಿಪುರದ ತಾಲ್ಲೂಕಿಗೆ ಸೇರಿದ ತಾಳಗುಂದದಲ್ಲಿ ಪ್ರಣವೇಶ್ವರ ದೇವಸ್ಥಾನದ ಮುಂದಣ ಕಂಬದ ಮೇಲೆ ಕದಂಬರಾಜರ ವಿಷಯವೂ ಮತ್ತು ಚರಿತ್ರಾರ್ಹವಾದ ಅನೇಕ ಸಂಗತಿಗಳೂ ಅಡಗಿರುವ ಪುರಾತನವಾದ ಶಾಸನವೊಂದಿದೆ. ಇದರ ಕಾಲವು ಕ್ರಿ.ಶ. ಸು. 450 ಆಗುತ್ತದೆ. ಹಾಗೆಯೇ ಈಚೆಗೆ ಕ್ರಿ.ಶ. ಸುಮಾರು 450ರ ಹಲ್ಮಿಡಿಯ ಶಾಸನವು ಸಿಕ್ಕಿದೆ. ಇದೂ ಇದೇ ಮಾದರಿಯ ಲಿಪಿಯಲ್ಲಿ ರಚಿತವಾಗಿದೆ. ಇವುಗಳಿಗಿಂತ ಹಿಂದಿನ ಕನ್ನಡ ಶಾಸನಗಳು ಉಪಲಬ್ಧವಲ್ಲದುದರಿಂದ ಇಲ್ಲಿಂದ ಕನ್ನಡಲಿಪಿಯ ವಿಕಾಸವನ್ನು ಚಿತ್ರಿಸಬಹುದು.

ಲಿಪಿಯ ವಿಕಾಸವೆಂದರೆ ಲಿಪಿಯು ಆಕಾರದಲ್ಲಿ ವ್ಯತ್ಯಾಸವನ್ನು ಹೊಂದುವುದು. ಲಿಪಿಯ ವ್ಯತ್ಯಾಸಕ್ಕೆ ಸಾಮಾನ್ಯವಾಗಿ ಮೂರು ಕಾರಣಗಳನ್ನು ಸೂಚಿಸಬಹುದು. ಅವುಗಳಲ್ಲಿ ಮೊದಲನೆಯದು ಸೌಂದರ್ಯದೃಷ್ಟಿ. ಮುದ್ರಣಯಂತ್ರ ಬರುವವರೆಗೆ ಬರವಣಿಗೆಯೆಲ್ಲ ಪ್ರತ್ಯೇಕ ವ್ಯಕ್ತಿಗಳಿಂದ ಲಿಖಿತವಾಗುತ್ತಿತ್ತು. ಪ್ರತಿಯೊಬ್ಬ ಲೇಖಕನು ತನ್ನ ದೃಷ್ಟಿಯಿಂದ ಲಿಪಿಗಳನ್ನು ಸುಂದರವಾಗಿ ಬರೆಯಬೇಕೆಂದು ಅಕ್ಷರಗಳ ರೂಪವನ್ನು ಮಾರ್ಪಡಿಸುತ್ತ ಬರುತ್ತಾನೆ. ಹೀಗೆ

ಮಾಡುವುದರಲ್ಲಿ ಅಕ್ಷರಗಳ ಆಕಾರವು ವ್ಯತ್ಯಾಸವಾಗುತ್ತದೆ. ಎರಡನೆಯ ಕಾರಣ ಲೇಖನದಲ್ಲಿ ಸೌಲಭ್ಯದೃಷ್ಟಿ. ಇದರಿಂದ ನಿಧಾನವಾಗಿ ನೇರವಾಗಿ ಋಜುವಾಗಿ ಬರೆಯಬೇಕಾದ ಅಕ್ಷರಗಳ ಭಾಗಗಳು ವಕ್ರ ಅಥವಾ ಡೊಂಕಾಗುತ್ತವೆ. ಮೂರನೆಯ ಕಾರಣ ಶೀಘ್ರತೆಯ ದೃಷ್ಟಿ. ಲೇಖಕನು ತಾನು ಬರೆಯುವಾಗ ವೇಗವಾಗಿ ಬರೆಯಲು ಪ್ರಯತ್ನಿಸುತ್ತಾನೆ. ಇದು ಸಾಧ್ಯವಾಗುವುದು ಲೇಖನಿಯನ್ನು ಎತ್ತದೆ ಬರೆಯುತ್ತ ಹೋಗುವುದರಿಂದ. ಹೀಗೆ ಮಾಡುವುದರಲ್ಲಿ ಅಕ್ಷರಗಳಲ್ಲಿ ಮೊದಲಿಲ್ಲದ ಹೊಸರೇಖೆ ಬಂದು ಸೇರುತ್ತದೆ. ಕೋಣಾಕೃತಿಗಳಲ್ಲಿ ಬರೆಯುವ ಆಕಾರವು ಗುಂಡಗೂ ವಕ್ರವೂ ಆಗುತ್ತದೆ. ಈ ವ್ಯತ್ಯಾಸವು ಯಾವ ನಿರ್ದಿಷ್ಟ ನಿಯಮಗಳಿಗಾಗಲಿ ಅಧೀನವಾಗಿರುವುದಿಲ್ಲ. ಕಾಲಮಿತಿಗೂ ಒಳಪಟ್ಟಿರುವುದಿಲ್ಲ. ಪ್ರತ್ಯೇಕ ವ್ಯಕ್ತಿಗಳ ಕಲಾಭಿಜ್ಞತೆಗೆ ಅನುಗುಣವಾಗಿರುತ್ತದೆ. ಅದನ್ನು ಅಲ್ಪಕಾಲದಲ್ಲಿ ಕಂಡುಹಿಡಿಯಲೂ ಸಾಧ್ಯವಿಲ್ಲ. ದೀರ್ಘಕಾಲದ ಅವಧಿಯಲ್ಲಿ ವಿಚಾರಮಾಡಿದಾಗ ಅಲ್ಪಸ್ವಲ್ಪ ವ್ಯತ್ಯಾಸ ಕಾಣುತ್ತದೆ. ಮುದ್ರಣಯಂತ್ರ ಬಂದಮೇಲೆ ಅದರ ನಿಷ್ಕೃಷ್ಟ ರೂಪವನ್ನು ಮೊಳೆಯಲ್ಲಿ ಕಂಡರಿಸಿರುವುದರಿಂದ ಮುಂದಕ್ಕೆ ಅಕ್ಷರಗಳ ವಿಕಾಸಕ್ಕೆ ಅವಕಾಶವೇ ಇರುವುದಿಲ್ಲ. ಆದುದರಿಂದ ಈಗ ಕನ್ನಡಲಿಪಿಯ ವಿಕಾಸವನ್ನು ಕ್ರಿ.ಶ. ೫ನೆಯ ಶತಮಾನದಿಂದ ೨೦ನೆಯ ಶತಮಾನದವರೆಗೆ ಸುಮಾರು ೧೫ ಶತಮಾನಗಳ ಕಾಲದ ಅವಧಿಯಲ್ಲಿ ಅವುಗಳು ವ್ಯತ್ಯಾಸವಾದ ರೀತಿಯನ್ನು ವಿಚಾರಮಾಡಬಹುದು.

## ಕನ್ನಡ ಲಿಪಿಯ ವಿಕಾಸ

ಈ ವಿಕಾಸವನ್ನು ವಿಚಾರಮಾಡಲು ನಮಗಿರುವುದು ಎರಡೇ ಸಾಧನ. ಶಾಸನಗಳು ಮತ್ತು ಕೈಬರಹದ ಗ್ರಂಥಗಳು. ಶಾಸನಗಳು ಸಾಮಾನ್ಯವಾಗಿ ಶಿಲಾಲಿಪಿ ಮತ್ತು ತಾಮ್ರ ಫಲಕಗಳಲ್ಲಿರುತ್ತವೆ. ಹಸ್ತಪ್ರತಿಗಳು ತಾಳೆಓಲೆ, ಭೂರ್ಜಪತ್ರ, ಕಡತಗಳಲ್ಲಿ ದೊರೆಯುತ್ತವೆ. ಕನ್ನಡ ಕೈಬರಹದ ಪ್ರತಿಗಳಲ್ಲಿ ನಮಗೆ ಪ್ರಪ್ರಾಚೀನವಾಗಿ ಸಿಕ್ಕಿರುವುದು ಮೂಡಬಿದರೆಯಲ್ಲಿರುವ 'ಧವಳಗ್ರಂಥ'ಗಳು. ಇವುಗಳ ಲೇಖನಕಾಲ ಹನ್ನೆರಡನೆಯ ಶತಮಾನದ ಆದಿಭಾಗ. ಅವಕ್ಕಿಂತ ಹಿಂದಿನ ಯಾವ ಕನ್ನಡದ ಕೈಬರಹದ ಕೃತಿಗಳೂ ಉಪಲಬ್ಧವಲ್ಲದಿರುವುದರಿಂದ ಆ ಕಾಲದ ಲಿಪಿಯ ವ್ಯಾಸಂಗಕ್ಕೆ ಶಾಸನಗಳೇ ಆಧಾರ. ಮುಂದೆಯೂ ಎಲ್ಲ ಶತಮಾನಗಳಿಗೂ ಅನ್ವಯಿಸುವ ಕಾಲನಿರ್ದಿಷ್ಟವಾದ ಕೈಬರಹಗಳ ಕೃತಿಗಳು ಉಪಲಬ್ಧವಲ್ಲದುದರಿಂದ ಆ ಕಾಲದ ಲಿಪಿಯ ವ್ಯಾಸಂಗಕ್ಕೂ ಶಾಸನಗಳನ್ನೇ ವಿಶೇಷವಾಗಿ ವ್ಯಾಸಂಗ ಮಾಡಬೇಕಾಗುತ್ತದೆ.

ಭಾಷೆಯಂತೆಯೇ ಈ ಕಾಲದ ಲಿಪಿಯನ್ನು ಪೂರ್ವದ ಹಳಗನ್ನಡ, ಹಳಗನ್ನಡ ಮತ್ತು ಹೊಸಗನ್ನಡ ಎಂದು ಮೂರು ವಿಭಾಗ ಮಾಡಬಹುದು. ಮೊದಲನೆಯ

ಎರಡು ಕಾಲಗಳಲ್ಲಿ ಕನ್ನಡ ಮತ್ತು ತೆಲುಗು ಲಿಪಿಗಳು ಏಕರೀತಿಯಲ್ಲಿರುತ್ತವೆ. ಮೂರನೆಯ ಕಾಲವಾದ ವಿಜಯನಗರಕಾಲದಿಂದ ತೆಲುಗು ಸ್ವಲ್ಪಸ್ವಲ್ಪವಾಗಿ ಭಿನ್ನರೂಪವನ್ನು ಪಡೆಯುತ್ತದೆ. ಪೂರ್ವದ ಹಳಗನ್ನಡ ಲಿಪಿಯು ಪಲ್ಲವ, ಕದಂಬ, ಪಶ್ಚಿಮ ಮತ್ತು ಪೂರ್ವಚಾಳುಕ್ಯ, ರಾಷ್ಟ್ರಕೂಟ, ಗಂಗ, ಕಾಕತೀಯ ಮೊದಲಾದವರ ಶಾಸನಗಳಲ್ಲಿ ವಿಶೇಷ ವ್ಯತ್ಯಾಸವಾಗದೆ ಕ್ರಿ.ಶ. ೫ನೆಯ ಶತಮಾನ ದಿಂದ ೯–೧೦ನೆಯ ಶತಮಾನದವರೆಗೆ ಒಂದೇ ವಿಧವಾಗಿ ಕಾಣುತ್ತದೆ. ಹಳಗನ್ನಡ ಲಿಪಿಯು ೧೦ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೆ ಸ್ಪಷ್ಟವಾದ ವ್ಯತ್ಯಾಸವನ್ನು ತಳೆದು ಹೊಯ್ಸಳಬಲ್ಲಾಳರ ಶಾಸನಗಳಲ್ಲಿ ಸುಂದರವಾಗಿ ಕಾಣು ತ್ತವೆ. ಹಿಂದೆ ಚೌಕಾಕಾರವಾಗಿಯೂ ಕೋಣಾಕಾರವಾಗಿಯೂ ಇದ್ದ ಅಕ್ಷರಗಳು ಗುಂಡಾಗಿ ವರ್ತುಲಾಕಾರವಾಗುತ್ತದೆ. ಬಿಡಿಬಿಡಿಯರಾಗಿದ್ದ ರೇಖೆಗಳು ಒಟ್ಟುಗೂಡು ತ್ತವೆ. ಋಜುವಾಗಿದ್ದ ರೇಖೆಗಳು ವಕ್ರವಾಗಿ ಅರ್ಧವರ್ತುಲಾಕಾರವಾಗುತ್ತದೆ. ೧೪ನೆಯ ಶತಮಾನದಿಂದೀಚೆಗೆ ಅಂದರೆ ವಿಜಯನಗರದ ಕಾಲದಿಂದೀಚೆಗೆ ಆಧುನಿಕ ರೂಪವು ತಲೆದೋರಿ ಈಗ ಬಳಕೆಯಲ್ಲಿರುವ ರೂಪವನ್ನು ತಾಳಿವೆ. ಪೂರ್ವದ ಹಳಗನ್ನಡಲಿಪಿಯಲ್ಲಿ ಕೆಲವು ಗಮನಾರ್ಹವಾದ ಅಂಶಗಳನ್ನು ಕಾಣಬಹುದು. ಆ ಅಕ್ಷರಗಳಲ್ಲಿ ನೇರ ಆರಂಭಕಾಲದಲ್ಲಿ ತಲೆಕಟ್ಟು ಇಲ್ಲ. ಅನಂತರದ ಶಾತವಾಹನ, ಕದಂಬ ಮುಂತಾದವರ ಕಾಲದಲ್ಲಿ ಈಚೆಗೆ ಬೆಳೆದು ಬರುತ್ತಾ ಅಕ್ಷರಗಳ ಮೇಲ್ಗಡೆ ಸಣ್ಣ ಅಡ್ಡಗೀಟನ್ನು ಹಾಕುತ್ತಾ ಬರುವುದು ಕಾಣುತ್ತದೆ. ಇದಕ್ಕೆ ಗುಹಾಲಿಪಿಗಳ ಪ್ರಭಾವವೇ ಕಾರಣವಿರಬೇಕು. ಗುಹಾಲಿಪಿಗಳಲ್ಲಿ ಒಂದು ಪೆಟ್ಟಿಗೆಯ ಆಕಾರದ ದೀರ್ಘ ಚತುರಶ್ರವಾದ ಚಿಹ್ನೆಯನ್ನು (▭) ಪ್ರತಿಯಕ್ಷರಕ್ಕೂ ಮೇಲುಭಾಗದಲ್ಲಿ ಸೇರಿಸುತ್ತ ಬಂದರು. ಇದನ್ನು ಇಂಗ್ಲೀಷಿನಲ್ಲಿ 'ಪೇಟಿಕಾ ಶಿರ' (Box Head) ಎಂದು ಕರೆಯುತ್ತಾರೆ. ಇದೇ ಕಾಲಾನುಕಾಲದಲ್ಲಿ ಕನ್ನಡದ ತಲೆಕೊಟ್ಟಾಗಿ ಪರಿಣಮಿಸಿತು. •ಮೂಲಬ್ರಾಹ್ಮೀಲಿಪಿಯಲ್ಲಿ ಈ ತಲೆಕೊಟ್ಟಿರಲಿಲ್ಲ. ತಲೆಕಟ್ಟಿಲ್ಲದೆ ಬರೆಯುತ್ತಿರುವುದನ್ನು ಈಗಲೂ ಗುಜರಾತಿ ಲಿಪಿಯಲ್ಲಿ ಕಾಣಬಹುದು. ಈಚೆಗೆ ಬರಬರುತ್ತಾ ಅಕ್ಷರಗಳ ಮೇಲ್ಗಡೆ ಸಣ್ಣ ಅಡ್ಡಗೀಟನ್ನು ಹಾಕಿರುವುದು ಕಾಣಬರು ತ್ತದೆ. ಈ ಲೇಖನ ಸಂಪ್ರದಾಯದಲ್ಲಿ ಪ್ರಾಯಿಕವಾಗಿ (ಪರಸವರ್ಣ) ಅನುನಾಸಿಕ ಸಹಿತ ವ್ಯಂಜನವಾಗಿ ಬರೆಯುತ್ತಿದ್ದರು. ಅನುಸ್ವಾರವನ್ನು ಅಕ್ಷರದ ಮೇಲೆ ಬರೆಯುತ್ತಿದ್ದರು. ಸಜಾತಿಯ ಸಂಯುಕ್ತಾಕ್ಷರಗಳು ಪ್ರಾಯಶಃ ದ್ವಿತ್ವಾಕ್ಷರ ಗಳಾಗಿ ಒಂದರ ಕೆಳಗೆ ಒಂದು ಬರೆಯಲ್ಪಡುತ್ತಿದ್ದವು ಮತ್ತು ರೇಫಸಂಯುಕ್ತಾಕ್ಷರ ಗಳು ರೇಫಕ್ಕೆ ಒತ್ತಕ್ಷರವನ್ನು ಕೊಟ್ಟು ಬರೆಯದೆ ಅರ್ಕಾವತ್ತನ್ನು ಕೊಟ್ಟು ಬರೆಯುತ್ತಿದ್ದರು. ಆ ಅರ್ಕಾವತ್ತೂ ರಕಾರದ ಅಪಭ್ರಂಶವೆಂದು ಜ್ಞಾಪಕದಲ್ಲಿಡ ಬೇಕು. ವಿಸರ್ಗದ ಮುಂದೆ ಕ.ಖ. ಅಕ್ಷರಗಳು ಬಂದರೆ ಷಕಾರವನ್ನೂ ಪ ಫ ಅಕ್ಷರಗಳು ಬಂದರೆ ಶಕಟರೇಫವನ್ನೂ ವಿಸರ್ಗಕ್ಕೆ ಆದೇಶವಾಗಿ ಬರೆಯುತ್ತಿದ್ದರು.

ಇದನ್ನೇ ವೈಯಾಕರಣರು ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯವೆಂದು ಕರೆಯುವುದು. ಜಿಹ್ವಾಮೂಲೀಯವನ್ನು ವಜ್ರಾಕೃತಿಯಲ್ಲಿಯೂ (X) ಉಪಧ್ಮಾನೀಯವನ್ನು ಗಜಕುಂಭಾಕೃತಿಯಲ್ಲಿಯೂ (೦೦) ಬರೆಯುವುದು ರೂಢಿ. ಪೂರ್ವದ ಹಳಗನ್ನಡದಲ್ಲಿ ಸಾಧಾರಣವಾಗಿ ಬರೆಯುತ್ತಿದ್ದ ಕೆಲವು ಅಕ್ಷರಗಳೇ ಈಗ ಒತ್ತಕ್ಷರದ ರೂಪದಲ್ಲಿ ಉಳಿದಿವೆ. ಸಂಸ್ಕೃತ ವರ್ಣಸಮಾಮ್ನಾಯದಲ್ಲಿ ಇಲ್ಲದ ಱ ೞ ಅಕ್ಷರಗಳು ಕನ್ನಡದಲ್ಲಿವೆ. ಇವನ್ನು ಶಕಟರೇಫ ಮತ್ತು ಱ ೞ ಎಂದು ಕರೆಯುತ್ತಾರೆ.

ಲಿಪಿಗಳ ವಿಕಾಸಕ್ಕೆ ಕೆಲವು ವಿದ್ವಾಂಸರು ಈ ರೀತಿಯ ವಿವರಣೆಯನ್ನು ಕೊಡುತ್ತಾರೆ: ಲಿಪಿಬದಲಾವಣೆಗೆ ಲೇಖನಸಾಮಗ್ರಿಗಳೇ ಕಾರಣವೆನ್ನಬಹುದು. ಉದಾ: ಶಿಲಾಲೇಖಕ್ಕೂ ತಾಮ್ರಫಲಕಗಳಿಗೂ ಲಿಪಿದೃಷ್ಟಿಯಿಂದ ವಿಶೇಷ ವ್ಯತ್ಯಾಸಗಳಿವೆ. ಇವುಗಳ ಮೇಲೆ ಕೆತ್ತಿಸುವುದಕ್ಕೆ ಮೊದಲು ಭೂರ್ಜಪತ್ರ ಅಥವಾ ತಾಳಪತ್ರಗಳ ಮೇಲೆ ಮೊನಚಾದ ಲೇಖನಿಯಿಂದ ಮಸಿಯಲ್ಲಿ ಅದ್ದಿ ಬರೆಯುತ್ತಿದ್ದರು. ಅಕ್ಷರವನ್ನು ಪ್ರಾರಂಭಮಾಡುವ ಜಾಗದಲ್ಲಿ ಒಂದು ರೂಪವಾಗಿ ಮಸಿ ಹೆಚ್ಚು ಕುಳಿತು ಕ್ರಮೇಣ ಅದು ತ್ರಿಕೋಣಾಕಾರವಾಗಿಯೋ ಚೌಕಾಕಾರವಾಗಿಯೋ ಹರಡಿಕೊಳ್ಳುತ್ತಿತ್ತು. ಅದರ ಆಧಾರದಮೇಲೆ ಕೆತ್ತಿಸುವಾಗ ಲಿಪಿಗಳನ್ನು ಹಾಗೆಯೇ ಕೆತ್ತಿಸುತ್ತಿದ್ದರೆಂದು ಭಾವಿಸಬಹುದು.

ಅಕ್ಷರವಿಕಾಸಕ್ಕೆ ಕೊಟ್ಟಿರುವ ಈ ಕಾರಣದ ಉತ್ತರಾರ್ಧ ಸಮಂಜಸವಾಗಿಲ್ಲ. ತಾಳಪತ್ರ ಮತ್ತು ಭೂರ್ಜಪತ್ರಗಳಲ್ಲಿ ಕಂಠವನ್ನು ಯಾವಾಗಲೂ ಮಸಿಯಲ್ಲಿ ಅದ್ದಿ ಬರೆಯುತ್ತಿರಲಿಲ್ಲ. ಮೊದಲು ಅವುಗಳನ್ನು ಕಂಠದಲ್ಲಿ ಕೊರೆದು ಅವುಗಳಿಗೆ ಮಸಿಯ ಪುಡಿಯನ್ನೋ ಎಲೆಯ ರಸದಿಂದ ಕೂಡಿದ ಮಸಿಯ ಕಲ್ಕವನ್ನೋ ಬಟ್ಟೆಯಲ್ಲಿ ಅದ್ದಿ ಸಿಂಪಿಸಿ ಒರಸುತ್ತಿದ್ದರು. ಇಲ್ಲಿ ಮಸಿಯು ಹರಡಿಕೊಳ್ಳುವ ಪ್ರಸಂಗವೇ ಇರಲಿಲ್ಲ. ಆದುದರಿಂದ ಅಕ್ಷರವಿಕಾಸಕ್ಕೆ ಮೇಲೆ ತಿಳಿಸಿರುವ ಸೌಂದರ್ಯ ಸೌಲಭ್ಯ ಮತ್ತು ಶೈಘ್ರ್ಯದೃಷ್ಟಿಗಳೇ ಕಾರಣ.

ಅಶೋಕನ ದಕ್ಷಿಣಬ್ರಾಹ್ಮೀಲಿಪಿಯಿಂದ ಕನ್ನಡಲಿಪಿ ಹುಟ್ಟಿದ್ದರೂ ಅವೆರಡಕ್ಕೂ ಅಷ್ಟು ಹೋಲಿಕೆಗಳು ಕಂಡುಬರುವುದಿಲ್ಲ. ಆದರೆ ಅದು ಹಾದು ಬಂದ ಅನೇಕ ಹಂತಗಳನ್ನು ಗಮನಿಸಿದಾಗ ಲಿಪಿವಿಕಾಸ ಗಮನಕ್ಕೆ ಬರುತ್ತದೆ. ಆ ಹಂತಗಳನ್ನು ಹೀಗೆ ಗುರುತಿಸಬಹುದು. ಮೊದಲನೆಯದು ಅಶೋಕನ ದಕ್ಷಿಣ ಬ್ರಾಹ್ಮಿ. ಮುಂದೆ ಗಪಿಯ ಬ್ರಾಹ್ಮೀ. ಇದನ್ನು ಪಶ್ಚಿಮಕ್ಷತ್ರಪ ದೊರೆಯಾದ ರುದ್ರದಾಮನ ಶಾಸನದಲ್ಲಿಯೂ ಆಂಧ್ರದೊರೆ ಪುಳುಮಾಯಿಯ ಶಾಸನದಲ್ಲಿಯೂ ನೋಡಬಹುದು. ಮುಂದಿನ ಘಟ್ಟವನ್ನು ಬನವಾಸಿಯ ಕದಂಬರ ಶಾಸನಗಳಲ್ಲಿಯೂ ಬಾದಾಮಿಚಾಳುಕ್ಯರ ಒಂದನೆಯ ಕೀರ್ತಿವರ್ಮ, ಮಂಗಳೇಶ,

ಪುಲಿಕೇಶಿಯರ ಶಾಸನಗಳಲ್ಲಿಯೂ ಪೂರ್ವಚಾಳುಕ್ಯದೊರೆಗಳಾದ ವಿಷ್ಣುವರ್ಧನ ಮತ್ತು ಜಯಸಿಂಹರ ಶಾಸನಗಳಲ್ಲಿಯೂ ಕಾಣಬಹುದು. ಮುಂದಿನ ಘಟ್ಟವನ್ನು ಕ್ರಿ.ಶ. ೭ನೆಯ ಶತಮಾನದಿಂದ ೯ನೆಯ ಶತಮಾನದವರೆಗೆ ಬಾದಾಮಿಚಾಳುಕ್ಯರ, ರಾಷ್ಟ್ರಕೂಟರ, ವೆಂಗಿಚಾಳುಕ್ಯರ ಶಾಸನಗಳಲ್ಲಿ ಗುರುತಿಸಬಹುದು. ಕೊನೆಯ ಘಟ್ಟವು ೧೧-೧೨ ಶತಮಾನಗಳ ಹೊಯ್ಸಳರ ಶಾಸನಗಳಲ್ಲಿಯೂ ಆಧುನಿಕ ಪ್ರವೃತ್ತಿಗಳು ವಿಜಯನಗರದ ಶಾಸನಗಳಲ್ಲಿಯೂ ಬೆಳೆದುಬಂದಿದೆ. ಭ್ಯೂಲರ್ ಈ ಬೆಳವಣಿಗೆಯನ್ನು 'ದಿ ಆರ್ಕಯಿಕ್ ವೆರೈಟಿ' (The Archaic Variety), 'ದಿ ಮಿಡಲ್ ವೆರೈಟಿ' (The Middle Variety) ಮತ್ತು 'ದಿ ಓಲ್ಡ್ ಕೇನರಿಸ್ ಆಲ್ಫಬೆಟ್' (The Old Canarese Alphabet) ಎಂದು ಕರೆದಿದ್ದಾರೆ.

ಆಕೃತಿಯ ದೃಷ್ಟಿಯಿಂದ ಹೇಳುವುದಾದರೆ ಬ್ರಾಹ್ಮೀಲಿಪಿಗಳೆಲ್ಲ ಸಾಮಾನ್ಯ ವಾಗಿ ಲಂಬ ಮತ್ತು ಅಡ್ಡ ಸರಳರೇಖೆಗಳ ರೂಪಗಳಲ್ಲಿರುತ್ತವೆ. ಅಶೋಕನ ಕಾಲ ದಲ್ಲಿ ವಕ್ರವಾಗಿ ಜಗ್ಗಿರುವಂತೆ ಕಾಣುವ ಕೆಲವು ಅಕ್ಷರಗಳು ಅದರ ಪ್ರಾಚೀನಕಾಲ ದಲ್ಲಿ ಸರಳರೇಖೆಯಾಗಿದ್ದಿರಬೇಕು. ಕುಶಾನ, ಶಾತವಾಹನರ ಕಾಲದಲ್ಲಿ ಅಕ್ಷರ ಗಳು ಎತ್ತರದಲ್ಲಿ ಕಡಿಮೆಯಾಗಿ ವಕ್ರವಾಗುವ ಪ್ರವೃತ್ತಿಯನ್ನು ಹೊಂದಿವೆ. ಮಳವಳ್ಳಿ, ಬನವಾಸಿ ಅಕ್ಷರಗಳಲ್ಲಿ ತ್ರಿಕೋಣಾಕೃತಿಯ ತಲೆಕಟ್ಟು ಕಾಣುತ್ತವೆ. ಅ.ಕ.ರ. ವರ್ಣಗಳು ಅಡಿಯಭಾಗದ ಲಂಬಾಕಾರವು ಎಡಭಾಗಕ್ಕೆ ವೃತ್ತಾಕಾರವಾಗಿ ಹೊರಳಿದೆ. ಈಚೆಗೆ ಗುಲ್ಬರ್ಗ ಜಿಲ್ಲೆಯ ಸನ್ನತಿ ಎಂಬ ಸ್ಥಳದಲ್ಲಿ ದೊರಕಿದ ಕ್ರಿ.ಶ. ಮೂರನೆಯ ಶತಮಾನದ ಅಕ್ಷರಗಳು ಆಂಧ್ರಪ್ರದೇಶದ ನಾಗಾರ್ಜುನ ಕೊಂಡದ ಇಕ್ಷ್ವಾಕು ಅರಸರ ಲಿಪಿಗಳಂತೆ ಗುಂಡಾಗಿಯೂ ಸುಂದರವಾಗಿಯೂ ಇವೆ.

ಕ್ರಿ.ಶ. ನಾಲ್ಕನೆಯ ಶತಮಾನದ ಕದಂಬ ಅರಸರ ಶಾಸನಾಕ್ಷರಗಳು ಮುಂದಿನ ಬೆಳವಣಿಗೆಯ ತಳಹದಿ. ಈ ಕಾಲದ ವೈಶಿಷ್ಟ್ಯ ಚೌಕಾಕಾರದ ತಲೆಕಟ್ಟು. ಇಂತಹವು ಉತ್ತರದೇಶದ ಪಲ್ಲವ, ವಾಕಾಟಕ ಅಕ್ಷರಗಳಲ್ಲಿ ಕಂಡು ಬರುತ್ತವೆ. ಹಿಂದೆಯೇ ತಿಳಿಸಿರುವಂತೆ ಇವುಗಳಿಗೆ 'ಪೇಟಿಕಾ ಶಿರ' ಎಂಬ ವ್ಯವಹಾರವುಂಟು. ಕದಂಬರ ಅಕ್ಷರವೂ ಎತ್ತರ ಕಡಿಮೆ. ಮತ್ತು ಹೆಚ್ಚಿನ ದುಂಡಾಗುವಿಕೆಯ ಪ್ರವೃತ್ತಿಯನ್ನು ಹೊಂದಿದೆ. ಇವುಗಳಲ್ಲಿ ವಿಸರ್ಗ. ಜಿಹ್ವಾ ಮೂಲೀಯ, ಉಪಧ್ಮಾನೀಯ ೫ ೬ ಗಳು ಉಪಯುಕ್ತವಾಗಿವೆ. ೬-೭ನೆಯ ಶತಮಾನದ ಬಾದಾಮಿಚಾಳುಕ್ಯರ ಲಿಪಿಯಲ್ಲಿ ಮುಂದಿನ ಬೆಳವಣಿಗೆಯನ್ನು ಕಾಣ ಬಹುದು. ತಲೆಕಟ್ಟು ಸಣ್ಣ ಸರಳರೇಖೆಗಳಾಗಿರುತ್ತವೆ. ಕೆಲವು ಶಾಸನಗಳಲ್ಲಿ ಕ. ರ. ಅಕ್ಷರಗಳ ಅಡಿಯ ಲಂಬರೇಖೆಯು ದುಂಡಾಗಿ ಮೇಲಕ್ಕೆ ತಿರುಗಿ ಮೇಲ್ಭಾಗದ ಅಡ್ಡಗೆರೆಗೆ ಸೇರಿಕೊಂಡಿರುತ್ತದೆ. ಪಟ್ಟದಿಯ ಅ. ಇ. ಅಕ್ಷರಗಳು ಹೆಚ್ಚಿನ ಬೆಳವಣಿಗೆಯನ್ನು ಸೂಚಿಸುತ್ತವೆ.

೧೦-೧೨ನೆಯ ಶತಮಾನದ ಕಲ್ಯಾಣಿಚಾಲುಕ್ಯರ ಲಿಪಿಯು ನಿರ್ದಿಷ್ಟವಾದ ಬದಲಾವಣೆಯನ್ನು ಹೊಂದಿ ಮುಂದಿನ ಮುಖ್ಯಹಂತವನ್ನು ಸೂಚಿಸುತ್ತದೆ. ಈಗಿನ ಕಾಲದ ಅಕ್ಷರಗಳು ಮತ್ತಷ್ಟೂ ಗುಂಡಾಗಿ ಆಧುನಿಕ ಅಕ್ಷರಗಳ ಮಾದರಿಗೆ ತಿರುಗಿವೆ. ಕ. ರ. ಯ. ಗಳ ತಲೆಕಟ್ಟು ಈಗಿನಂತೆಯೇ ಇದೆ. ಕೆಲವು ಅಕ್ಷರಗಳ ತಲೆಕಟ್ಟು ಕೋಣಾಕಾರವಾಗಿಯೂ ಇರುತ್ತವೆ. ಜ. ಮ. ವ. ಮುಂತಾದ ಅಕ್ಷರಗಳ ತಲೆಕಟ್ಟು ಎರಡು ಭಾಗವಾಗಿ ಬೇರ್ಪಾಡಾಗಿ ಬಲಭಾಗದ ರೇಖೆಗೆ ಹೊಂದಿಕೊಂಡಿರುತ್ತದೆ. ಅನೇಕ ಅಕ್ಷರಗಳ ತಲೆಕಟ್ಟು ಸ್ಪಷ್ಟವಾಗಿ ಎದ್ದುಕಾಣುತ್ತದೆ. ಮುಂದೆ ೧೨-೧೩ನೆಯ ಶತಮಾನಗಳ ಹೊಯ್ಸಳರ ಶಾಸನವು ನುಣುಪಾದ ಕಲ್ಲಿನ ಮೇಲೆ ಅಲಂಕಾರಯುಕ್ತವಾಗಿಯೂ ಕಲಾತ್ಮಕವಾಗಿಯೂ ರಚಿತವಾಗಿರುತ್ತವೆ. ಬಹು ಸುಂದರವಾಗಿವೆ. ಸುಸ್ಪಷ್ಟವೂ ವರ್ತುಲಾಕಾರವುಳ್ಳವೂ ಆಗಿವೆ. ಮುಂದಿನ ೨-೩ ಶತಮಾನಗಳ ವಿಜಯನಗರದ ಅಕ್ಷರಗಳು ಅಷ್ಟು ಆಕರ್ಷಣೀಯವಾಗಿಲ್ಲ. ಡೊಂಕುಡೊಂಕಾಗಿವೆ. ಅವುಗಳ ಜೋಡಣೆಯ ವಿಷಯದಲ್ಲಿಯೂ ಎಚ್ಚರಿಕೆಯಿಲ್ಲ. ಹೊಯ್ಸಳ ಮತ್ತು ಚಾಳುಕ್ಯರ ಅಕ್ಷರಗಳಂತೆ ಅಂದವಾಗಿಯೂ ಇಲ್ಲ. ಆದರೂ ಬೆಳವಣಿಗೆಯ ದೃಷ್ಟಿಯಿಂದ ಗಮನಾರ್ಹವಾಗಿದೆ. ಮೈಲಿಗಲ್ಲುಗಳಾದ ಕೆಲವು ಇಲ್ಲಿಯ ಅಕ್ಷರಗಳು ಕಾಲನಿರ್ದೇಶಕ್ಕೆ ಬಹಳ ಸಹಾಯವಾಗಿವೆ. ಈ ಕಾಲದ ಹಿಂದಿನ ಡಕಾರ ಮತ್ತು ದಕಾರಗಳ ಅಲ್ಪಪ್ರಾಣ ಮಹಾಪ್ರಾಣಗಳ ವಿವೇಚನೆ ಕಠಿಣವಾಗಿರುತ್ತದೆ. ದ.ಡ. ಅಕ್ಷರಗಳ ಬಲಬಾಹುವನ್ನು ತಲೆಕಟ್ಟಿಗೆ ಸೇರಿಸದೆ ಬಿಡಿಸಿದ್ದರೆ ಅಲ್ಪಪ್ರಾಣವೆಂದೂ (ನೋಡಿ : ಚಿತ್ರ ೧) ತಲೆಕಟ್ಟಿಗೆ ಸೇರಿಸಿದ್ದರೆ (ಡ.ದ.) ಮಹಾಪ್ರಾಣವೆಂದೂ ಸಂಕೇತವಿತ್ತು ; ವಿಜಯನಗರ ಕಾಲದಿಂದೀಚೆಗೆ ಇವುಗಳನ್ನು ಸ್ಪಷ್ಟಪಡಿಸುವುದಕ್ಕೆ ಅಲ್ಪಪ್ರಾಣ ಮಹಾಪ್ರಾಣಗಳನ್ನು ಒಂದೇ ರೀತಿಯಲ್ಲಿ ಬರೆದು ಅವುಗಳ ವಿವೇಚನೆಗಾಗಿ ಒಂದು ಹೊಕ್ಕಳು ಸೀಳುವ ರೇಖೆಯನ್ನು ಉಪಯೋಗಿಸಲಾಯಿತು. (ಡ, ಢ, ದ, ಧ) ಇಂದಿಗೂ ಇದು ಹೀಗೆಯೇ ಬಳಸಲಾಗಿದೆ.

ಈ ರೀತಿಯ ಬರಹವನ್ನು ನೋಡಿದ ತಕ್ಷಣವೇ ಅದು ವಿಜಯನಗರೋತ್ತರ ಕಾಲದ್ದೆಂದು ಸ್ಪಷ್ಟವಾಗಿ ನಿರ್ದೇಶಿಸಬಹುದು. ಸ್ವಲ್ಪ ಕಾಲವಾದಮೇಲೆ ಪ ವರ್ಣಕ್ಕೂ ಇದೇ ಸಂಪ್ರದಾಯವನ್ನು ಅಂಗೀಕರಿಸಿದೆ. ಅಲ್ಲದೆ ಈ ಕಾಲದಲ್ಲಿ ಅ, ಇ, ಕ್ಷ, ಳ, ಣ, ವರ್ಣಗಳು ಈಗಿನ ಆಕಾರವನ್ನು ತಾಳಿವೆ. ಆದಿಕಾಲದಲ್ಲಿ ಅನುಸ್ವಾರವು ತಲೆಯ ಮೇಲಿನ ಒಂದು ಚುಕ್ಕೆಯಿಂದ (ಬಿಂದು) ಸೂಚಿತವಾಗಿತ್ತು. ಹೊಯ್ಸಳರ ಕಾಲದಲ್ಲಿ ಅದು ಒಂದು ಸಣ್ಣ ವರ್ತುಲವಾಗಿತ್ತು. ವಿಜಯನಗರದ ಕಾಲಕ್ಕೆ ಆ ವರ್ತುಲವು (ಸೊನ್ನೆಯು) ತಲೆಯ ಮೇಲಿಂದಿಳಿದು ಪಕ್ಕವನ್ನು ಆಕ್ರಮಿಸಿತು. ಈ ವಿಜಯನಗರ ಲಿಪಿಯೇ ಮುಂದಿನ ಒಂದೆರಡು ಶತಮಾನಗಳಲ್ಲಿ

ಬೆಳೆದು ಮೈಸೂರರಸರ ಕಾಲದಲ್ಲಿ ಇಂದಿನ ಸಂಪೂರ್ಣಾಕಾರವನ್ನು ಪಡೆದು ಮುದ್ರಣದ ಮೊಳೆಗಳಲ್ಲಿ ಪ್ರವೇಶಿಸಿ ತಟಸ್ಥಭಾವವನ್ನು ತಾಳಿತು.

ಕನ್ನಡಲಿಪಿಯ ವಿಕಾಸದಲ್ಲಿ ಅಕ್ಷರಗಳಂತೆಯೇ ಅದರ ಕಾಗುಣಿತ ಅಥವಾ ಸ್ವರಸಂಯೋಜನಕ್ರಮವೂ ವಿಕಾಸವಾಗಿದೆ. ಬ್ರಾಹ್ಮೀಲಿಪಿಯಲ್ಲಿ ಸ್ವರಗಳೆಲ್ಲವೂ ಋಜುರೇಖೆಗಳನ್ನು ಅಕ್ಷರಗಳ ವಿವಿಧ ಸ್ಥಳದಲ್ಲಿ ಕೂಡಿಸುವ ಮೂಲಕ ಸಂಯೋಜವಾಗುತ್ತಿತ್ತು. ಅದರ ಸಂಪೂರ್ಣ ಯೋಜನೆಯನ್ನು ಮುಂದಿನ ವಿನ್ಯಾಸದಿಂದ ಸ್ಪಷ್ಟಪಡಿಸಬಹುದು. (ಚಿತ್ರ ೨) ಇಲ್ಲಿ ಸೂಚಿಸಿರುವ ಮಧ್ಯ ವ್ಯಂಜನಾಕ್ಷರ (ಚಿತ್ರ ೩) ಕ. ಇದಕ್ಕೆ ಬಲಗಡೆ ತಲೆಯ ಮೇಲೆ ಸೇರಿಸಿದ ಅಡ್ಡರೇಖೆ (ಚಿತ್ರ ೪) ಆಕಾರದ ದೀರ್ಘಸ್ವರ ಸಂಯೋಗವನ್ನು ಸೂಚಿಸುತ್ತದೆ. ತಲೆಯ ಮೇಲಿನ ಬಲಗಡೆಯ ಲಂಬರೇಖೆ ಇ ಕಾರ ಸಂಯೋಗವನ್ನು, ಎಡಗಡೆಯ ಲಂಬರೇಖೆ (ಚಿತ್ರ ೫) ಎ ಕಾರ ಸಂಯೋಗವನ್ನು, ಕೆಳಗಿನ ಬಲಗಡೆ ಅಡ್ಡರೇಖೆ ಕೊಂಬನ್ನು– (ಚಿತ್ರ ೬) (ಉಕಾರ) ಕೆಳಗಿನ ಲಂಬರೇಖೆ (ಚಿತ್ರ ೭) ಋಕಾರ ಸಂಯೋಗವನ್ನು ಸೂಚಿಸುತ್ತವೆ. ಮೇಲೆ ಸೂಚಿಸಿದ ವಿಕಾಸ ತತ್ವಗಳಿಂದ ಈ ಋಜು ಸರಳರೇಖೆಗಳೆಲ್ಲ ವಕ್ರರೇಖೆಗಳಾಗುತ್ತವೆ (ಚಿತ್ರ ೮). ಒ ಕಾರವು ಎಡ ಮತ್ತು ಬಲ ಅಡ್ಡರೇಖೆಗಳಿಂದ ಸೂಚಿತವಾಗುತ್ತವೆ (ಚಿತ್ರ ೯). ಐ ಕಾರವು ಎರಡು ಏಕಾರ ಸಂಯೋಗ ಚಿಹ್ನೆಗಳಿಂದ ಸೂಚಿತವಾಗುತ್ತವೆ (ಚಿತ್ರ ೧೦). ಕಾಲಾನುಕಾಲದಲ್ಲಿ ಸ್ವಲ್ಪ ವಕ್ರವಾಗಿದ್ದುದು ಅರ್ಧವರ್ತುಲಾಕಾರವಾಗುತ್ತದೆ. ಉದಾ. (ಚಿತ್ರ ೧೧). ಆದಿಕಾಲದಲ್ಲಿ ಎ.ಒ.ಕಾರಗಳ ದೀರ್ಘಸ್ವರಸೂಚನೆಯಿರಲಿಲ್ಲ. ಉಳಿದುವುಗಳಿಗೆ ಅಕಾರ ದೀರ್ಘಸ್ವರ ಚಿಹ್ನೆಯನ್ನು ಸೇರಿಸುವುದರಿಂದ ದೀರ್ಘ ಸ್ವರ ನಿರ್ದೇಶವಾಗುತ್ತಿತ್ತು (ಚಿತ್ರ ೧೨). ಇಕಾರ ಸೂಚಕವಾದ ಗುಡಿಸು ದೀರ್ಘವಾಗಬೇಕಾದರೆ ಅರ್ಧವರ್ತುಲಾಕಾರವಾದ ತಲೆಯ ಮೇಲಿನ ಚಿಹ್ನೆಯ ಒಳಗಡೆ ಮತ್ತೊಂದು ಸುರುಳಿ ಬರುತ್ತಿತ್ತು (ಚಿತ್ರ ೧೩). ಎಕಾರಕ್ಕೂ ಹಾಗೆಯೇ (ಚಿತ್ರ ೧೪). ಈ ದೀರ್ಘಸ್ವರ ಚಿಹ್ನೆಗಳೆಲ್ಲ ಕಾಲಕ್ರಮದಲ್ಲಿ ಅಕ್ಷರಗಳ ಪಕ್ಕಕ್ಕೆ ಬಂದು ದೀರ್ಘಾಕ್ಷರಸೂಚಕಗಳಾದುವು. ಉದಾ : ಕೀ, ಕೇ, ಕೋ.

ಕೆಲವು ಶಾಸನಗಳಲ್ಲಿ ಉಕಾರ ಸೂಚಕವಾದ ಅಡ್ಡರೇಖೆಯು ಕೊಂಬು ಅಕ್ಷರದ ಕೆಳಗಿನ ಋಕಾರ ಸಂಯೋಗ ಸೂಚಕವಾದ ಲಂಬರೇಖೆಯ ಸ್ಥಾನವನ್ನೂ ಪಡೆದಿರುವುದುಂಟು. ಉದಾ. (ಚಿತ್ರ ೧೫). ಸಾಮಾನ್ಯನಿಯಮ ಪ್ರಕಾರ ಈ ಕಾಗುಣಿತ ಚಿಹ್ನೆಗಳೆಲ್ಲ ಕಾಲಾನುಕಾಲದಲ್ಲಿ ವರ್ತುಲ, ಅರ್ಧ ವರ್ತುಲಾಕಾರವನ್ನು ತಾಳಿ ಈಗಿನ ರೂಪವನ್ನು ತಾಳಿವೆ.

ಕನ್ನಡದಲ್ಲಿ ಸಂಯುಕ್ತಾಕ್ಷರಗಳು ಒಂದು ವ್ಯಂಜನಾಕ್ಷರದ ಕೆಳಗೆ ಮತ್ತೊಂದು ತಲೆಕಟ್ಟುರಹಿತವಾದ ವ್ಯಂಜನಾಕ್ಷರವನ್ನು ಬರೆಯುವುದರಿಂದ ಸಿದ್ಧಿಸುತ್ತದೆ.

ಕ್ಕ, ಗ್ಗ, ಜ್ಜ, ಇತ್ಯಾದಿ. ಆದರೆ ತ್ತ, ಮ್ಮ, ಯ್ಯ, ಲ್ಲ, ರ್ರ, ಮುಂತಾದುವು ಸಾಮಾನ್ಯ ನಿಯಮಕ್ಕೆ ಅಪವಾದದಂತೆ ಕಾಣುತ್ತವೆ. ಅದು ಹಾಗಲ್ಲ. ಅವೆಲ್ಲವೂ ಆದಿಕಾಲದ ಆಯಾ ಅಕ್ಷರಗಳೇ (ಉದಾ. ಚಿತ್ರ ೧೬ ಇತ್ಯಾದಿ). ಅವು ಆ ಹಂತದಲ್ಲಿಯೇ ಉಳಿದುಕೊಂಡು ಬಂದಿವೆ.

ಅರ್ಕಾವತ್ತು (ೱ) ಒಂದು ಪ್ರತ್ಯೇಕವಾದ ಚರಿತ್ರೆಯನ್ನು ಹೊಂದಿದೆ. ಈ ಚಿಹ್ನೆಯು ರಕಾರದಿಂದ ಸಂಯುಕ್ತವಾಗಿರುವುದನ್ನು ಸೂಚಿಸುತ್ತದೆ. ಬ್ರಾಹ್ಮೀ ಲಿಪಿಯಲ್ಲಿ ರಕಾರವು ಒಂದು ಸರಳ ಲಂಬರೇಖೆಯಿಂದ (।) ಸೂಚಿತವಾಗುತ್ತಿತ್ತು. ಈ ರಕಾರ ಚಿಹ್ನೆಯನ್ನು ಸಂಯುಕ್ತಾಕ್ಷರ ನಿಯಮದಂತೆ ಮೇಲೆ ಬರೆದು ಅದರ ಕೆಳಗಡೆ ಮತ್ತೊಂದು ವ್ಯಂಜನವನ್ನು ಬರೆಯುತ್ತಿದ್ದರು (ಚಿತ್ರ ೧೭). ಇವು ರ್ಕ, ರ್ನ, ರ್ತ. ಬರವಣಿಗೆಯಲ್ಲಿ ಇದರ ಸಂಯೋಗವನ್ನು ನಿರ್ದೇಶಿಸುವುದು ಕಷ್ಟವಾಗಿ ಕಂಡುಬಂದಿರಬೇಕು. ಅದನ್ನು ಸ್ಪಷ್ಟಪಡಿಸುವುದಕ್ಕಾಗಿ ಮೇಲಿನ ರಕಾರ ಚಿಹ್ನೆಯನ್ನು ಓರೆಯಾಗಿ ಸ್ವಲ್ಪ ಕೋಣಾಕಾರವಾಗಿ ಬರೆಯತೊಡಗಿದರು (ಚಿತ್ರ ೧೮). ಇವು ಕಾಲಾನುಕ್ರಮದಲ್ಲಿ ವಕ್ರವಾಗಿ ಸಂಯೋಗದ ಸ್ಪಷ್ಟತೆ ಕಡಿಮೆಯಾಯಿತು (ಚಿತ್ರ ೧೯). ಇದನ್ನು ಮತ್ತಷ್ಟು ಸ್ಪಷ್ಟಪಡಿಸುವುದಕ್ಕೆ ಮಧ್ಯೆ ಒಂದು ಸುರಳಿಯು ಉಪಯೋಗಿಸಲ್ಪಟ್ಟಿತು (ಚಿತ್ರ ೨೦). ಕಾಲಾನುಕಾಲದಲ್ಲಿ ಅನುಸ್ವಾರ ಮತ್ತು ದೀರ್ಘಚಿಹ್ನೆಗಳು ಪಕ್ಕಕ್ಕೆ ಬಂದಾಗ ಈಗಿನ 'ೱ' ಆಕಾರವನ್ನು ತಾಳಿತು. ಆದುದರಿಂದ ಈ ಅರ್ಕಾವತ್ತಿನ ಸಂಬಂಧವಾದ ಅಕ್ಷರವನ್ನು ಓದುವಾಗ ಅಲ್ಲಿ ಪ್ರಧಾನವಾದ ವ್ಯಂಜನ ರೇಫವೆಂದೂ ಹಿಂದೆ ಇರುವ ಅಕ್ಷರವು ರೇಫಕ್ಕೆ ಸಂಯೋಗವಾಗಿರುವ ವ್ಯಂಜನವೆಂದೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಅಂದರೆ 'ರ್ಕ' ಎಂದು ಬರೆಯುವಾಗ 'ರ'ಕಾರಕ್ಕೆ 'ಕ'ಕಾರ ಸಂಯೋಜಿತವಾಗಿದೆಯೆಂದೂ ತಿಳಿಯಬೇಕು.

ಕನ್ನಡ ಸಂಖ್ಯಾಚಿಹ್ನೆಗಳೂ ಸರಳರೇಖೆಗಳಿಂದಲೇ ಜನ್ಯವಾಗಿರಬೇಕೆಂದು ಭಾಸವಾಗುತ್ತದೆ. ಮೊದಲ ೪ ಸಂಖ್ಯೆಗಳನ್ನು ಆ ರೀತಿ ಸಿದ್ಧಿಸಬಹುದು (ಚಿತ್ರ ೨೧). ಇವೇ ೧, ೨, ೩, ೪ ಗಳಾಗಿ ಪರಿಣಮಿಸಿರುವುವು. ಆದರೆ ೫ ರಿಂದ ೯ರ ವಿವರಣೆ ಸ್ಪಷ್ಟವಾಗಿಲ್ಲ.

ಪೂರ್ವದಲ್ಲಿ ಸಂಖ್ಯೆಗಳನ್ನು ನಿರ್ದೇಶಮಾಡುವುದಕ್ಕೆ ಅಕ್ಷರಗಳನ್ನು ಲೋಕಪ್ರಸಿದ್ಧವಾದ ಸಂಖ್ಯೆಯ ಪದಾರ್ಥಗಳನ್ನು ಉಪಯೋಗಿಸುತ್ತಿದ್ದರು. ಸೊನ್ನೆಯನ್ನು ಶೂನ್ಯ, ಗಗನ ಇತ್ಯಾದಿಗಳಿಂದಲೂ, ೧ನ್ನು ಭೂಮಿ, ಚಂದ್ರ, ಬ್ರಹ್ಮ, ಮೊದಲಾದುವುಗಳಿಂದಲೂ, ೨ನ್ನು ಯಮ, ಅಶ್ವಿನೀದೇವತೆ, ನೇತ್ರ, ಪಕ್ಷ, ಬಾಹುಗಳಿಂದಲೂ, ೩ನ್ನು ಜಗತ್, ಕಾಲ, ಲೋಕ, ಅಗ್ನಿಗಳಿಂದಲೂ, ೪ನ್ನು ವೇದ, ಸಮುದ್ರ, ದಿಕ್ಕು, ಯುಗಗಳಿಂದಲೂ, ೫ನ್ನು ಇಂದ್ರಿಯ, ಬಾಣ, ಭೂತ,

ಪಾಂಡವ, ಪ್ರಾಣ ಇತ್ಯಾದಿಗಳಿಂದಲೂ, ೬ರನ್ನು ಅಂಗ, ರಸ, ಋತು, ದರ್ಶನ ಇತ್ಯಾದಿಗಳಿಂದಲೂ, ೭ನ್ನು ಅಗ, ನಗ, ಮುನಿ, ಸ್ವರ, ಅಶ್ವ. ಧಾತು ಇತ್ಯಾದಿಗಳಿಂದಲೂ, ೮ನ್ನು ವಸು, ಅಗ್ನಿ, ಗಜ, ಭೂತಿ, ಇತ್ಯಾದಿಗಳಿಂದಲೂ, ೯ನ್ನು ನವಗ್ರಹ, ನಿಧಿ, ರಂಧ್ರ ಇತ್ಯಾದಿಗಳಿಂದಲೂ, ೧೦ನ್ನು ಅವತಾರ ಇತ್ಯಾದಿಗಳಿಂದಲೂ ನಿರ್ದೇಶಿಸಿರುವುದು ಸರ್ವವಿದಿತವಾಗಿದೆ.

ಹಾಗೆಯೇ '೯' ಸಂಖ್ಯೆಯನ್ನು ಕಕಾರದಿಂದ ಒಂಬತ್ತು ಅಕ್ಷರಗಳಿಂದಲೂ ಟಕಾರದಿಂದ ಒಂಬತ್ತು ಅಕ್ಷರಗಳಿಂದಲೂ, ಪಕಾರದಿಂದ ೫ ಅಕ್ಷರಗಳಿಂದಲೂ, ಯಕಾರದ ಎಂಟು ಅಕ್ಷರಗಳಿಂದಲೂ ಸೂಚಿಸುವುದು ಸಂಪ್ರದಾಯಬದ್ಧವಾಗಿದೆ. ಹೀಗೆ ಸೂಚಿಸುವಾಗ ಅಂಕಾನಾಂ ವಾಮತೋಗತಿಃ ಎಂಬ ಸೂತ್ರದ ಪ್ರಕಾರ ಅಪು ಗಳನ್ನು ಬಲದಿಂದ ಎಡಕ್ಕೆ ಓದಬೇಕು.

ಇಲ್ಲಿಯವರೆಗಿನ ವಿಮರ್ಶೆಯಿಂದ ಕನ್ನಡದಲ್ಲಿ ೨೦೦೦ ವರ್ಷಗಳಿಂದ ಲಿಪಿಯು ಉಪಯೋಗದಲ್ಲಿರುವುದು ಸ್ಪಷ್ಟವಾಗಿದೆ. ಅಲ್ಲದೆ ಅದರಲ್ಲಿ ಭಾಷೆಯ ಎಲ್ಲ ಧ್ವನಿಗಳಿಗೂ ಸೂಕ್ತಸಂಜ್ಞೆಯಿರುವುದರಿಂದ ಅದನ್ನು ಆ ದೃಷ್ಟಿಯಿಂದ ಆದರ್ಶಲಿಪಿಯೆಂದು ಕರೆಯಲೂಬಹುದು. ಸುಮಾರು ೨ ಶತಮಾನಗಳ ಪ್ರಯತ್ನದಿಂದ ವಿದ್ವಾಂಸರು ಅದರ ಬೆಳವಣಿಗೆಯ ಸಾಮಾನ್ಯ ಸ್ವರೂಪವನ್ನು ಸ್ಪಷ್ಟಪಡಿಸಿದ್ದಾರೆ. ಆದರೂ ಮಾಡಬೇಕಾದ ಕೆಲಸವಿನ್ನೂ ವಿಶೇಷವಾಗಿದೆ. ಈಗ ನಡೆದಿರುವ ವಿಮರ್ಶೆಯೆಲ್ಲ ಸಾಮಾನ್ಯವಾಗಿ ಶಾಸನಗಳ ಆಧಾರದ ಮೇಲೆ. ಶಾಸನಗಳನ್ನು ಕಂಡರಿಸುವವರು ಸಾಮಾನ್ಯವಾಗಿ ಅವಿದ್ವಾಂಸರು. ಅವರ ಕಾರ್ಯ ಸಂಪೂರ್ಣಪ್ರಾತಿನಿಧ್ಯವನ್ನು ಪ್ರಕಟಿಸುತ್ತದೆಂದು ಹೇಳಲಾಗುವುದಿಲ್ಲ. ಆ ದೃಷ್ಟಿಯಿಂದ ಲಿಪಿಶಾಸ್ತ್ರಕ್ಕೆ ಪರಮಪ್ರಮಾಣವಾಗಿರುವುದು ಹಸ್ತಲಿಖಿತ ಪ್ರತಿಗಳು. ಅವುಗಳು ಕರ್ಣಾಟಕದಲ್ಲಿ ಸಹಸ್ರಸಂಖ್ಯೆಯಲ್ಲಿದ್ದಿರಬೇಕು. ಶಾಸ್ತ್ರದಾನವೆಂಬುದು ಕರ್ಣಾಟಕದಲ್ಲಿ ಬಹು ಪೂಜ್ಯಸ್ಥಾನವನ್ನು ಪಡೆದಿದೆ. ಅತ್ತಿಮಬ್ಬೆಯೊಬ್ಬಳೇ ಪೊನ್ನನ 'ಶಾಂತಿಪುರಾಣ'ದ ಒಂದುಸಹಸ್ರ ಪ್ರತಿಗಳನ್ನು ಮಾಡಿಸಿ ಶಾಸ್ತ್ರದಾನ ಮಾಡಿರುವುದು ಸರ್ವವಿದಿತವಾಗಿದೆ. ಈ ದೃಷ್ಟಿಯಿಂದ ಕರ್ಣಾಟಕದಲ್ಲಿ ಸಹಸ್ರಾರು ಕೈಬರಹದ ಪ್ರತಿಗಳು ರಚಿತವಾಗಿರಬೇಕು. ವಿದೇಶೀಯರ ಹಾವಳಿಯಿಂದ ಅನೇಕ ಪ್ರಾಚೀನ ಗ್ರಂಥಗಳು ನಾಶವಾಗಿರುವುದು ಸ್ಪಷ್ಟ. ಆದರೂ ಇನ್ನೂ ಅಸಂಖ್ಯಾತ ಗ್ರಂಥಗಳು ಸಾರ್ವಜನಿಕ ಭಂಡಾರಗಳಲ್ಲಿಯೂ ಖಾಸಗಿ ವಿದ್ವಾಂಸರಲ್ಲಿಯೂ ನಿಕ್ಷೇಪವಾಗಿವೆ. ಈಗ ಸಂಗ್ರಹ ಮಾಡಿರುವವರು ಕೈಬರಹದ ಪ್ರತಿಗಳನ್ನು ಲಿಪಿಯ ಲೇಖನಕಾಲ ದೃಷ್ಟಿಯಿಂದ ಅನ್ವೇಷಣಮಾಡಿಲ್ಲ. ಸಂಗ್ರಹವಾದ ಪ್ರಾಚೀನ ಪ್ರತಿಗಳನ್ನು ಲಿಪಿದೃಷ್ಟಿಯಿಂದ ವ್ಯಾಸಂಗ ಮಾಡಿಲ್ಲ. ಉದಾಹರಣೆಗೆ ಮೈಸೂರ ಪ್ರಾಚ್ಯಕೋಶಾಗಾರದಲ್ಲಿ ೧೫ನೆಯ ಶತಮಾನದಲ್ಲಿ ಲಿಖಿತವಾದ ಓಲೆಯ ಗ್ರಂಥವಿದೆ. ಮೂಡಬಿದರೆಯಲ್ಲಿ

ಹನ್ನೆರಡನೆಯ ಶತಮಾನದಲ್ಲಿ ಲಿಖಿತವಾದ 'ಧವಳ' ಗ್ರಂಥಗಳ ಪ್ರತಿಯಿದೆ. ಇವುಗಳನ್ನು ಅಭ್ಯಾಸಮಾಡಿ ಅಲ್ಲಿಯ ಲಿಪಿಯ ಸ್ವರೂಪವನ್ನು ಪಟ್ಟಿಗಳ ರೂಪದಲ್ಲಿ ತಯಾರಿಸಿ ಅವುಗಳನ್ನು ಆ ಕಾಲದ ಶಾಸನಾಕ್ಷರಗಳೊಡನೆ ಹೋಲಿಸಿ ಸೂಕ್ತ ಟಿಪ್ಪಣಿಯನ್ನು ತಯಾರಿಸಬೇಕು. ಬೇರೆ ಸಂಗ್ರಹಗಳಲ್ಲಿರುವ ಹಸ್ತಪ್ರತಿಗಳನ್ನು ಈ ದೃಷ್ಟಿಯಿಂದ ಸಂಗ್ರಹಿಸಿ ವ್ಯಾಸಂಗ ಮಾಡಬೇಕು. ಪ್ರಾಚೀನ ಗ್ರಂಥಗಳ ಸಂಶೋಧನೆಗೆ ಲಿಪಿಶಾಸ್ತ್ರಜ್ಞಾನ ಅತ್ಯಾವಶ್ಯಕವಾಗಿರುವುದರಿಂದ ಈ ಶಿಕ್ಷಣ ಅನೇಕರಿಗೆ ದೊರೆಯುವಂತೆ ಅವಕಾಶವನ್ನು ಕಲ್ಪಿಸಬೇಕು. ಲಿಪಿಜ್ಞಾನ ಹೆಚ್ಚಿದಷ್ಟೂ ಪ್ರಾಚೀನ ಕೈಬರಹದ ವ್ಯಾಸಂಗಕ್ಕೆ ಹೆಚ್ಚು ಸೌಲಭ್ಯವುಂಟಾಗುವುದರಿಂದಲೂ ಆ ಮೂಲಕ ಪ್ರಾಚೀನ ಸಂಸ್ಕೃತಿಯ ಪರಿಚಯಕ್ಕೆ ಹೆಚ್ಚು ಸೌಕರ್ಯವುಂಟಾಗುವುದರಿಂದಲೂ ಈ ವ್ಯಾಸಂಗ ಸರ್ವರಿಗೂ ಅವಶ್ಯಕವಾಗಿದೆ.

## ಲಿಪಿಚಿತ್ರ ಸೂಚಿ

# ಛಂದೋವತಂಸ

—ಸೇಡಿಯಾಪು ಕೃಷ್ಣಭಟ್ಟ

೧

1932ನೆಯ ಇಸವಿ ದಶಂಬರ ತಿಂಗಳಲ್ಲಿ ಮಡಿಕೇರಿಯಲ್ಲಿ ನಡೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕ ಸಂಮೇಳನದಲ್ಲಿ ಓದಿದ ನನ್ನ 'ಕನ್ನಡ ಛಂದಸ್ಸು' ಎಂಬೊಂದು ದೀರ್ಘ ನಿಬಂಧದಲ್ಲಿ–ಇದು 1933ರ ಕರ್ಣಾಟಕ ಸಾಹಿತ್ಯ ಪರಿಷತ್-ಪತ್ರಿಕೆಯ ಎರಡು ಸಂಚಿಕೆಗಳಲ್ಲಿ ಪ್ರಕಾಶಿತವಾಗಿರುತ್ತದೆ–'ಕರ್ಣಾಟಕ ವಿಷಯ ಜಾತಿ'ಗಳಲ್ಲೊಂದಾದ **ಛಂದೋವತಂಸ** ಎಂಬ ಛಂದೋಬಂಧದ ಕುರಿತಾಗಿಯೂ ಕೆಲವು ವಿಚಾರಗಳು ಬಂದಿವೆ; ಮತ್ತು ಅದರ 'ಧಾಟಿ'ಯನ್ನು ನಿರೂಪಿಸುವ ಪ್ರಯತ್ನವನ್ನೂ ಅಲ್ಲಿ ಮಾಡಲಾಗಿದೆ. ಆ ನಿಬಂಧದಲ್ಲಿ ನಾನು ಅವಲಂಬಿಸಿದುದು ಕೀ.ಶೇ. ಮಂ.ಆ. ರಾಮಾನುಜ ಅಯ್ಯಂಗಾರರಿಂದ ಪರಿಷ್ಕೃತವಾಗಿ ಮೈಸೂರಲ್ಲಿ ಪ್ರಕಾಶಿತವಾದ 'ಛಂದೋಂಬುಧಿ'ಯನ್ನೇ ಆಗಿದ್ದರೂ, ಅದರಲ್ಲಿ ಪ್ರೋಕ್ತವಾದ ಛಂದೋವತಂಸದ ಲಕ್ಷಣವನ್ನಾಧರಿಸಿ ಅದರ ಧಾಟಿಯನ್ನು ಕಂಡುಹಿಡಿಯುವ ಪ್ರಯತ್ನದಲ್ಲಿ ಸಾಫಲ್ಯವು ಕಂಡುಬಾರದಿದ್ದುದರಿಂದ – ಕಿಟ್ಟೆಲ್ ಸಾಹೇಬರಿಂದ ಸಂಪಾದಿತವಾಗಿ (ಮೈಸೂರು ಪ್ರತಿ ಬರುವುದಕ್ಕೆ ಎಷ್ಟೋ ಮೊದಲು) ಮಂಗಳೂರಲ್ಲಿ ಮುದ್ರಿತವಾಗಿದ್ದ 'ಛಂದೋಂಬುಧಿ'ಯ ಪಾಠವನ್ನಾಧರಿಸಿ ಪ್ರಯತ್ನಿಸಿದಾಗ ವಿಶಿಷ್ಟವಾದೊಂದು ಧಾಟಿ ಕೂಡಿಬಂದುದರಿಂದ ಅದುವೇ ಛಂದೋವತಂಸದ ಧಾಟಿ ಎಂದೂ ಆ ಪಾಠಾನುಸಾರವಾದ ಲಕ್ಷಣವೇ ಛಂದೋವತಂಸದ ನಿಜವಾದ ಲಕ್ಷಣವೆಂದೂ ಆಗ ನಾನು ಭಾವಿಸುವಂತಾಯಿತು. ಆದರೆ ಮತ್ತೆ ಹಲವು ವರ್ಷಗಳ ಬಳಿಕ (1949ರಲ್ಲಿ) ಬೆಳಕಿಗೆ ಬಂದ ಜಯಕೀರ್ತಿಯ 'ಛಂದೋನುಶಾಸನ'ವನ್ನೋದಿದಾಗ ಅದರಲ್ಲಿ ಪ್ರೋಕ್ತವಾದ ಲಕ್ಷಣವೂ ಮೈಸೂರು ಪ್ರತಿಯಲ್ಲಿಯ ಲಕ್ಷಣವೂ ಸಮಾನವಾಗಿರುವುದು ತಿಳಿದುಬಂದುದರಿಂದ, ಆ ಪಾಠವೇ ಗ್ರಾಹ್ಯವೆಂದೂ, ಮಂಗಳೂರು ಪ್ರತಿಯದು ಗ್ರಾಹ್ಯವಲ್ಲವೆಂದೂ ಮನವರಿಕೆಯಾಯಿತು. ಜಯಕೀರ್ತಿಯ ಗ್ರಂಥದಲ್ಲಿ ಆ ಭಾಗ ಹೀಗಿದೆ :

ಕಂದರ್ಪಗಣತೋ ರತಿಗಣಚತುಷ್ಕಂ ಚೇತ್ ।
ಛಂದಸಿ ಜಯಕೀರ್ತೇರಾದಿವರಾಹಾಖ್ಯಾ ॥
ಛಂದೋವತಂಸ ನಾಮೇತಿ ಚತುಷ್ಪದಿಕಾ ।
ಸಂದೃಷ್ಟ್ವಾಸೌ ಕುಮಾರಸಂಭವಾದೌ ॥ (7–16)

ಛಂದೋಂಬುಧಿಯ ಮೈಸೂರು ಪ್ರತಿಯಲ್ಲಿ ಕಂಡುಬರುವ ಪಾಠ :

ಮಂದರಧರಗಣಮೆಸೆದಿರೆ ಮೊದಲೊಳೆ ।
ಬಂದಿರೆಯುಂ ನಾಲ್ಕೆಡೆ ಬಿಸರುಹಜನ್ಮಂ ।
ಸಂದುದು ಲಕ್ಷಣಮವನಿಯೊಳೀ ತೆರದಿಂ ।
ಛಂದೋವತಂಸಕ್ಕೆಸೆದುದು ಗಜಗಮನೇ ॥ (ಪಂಚಮಾಧಿಕಾರ)

[ವಿ.ಸೂ. : ಸಂಸ್ಕೃತ ಛಂದಃಶಾಸ್ತ್ರಗಳಲ್ಲಿ ತ್ರಿಮೂರ್ತಿಗಣ (=ಅಂಶಗಣ) ಗಳ ಪ್ರಸ್ತಾವವಿಲ್ಲವಾದರೂ–ಸಂಸ್ಕೃತದ ಸಂಗೀತಶಾಸ್ತ್ರಗ್ರಂಥಗಳಲ್ಲಿ ಇವುಗಳ ವಿಚಾರ ವಿದೆ. 'ಛಂದೋಂಬುಧಿ'ಯಲ್ಲಿ ಬ್ರಹ್ಮ, ವಿಷ್ಣು, ರುದ್ರ ಎಂದು ಹೆಸರಿಸಲಾಗಿರುವ ಮೂರು ಗಣಗಳಿಗೆ ಈ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಅನುಕ್ರಮವಾಗಿ ರತಿ, ಕಾಮ, ಬಾಣ ಎಂಬ ಹೆಸರುಗಳು ಪ್ರೋಕ್ತವಾಗಿವೆ. ಜಯಕೀರ್ತಿ ಈ ಸಂಜ್ಞೆಗಳನ್ನು ಬಳಸಿದ್ದು ಮಾತ್ರವಲ್ಲದೆ ರ, ಲ, ಘ ಎಂಬ ಏಕಾಕ್ಷರನಾಮಗಳನ್ನು ಸಹ ನಿರ್ಮಿಸಿ ಕೊಂಡಿದ್ದಾನೆ. ಕಟಪಯಾದಿ ಸಂಖ್ಯಾನದಂತೆ ರ=2, ಲ=3, ಘ=4 ಎಂದಾಗುತ್ತದೆ. ಆಯಾ ಗಣವರ್ಗದ ಪ್ರಥಮ ಗಣದ ಅಕ್ಷರಸಂಖ್ಯೆಯನ್ನು ಈ ರಲಘಗಳು ಸೂಚಿಸುತ್ತವೆ.]

ಜಯಕೀರ್ತಿ ಹೇಳುವ ಛಂದೋವತಂಸದ ಲಕ್ಷಣಕ್ಕೂ ಛಂದೋಂಬುಧಿಯ ಮೈಸೂರು ಪ್ರತಿಯಲ್ಲಿಯ ಲಕ್ಷಣಕ್ಕೂ ಯಾವ ಭೇದವೂ ಇಲ್ಲ. ಆದುದರಿಂದ ಮೈಸೂರು ಪ್ರತಿಯಲ್ಲಿ ಹಾಗೂ ಜಯಕೀರ್ತಿಯ ಗ್ರಂಥದಲ್ಲಿ ಪ್ರೋಕ್ತವಾದ ಲಕ್ಷಣವೇ ಛಂದೋವತಂಸದ ನಿಜವಾದ ಲಕ್ಷಣವೆಂಬುದರಲ್ಲಿ ಸಂದೇಹವಿಲ್ಲ.

ಆದರೆ, ಈ ಮೇಲೆ ಉದಾಹೃತವಾದಂತೆ, ಲಕ್ಷ್ಯಲಕ್ಷಣ ಸಮವಾಯರೂಪ ವಾಗಿ ಜಯಕೀರ್ತಿಯೂ ನಾಗವರ್ಮನೂ ನಿರೂಪಿಸಿರುವ ಛಂದೋವತಂಸದ ಧಾಟಿಯನ್ನು ನಿರ್ಣಯಿಸುವ ವಿಷಯದಲ್ಲಿ ಒಂದು ತೊಡಕು ಕಂಡುಬರುತ್ತದೆ: ಯಾವುದೊಂದು ತ್ರಿಮೂರ್ತಿಗಣಬಂಧದಲ್ಲಿ ಗಣಗಳೊಳಗೆ ಯಾವುದರ ಆಧಿಕ್ಯ ವಿದೆಯೋ ಆ ಗಣವು ಆ ಬಂಧದ ಧಾಟಿಯನ್ನು ನಿರ್ಧರಿಸುವುದಾಗಿದೆ. (ಈ ತತ್ವದ ವಿವರಗಳನ್ನು ತಿಳಿಯಲಪೇಕ್ಷಿಸುವವರು ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯ ಮೂಲಕ ಪ್ರಕಟವಾದ 'ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ' ಎಂಬ ನನ್ನ ನಿಬಂಧವನ್ನು ಅವಲೋಕಿಸಬಹುದು). ಅಲ್ಲದೆ, ಆ ಧಾಟಿಯಂತೆ ಪಠಿಸುವಾಗ ಅಲ್ಪಪರಿಮಾಣದ ಗಣಗಳು ಆ ಬಂಧದಲ್ಲಿರುವ ಅಧಿಕ ಪರಿಮಾಣದ ಗಣಗಳಷ್ಟು ವಿಸ್ತಾರಗೊಳ್ಳುವುದೂ ಕರ್ಣಾಟಕ ವಿಷಯ ಜಾತಿ ಬಂಧಗಳ ಇನ್ನೊಂದು ಸಾಮಾನ್ಯ ಲಕ್ಷಣವಾಗಿದೆ. ಉದಾ–ಪಿರಿಯಕ್ಕರ–ಈ ಬಂಧದಲ್ಲಿ ವಿಷ್ಣುಗಣಗಳ ಆಧಿಕ್ಯವಿರುವುದರಿಂದ ಅದು ವಿಷ್ಣುಧಾಟಿಯಲ್ಲಿ ಪಠಿಸಬೇಕಾದ ಬಂಧವಾಗಿದೆ. ಅದರೊಳಗೆ ಕಡ್ಡಾಯವಾಗಿ ಮತ್ತು ಐಚ್ಛಿಕವಾಗಿ ಬರುವ

ಬ್ರಹ್ಮಗಣಗಳನ್ನು ವಿಷ್ಣುಗಣದ ಪರಿಮಾಣಕ್ಕೆ ಸರಿಯಾಗಿ ಕರ್ಷಿಸಬೇಕಾಗುತ್ತದೆ. ಆದರೆ ಯಾವುದೊಂದು ಬಂಧದಲ್ಲಿ ಅಧಿಕ ಪರಿಮಾಣದ ಗಣವು ಪಾದಾಂತದಲ್ಲಿರುವ ಸಂದರ್ಭಗಳಲ್ಲೆಲ್ಲ ಆ ಬಂಧದ ಪ್ರಧಾನ ಗಣದಷ್ಟನ್ನು ಮೀರಿದ ಭಾಗವು ಆ ಪಾದದ ಕೊನೆಯ ಊನಾಕ್ಷರ ತಾಲಖಂಡವಾಗಿ ಪರಿಣಮಿಸುತ್ತದೆ. ಪಿರಿಯಕ್ಕರದ ಪಾದಾಂತದಲ್ಲಿರುವ ರುದ್ರಗಣವು ಇಂತಹದಾಗಿದೆ. ತ್ರಿಮೂರ್ತಿ ಬಂಧಗಳ ಈ ಸಾಮಾನ್ಯ ಲಕ್ಷಣಗಳನ್ನನುಸರಿಸಿ ಛಂದೋವತಂಸವನ್ನು ಪಠಿಸುವ ಪ್ರಯತ್ನ ಮಾಡುವಾಗ—ಛಂದೋವತಂಸವು ಬ್ರಹ್ಮಗಣಪ್ರಧಾನ ಬಂಧವಾದುದರಿಂದ ಸಹಜ ವಾಗಿ ಅದು ಬ್ರಹ್ಮಧಾಟಿಯನ್ನು ಅನುಸರಿಸಬೇಕಾಗುತ್ತದೆ. ಆದರೆ ಅದರಲ್ಲಿರುವ ಒಂದು ವಿಷ್ಣುಗಣವು ಪಾದಾಂತದಲ್ಲಿ ಇರದೆ ಪಾದಾದಿಯಲ್ಲಿ ಇರುವುದರಿಂದ ಬ್ರಹ್ಮ ಧಾಟಿಗೆ ಅದು ಒಗ್ಗುವಂತೆ ತೋರುವುದಿಲ್ಲ. ಇದರ ಬದಲಾಗಿ ಸಾಮಾನ್ಯ ನಿಯಮಕ್ಕೆ ಇದೊಂದು ಅಪವಾದವೆಂದು ಭಾವಿಸಿಕೊಂಡು ಇದರಲ್ಲಿರುವ ಬ್ರಹ್ಮಗಣ ಗಳೆಲ್ಲವನ್ನೂ ವಿಷ್ಣುಧಾಟಿಗೆ ಒಗ್ಗುವಂತೆ ಕರ್ಷಿಸಿದರೆ ಆ ಧಾಟಿಯ ಸ್ವರೂಪವು ಹೀಗಾಗುತ್ತದೆ.

2 2 2 1 1 2+2 1 1 2+2 1 1 2+2 1 1 2+2
ಮಂ ದ ರ । ಧ ರ ಗ . । ಣ ಮೆ ಸೆ . । ದಿ ರೆ ಮೊ . । ದ ಲೊ ಳೆ . ।

2 2 2 2 2+2 1 1 2+2 1 1 2+2 2 2+2
ಬಂ ದಿ ರೆ । ಯುಂ ನಾ . । ಲ್ಕೈ ಡೆ ಬಿ . । ಸ ರು ಹ . । ಜ ನ್ಮಂ . ॥

2 2 2 2 2+2 1 1 2+2 1 1 2+2 1 1 2+2
ಸಂ ದು ದು । ಲ ಕ್ಷ . । ಣ ಮು ವ . । ನಿ ಯೊ ಳೀ . । ತೆ ರ ದಿಂ . ।

2 2 2 2 2+2 1 1 2+2 1 1 2+2 1 1 2+2
ಛಂ ದೋ ವ । ತಂ ಸ . । ಕ್ಕೆ ಸೆ ದು . । ದು ಗ ಜ . । ಗ ಮು ನೇ . ॥

ಇದು ಲೆಕ್ಕಾಚಾರದ ದೃಷ್ಟಿಯಿಂದ ಸಮಂಜಸವಾಗಿ ಕಂಡುಬರಬಹುದಾದರೂ ಈ ಧಾಟಿಯನ್ನು ಅನುಸರಿಸಿದಾಗ. ಎಡೆಬಿಡದೆ ಬರುವ ಬ್ರಹ್ಮಗಣಗಳ ಕರ್ಷಣಾತಿ ಶಯದಿಂದ ಪದ್ಯದ ಅರ್ಥವೇ ಹೊಳೆಯಲಾರದೆಂಬುದು ಪಠಿಸಿ ಪರೀಕ್ಷಿಸುವವರಿಗೆ ಸ್ಪಷ್ಟವಾಗದಿರದು. ಇದೂ ಅಲ್ಲದೆ ಯಾವ ತ್ರಿಮೂರ್ತಿಗಣ ಬಂಧದಲ್ಲೂ ಎರಡು ಬ್ರಹ್ಮಗಣಗಳು ಸಮೀಪವರ್ತಿಗಳಾಗಿದ್ದು ಕರ್ಷಣಾತಿಶಯವನ್ನು ಪಡೆಯಬೇಕಾದವು ಗಳಾದರೆ ಬಂಧವು ಶ್ರವ್ಯತ್ವವನ್ನು ಕಳೆದುಕೊಳ್ಳುವುದರಿಂದ ಅಂತಹ ಪ್ರಯೋಗ ಗಳು ಸಾಮಾನ್ಯವಾಗಿ ದುರ್ಲಭವೇ ಆಗಿವೆ. ('ಗೀತಿಕೆ' ಎಂಬುದರಲ್ಲಿ ಮಾತ್ರ ಒಂದೊಂದೆಡೆ ಬ್ರಹ್ಮಗಣದ್ವಂದ್ವವು ಕಾಣಿಸಿಕೊಳ್ಳುವುದುಂಟು. ಗೀತಿಕೆಯೆಂಬುದು ಗಾನಕ್ಕೆ ಮೀಸಲಾಗಿರುವುದರಿಂದ ಅಲ್ಲಿ ಮಾತ್ರ ಇದು ಒಂದು ವೇಳೆ ಶೋಭಾವಹ

ವಾಗಬಹುದಾದರೂ ಆ ಬಂಧದಲ್ಲಿ ಸಹ ಎರಡಕ್ಕಿಂತ ಹೆಚ್ಚು ಬ್ರಹ್ಮಗಣಗಳು ಪರಸ್ಪರ ಸಮೀಪವರ್ತಿಗಳಾಗಿ ಬರುವ ಸಂದರ್ಭವಿರುವುದಿಲ್ಲ.) ಆದುದರಿಂದ ಬ್ರಹ್ಮಗಣಪ್ರಧಾನವಾದ ಛಂದೋವತಂಸವನ್ನು ವಿಷ್ಣುಧಾಟಿಗೆ ಒಗ್ಗಿಸಿ ಪಠಿಸುವುದು ಸರ್ವಥಾ ಅಸಂಗತವೆನಿಸುವುದರಿಂದ ಈ ಮಾರ್ಗವು ತ್ಯಾಜ್ಯವೇ ಸರಿ.

ತ್ರಿಮೂರ್ತಿಗಣ ಬಂಧಗಳೊಳಗೆ ಅತಿಪುರಾತನಗಳೆಂಬುದಕ್ಕೆ ಸಾಕಷ್ಟು ಸಾಕ್ಷ್ಯವಿರುವ ತ್ರಿಪದಿ, ಏಳೆ, ಚೌಪದಿಕೆ*—ಎಂಬೀ ಮೂರು ಬಂಧಗಳಲ್ಲಿಯೂ

---

* 'ಚೌಪದಿಕೆ'ಯ ಪಾದದಲ್ಲಿ ಎರಡೇ ಗಣಗಳಿರುತ್ತವೆ; ಮೊದಲನೆಯದು ವಿಷ್ಣುಗಣ, ಎರಡನೆಯದು ರುದ್ರಗಣ. ರುದ್ರಗಣವು ಪಾದಾಂತದಲ್ಲಿರುವುದರಿಂದ ಇದೊಂದು ವಿಷ್ಣುಧಾಟಿಯ ಬಂಧವೆಂಬ ಅಭಿಪ್ರಾಯವುಂಟಾಗುವಂತಿದೆ. ಆದರೆ, ಇದನ್ನು ವಿಷ್ಣುಧಾಟಿಗೆ ಒಗ್ಗಿಸಿದರೆ, ಪಿರಿಯಕ್ಕರ ಅಥವಾ ಕಿರಿಯಕ್ಕರದ ಪಾದಗಳ ಕೊನೆಗಳ ಸ್ವರೂಪವೇ ಇದಕ್ಕೆ ಬಂದು ಈ ಬಂಧಕ್ಕೆ ಯಾವ ವಿಶೇಷತೆಯೂ ಇಲ್ಲವೆಂದಾಗುತ್ತದೆ. ನಾಗವರ್ಮನ ಚೌಪದಿಕೆಯಲ್ಲಿ ಇಂತಹ ಭ್ರಮೆಗೆ ಅವಕಾಶವಿದ್ದರೂ ಜಯಕೀರ್ತಿಯ ರಚನೆಯನ್ನು ಪಠಿಸುವಾಗ ಇದರ ನಿಜಸ್ವರೂಪವು ವ್ಯಕ್ತವಾಗುವಂತಿದೆ. ಉದಾ :—

ಮದನಾದ್ಯಾಃ ಶರಗಣಾಂತಾಃ ।
ಯದಿ ಚರಣಾಶ್ಚತ್ವಾರಃ ॥
ಗದಿತಾಶ್ಚೇಚ್ಚತುಷ್ಪದಿಕಾ ।
ವಿದಿತಾಸೌ ಚೂಡಾಮಣೌ ॥

(ಇದರ ಮೂರನೆಯ ಪಾದದಲ್ಲಿ ಚ ತು ಷ್ಪ ದಿ ಕಾ (◡ – ◡ ◡ –) ಎಂಬುದು ತ್ರಿಮೂರ್ತಿಗಣ ನಿಯಮಕ್ಕೆ ವಿರುದ್ಧವಾಗಿರುವುದರಿಂದ ಇದು ಶುದ್ಧ ಪಾಠವಲ್ಲವೆಂಬುದು ಸ್ಪಷ್ಟ. ಪ್ರಾಯಶಃ ಮೂಲದಲ್ಲಿ ಇದು ಚೌ ಪ ದಿ ಕಾ (– ◡ ◡ –) [=ಶೂಲಧರಂ] ಎಂದೇ ಇದ್ದಿರಬೇಕು. 'ಚೌಪದಿಕಾ' ಎಂಬುದು ಶುದ್ಧ ಸಂಸ್ಕೃತರೂಪವಲ್ಲವೆಂಬುದರಿಂದ ಯಾರೋ ಲಿಪಿಕಾರರು ಇದನ್ನು 'ಚತುಷ್ಪದಿಕಾ' ಎಂದು ಪರಿವರ್ತಿಸಿದ್ದಾಗಿರಬೇಕು.)

ಇದರಿಂದ ಈ ಬಂಧವು ರುದ್ರಧಾಟಿಯದೆಂದು ಸಿದ್ಧವಾಗುತ್ತದೆ. ಪಾದದ ಮೊದಲನೆಯ ಗಣವಾದ ವಿಷ್ಣುವನ್ನು ಕರ್ಷಿಸಿ ರುದ್ರಧಾಟಿಗೆ ಒಗ್ಗಿಸಿದಾಗ ಅದರ ಸ್ವರೂಪ ಈ ಕೆಳಗಿನಂತಾಗುತ್ತದೆ:

1 1 2 2 2 1 1 2 2 2
ಮ ದ ನಾ ದ್ಯಾಃ . । ಶ ರ ಗ ಣಾಂ ತಾಃ ।

1 1 2 2 2 2 2 2 2
ಯ ದಿ ಚ ರ . । ಣಾ ಶ್ಚ ತ್ವಾ ರಃ ॥

1 1 2 2 2 2 2 2 2
ಗ ದಿ ತಾ ಶ್ಚೇ . । ಚ್ಚೌ ಪ ದಿ ಕಾ ।

1 1 2 2 2 2 2 2 2
ವಿ ದಿ ತಾ ಸೌ . । ಚೂ ಡಾ ಮ ಣೌ ॥

ಪಾದಾಂತಗಳಲ್ಲಿ ವಿರಾಮಾವಕಾಶವಿಲ್ಲವೆಂಬ ಮತ್ತು ಉಪಾಂತ್ಯಗಣಸ್ಥಾನಗಳಲ್ಲಿ ಅಲ್ಪತರ ಪರಿಮಾಣದ ಗಣಗಳೇ ಇದ್ದು ಅಲ್ಲಿ ಅವು ಕರ್ಷಣಾಧಿಕ್ಯವನ್ನೂ ಪಡೆಯು ವುವೆಂಬ ತಥ್ಯವನ್ನು ಇಲ್ಲಿ ಸ್ಮರಿಸಿಕೊಳ್ಳುವುದು ಲಾಭಕರ. (ಪುರಾತನ ಬಂಧ ಗಳೊಳಗೊಂದಾದ ಗೀತಿಕೆಯು ಪದ್ಯಾರ್ಧಗಳ ಕೊನೆಯಲ್ಲಿಯೂ ವಿರಾಮಾವಕಾಶ ವಿರುವುದಿಲ್ಲ. ಕವಿರಾಜಮಾರ್ಗದಲ್ಲಿ ಕಂಡುಬರುವ ಗೀತಿಕಾಭೇದದಲ್ಲಿ ಯಾವ ಪಾದದ ಕೊನೆಯಲ್ಲಿಯೂ ವಿರಾಮಾವಕಾಶವಿರುವುದಿಲ್ಲ. ಆದರೆ, ಆದಿಸ್ವರೂಪದ ಗೀತಿಕೆಯು ಓಜಪಾದಗಳ ಕೊನೆಯಲ್ಲಿ ಒಂದು ಗಣದ ಪರಿಮಿತಿಗೊಳಪಟ್ಟ ವಿರಾಮಾವಕಾಶವೇನೋ ಇರುವುದಾದರೂ ಅದೊಂದು ಅರ್ಧಸಮ ಬಂಧವಾದುದ ರಿಂದ ಅರ್ಧಸಮ ಬಂಧಗಳ ಸಹಜವಾದ ವಿರಾಮಸ್ಥಾನಗಳು ಯುಕ್ಪಾದಾಂತಗಳೇ ಎಂಬ ತಥ್ಯವು ಇಲ್ಲಿ ಲಕ್ಷಿಸತಕ್ಕದ್ದಾಗಿದೆ.)

ಇವುಗಳಂತೆಯೇ ಛಂದೋವತಂಸದಲ್ಲಿ ವಿಷ್ಣುಗಣ ಒಂದೇ ಇದ್ದು ಬ್ರಹ್ಮಗಣ ಗಳು ನಾಲ್ಕು ಇರುವುದರಿಂದ ಬ್ರಹ್ಮಗಣಗಳನ್ನವಲಂಬಿಸಿಯೇ (ಇದು ಸಹ ಪಾದಾಂತವಿರಾಮವಿಲ್ಲದಿರುವ ಬಂಧವೆಂದು ಗ್ರಹಿಸಿಕೊಂಡು) ಇದರ ಧಾಟಿಯನ್ನು ನಿಷ್ಕರ್ಷಿಸುವುದು ಯುಕ್ತಿಯುಕ್ತವಾಗಿದೆ. ಆದುದರಿಂದ ಪಾದಾದಿಯ ವಿಷ್ಣುಗಣ ವನ್ನು ಬ್ರಹ್ಮಧಾಟಿಗೆ ಒಗ್ಗಿಸಬೇಕೆಂಬುದು ಕ್ರಮಪ್ರಾಪ್ತವಾಗುತ್ತದೆ. ತ್ರಿಪದಿ ಏಳೆ ಚೌಪದಿಕೆಗಳಂತೆ ಹಾಗೂ ಕವಿರಾಜಮಾರ್ಗದಲ್ಲಿ ಕಂಡುಬರುವ ಗೀತಿಕಾಭೇದದಂತೆ ಛಂದೋವತಂಸವೂ ಪಾದಾಂತದಲ್ಲಿ ವಿರಾಮವಿಲ್ಲದಿರುವ ಬಂಧವೆಂದು ಗ್ರಹಿಸಿ, ಬ್ರಹ್ಮ ಗಣಚತುಷ್ಕಗಳ ಉಪಾಂತ್ಯಸ್ಥಾನದಲ್ಲಿರುವ (ಪಾದಾದಿಯ) ವಿಷ್ಣುಗಣವನ್ನು ಕರ್ಷಿಸಿ ಬ್ರಹ್ಮಗಣದ್ವಂದ್ವದ ಪರಿಮಾಣಕ್ಕೆ ಸಮನಾಗಿಸಿ ಇದನ್ನು ಪಠಿಸಿದಾಗ ಸುಂದರ ವಾದೊಂದು ಧಾಟಿ ಉನ್ಮೀಲಿಸುತ್ತದೆ. ಅದರ ಸ್ವರೂಪ ಈ ಕೆಳಗಿನಂತಾಗುತ್ತದೆ:–

2 2 2+2 1 1 2 1 1 2 1 1 2 1 1 2
ಮಂ ದ ರ . । ಧ ರ ಗ । ಣ ಮೆ ಸೆ । ದಿ ರೆ ಮೊ । ದ ಲೊ ಳೆ ।

2 2 2+2 2 2 1 1 2 1 1 2 2 2
ಬಂ ದಿ ರೆ . । ಯುಂ ನಾ । ಲ್ಕೆ ಡೆ ಬಿ । ಸ ರು ಹ । ಜ ನ್ಮಂ ॥

2 2 2+2 2 2 1 1 2 1 1 2 1 1 2
ಸಂ ದು ದು . । ಲ ಕ್ಷ । ಣ ಮ ವ । ನಿ ಯೊ ಳೀ । ತೆ ರ ದಿಂ ।

2 2 2+2 2 2 1 1 2 1 1 2 1 1 2
ಛಂ ದೋ ವ . । ತಂ ಸ । ಕ್ಕೆ ಸೆ ದು । ದು ಗ ಜ । ಗ ಮ ನೇ ॥

(ಬ್ರಹ್ಮಗಣಗಳು ಸಹಜವಾಗಿ ನಾಲ್ಕು ಮಾತ್ರೆಗಳ ಆವರ್ತದ ಚತುರಶ್ರ ಜಾತಿ ಏಕತಾಳಕ್ಕೆ ಅಳವಡುವಂಥವುಗಳು. ಈ ಮೇಲೆ ನಿರೂಪಿಸಿರುವಂತೆ ಬ್ರಹ್ಮಗಣ ಪ್ರಧಾನವಾದ ಛಂದೋವತಂಸವು ಇದೇ ತಾಳಗತಿಯ ಬಂಧವಾಗಿದೆ. ವಿಷ್ಣುಗಣವು

ಸಹಜವಾಗಿ ಆರು ಮಾತ್ರೆಗಳ ಆವರ್ತದ ಗತಿಯಲ್ಲಿ ನಡೆಯುವಂತಹದಾಗಿರುವುದರಿಂದ ಛಂದೋವತಂಸದ ಪಾದಾದಿಯಲ್ಲಿರುವ ವಿಷ್ಣುಗಣಕ್ಕೆ ಎರಡು ಮಾತ್ರೆಗಳಷ್ಟು ಕರ್ಷಣವನ್ನು ನೀಡಿದಾಗ ಅದು ಬ್ರಹ್ಮಧಾಟಿಗೆ ಹೊಂದಿಕೊಳ್ಳುತ್ತದೆ.)

ನಮಗೆ ಈವರೆಗೆ ಲಬ್ಧವಾಗಿರುವ ಛಂದೋವತಂಸಗಳು ಎರಡೇ: ನಾಗವರ್ಮನ ರಚನೆಯೊಂದು, ಜಯಕೀರ್ತಿಯದೊಂದು. ನಾಗವರ್ಮನ ರಚನೆಯನ್ನು ಧಾಟಿಗನುಗುಣವಾಗಿ ಈ ಮೇಲೆ ನಿರೂಪಿಸಲಾಯಿತು. ಈಗ ಜಯಕೀರ್ತಿಯ ರಚನೆಯನ್ನು ಗಣವಾಚಕರೂಪದಲ್ಲಿ ಮಾರ್ಪಡಿಸಿ ಧಾಟಿಗನುಗುಣವಾಗಿ ನಿರೂಪಿಸೋಣ. ಜಯಕೀರ್ತಿಯ ರಚನೆಯನ್ನು ಈ ಲೇಖನದ ಆದಿಯಲ್ಲಿಯೇ ಕೊಡಲಾಗಿದೆ. ಆ ಪದ್ಯವನ್ನು ಗಣವಾಚಕಗಳಾಗಿ ಮಾರ್ಪಡಿಸಿದಾಗ ಅದು ಹೀಗಾಗುತ್ತದೆ :

2 2 2+2 1 1 2 1 1 2 1 1 2 2 2<br>
ಕಂ ಸಾ ರಿ . । ದ್ರು ಹಿ ಣಂ । ಸು ರ ಪ । ದ್ರು ಹಿ ಣಂ । ಬ್ರ ಹ್ಮಂ ।

2 2 2+2 1 1 2 2 2 1 1 2 2 2<br>
ಶ್ರೀ ಪ ತಿ . । ದ್ರು ಹಿ ಣಂ । ಬ್ರ ಹ್ಮಂ । ದ್ರು ಹಿ ಣಂ । ಬ್ರ ಹ್ಮಂ ॥

2 2 2+2 2 2 2 2 1 1 2 1 1 2<br>
ಕಂ ಸಾ ರಿ . । ಧಾ ತೃ । ಬ್ರ ಹ್ಮಂ । ದ್ರು ಹಿ ಣಂ । ದ್ರು ಹಿ ಣಂ ।

2 2 2+2 2 2 2 2 2 2 2 2<br>
ಗೋ ವಿಂ ದಂ . । ಧಾ ತೃ । ಧಾ ತೃ । ಧಾ ತೃ । ಬ್ರ ಹ್ಮಂ ॥

(ತ್ರಿಮೂರ್ತಿಗಣಬಂಧಗಳ ಗಣಾಂತಗಳಲ್ಲಿ–ಕನಿಷ್ಠಪಕ್ಷ ಕರ್ಷಣವು ಅನಿವಾರ್ಯವಾಗಿರುವಲ್ಲಾದರೂ, ಯತಿ ಇರುವುದಾದರೆ ಪಠನವು ಸುಗಮವಾಗುತ್ತದೆ. ಉದಾಹೃತವಾದ ಎರಡು ಛಂದೋವತಂಸಗಳಲ್ಲಿಯೂ ಹೀಗಿಲ್ಲ. ನಾಗವರ್ಮ ಜಯಕೀರ್ತಿಗಳ ಕಾಲದಲ್ಲಿ ಈ ಬಂಧವು ಬಳಕೆಯಲ್ಲಿಲ್ಲದಿದ್ದುದರಿಂದ ಇವುಗಳ ಧಾಟಿಯು ಅವರಿಗೆ ಅಜ್ಞಾತವಾಗಿದ್ದುದೇ ಇದಕ್ಕೆ ಕಾರಣವಾಗಿರಬೇಕು.)

೨

'ಛಂದೋವತಂಸ'—ಇದು ಕರ್ಣಾನಂದಕರವಾದ ಹೆಸರು. ತ್ರಿಮೂರ್ತಿಗಣಬಂಧಗಳೊಳಗೆ ಬೇರೆ ಯಾವುದರ ಹೆಸರೂ ಇಷ್ಟು ಮೋಹಕವಾಗಿಲ್ಲ. ಈ ಪದ್ಯಕ್ಕೆ ಈ ಹೆಸರು ಕೊಟ್ಟುದರ ಔಚಿತ್ಯವೇನು? ಈ ಹೆಸರಿನಿಂದ ಸೂಚಿತವಾಗುವ ತಥ್ಯವೇನು?–ಎಂಬುದನ್ನು ಊಹಿಸುವ ಪ್ರಯತ್ನ ಮಾಡುವುದು ಇಲ್ಲಿ ಅಪ್ರಸ್ತುತವೆನಿಸಲಾರದೆಂದು ನಂಬುತ್ತೇನೆ.

ಛಂದೋವತಂಸವೆಂಬೀ ಪದಕ್ಕೆ ಛಂದೋಬಂಧಗಳ ಭೂಷಣ, ಛಂದೋಬಂಧಗಳಲ್ಲಿ ಶ್ರೇಷ್ಠ ಅಥವಾ ಇನ್ನೊಂದು ಛಂದೋಬಂಧದ ಶಿಖೆ ಇಲ್ಲವೆ ಶಿರೋಭೂಷಣ–ಎಂಬಿತ್ಯಾದಿಗಳೊಳಗೆ ಯಾವುದಾದರೊಂದು ಅರ್ಥವಿದ್ದಿರಬೇಕು. ಇಲ್ಲಿ ಸೂಚಿಸಿದ ಅರ್ಥಗಳಲ್ಲಿ ಮೊದಲಿನ ಎರಡರೊಳಗೆ ಯಾವುದಾದರೊಂದು ಈ ಬಂಧಕ್ಕೆ ಅನ್ವಯಿಸುತ್ತಿದ್ದುದಾದರೆ ಈ ಬಂಧವು ವಿಪುಲವಾಗಿ ಬಳಕೆಯಲ್ಲಿರುತ್ತಿತ್ತು. ಒಂದಾನೊಂದು ಕಾಲದಲ್ಲಿ ಇಂತಹದೊಂದು ಬಂಧವಿತ್ತೆಂದು ತಿಳಿಸುವುದಕ್ಕೆ ಮಾತ್ರವೆಂಬಂತೆ ಎರಡೇ ಎರಡು ಪದ್ಯಗಳು – ಅವು ಸಹ ಛಂದೋಲಕ್ಷಣ ಗ್ರಂಥಗಳಲ್ಲಿ ಮಾತ್ರ–ನಮಗೆ ಲಬ್ಧವಾಗಿವೆ. (ಅಸಗನ 'ಕರ್ಣಾಟ ಕುಮಾರಸಂಭವ' ಮೊದಲಾದ ಕಾವ್ಯಗಳಲ್ಲಿ ಈ ಬಂಧವು ಪ್ರಯುಕ್ತವಾಗಿದೆಯೆಂದು ಜಯಕೀರ್ತಿ ತಿಳಿಸಿರುವನಾದರೂ ಆ ಕೃತಿಗಳಾವುವೂ ನಮಗೆ ಲಬ್ಧವಾಗಿಲ್ಲ.) ಆದುದರಿಂದ ಮೇಲೆ ಹೇಳಿದ ಮೊದಲಿನ ಆ ಎರಡು ಅರ್ಥಗಳು ಇಲ್ಲಿಗೆ ಅನ್ವಯಿಸಲಾರವು. ಹಾಗಾದರೆ, ಮೂರನೆಯದಾಗಿ ಸೂಚಿಸಿದ ಅರ್ಥವು ಮಾತ್ರ ಇಲ್ಲಿ ಹೊಂದಿಕೆಯಾಗುವಂತಿದೆ. ಈ ಊಹೆ ಸಾಧುವೆಂದಾದರೆ, ಛಂದೋವತಂಸವೆಂಬ ಹೆಸರಿನ ಈ ಬಂಧವು ಯಾವುದೋ ಇನ್ನೊಂದು ಛಂದೋಬಂಧದ ಅನುಬಂಧಿಯಾಗಿ ಪ್ರಯುಕ್ತವಾಗುತ್ತಿದ್ದಿರಬೇಕೆಂಬುದು ಸ್ಪಷ್ಟ. ಹೀಗೆ ಒಂದು ಬಂಧಕ್ಕೆ ಇನ್ನೊಂದು ಬಂಧವು ಅನುಬಂಧಿಯಾಗಿಯೇ ಎಲ್ಲಾದರೂ ಇರುವುದುಂಟೆ ?—ಇದೀಗ ವಿಚಾರಣೀಯ : ಕನ್ನಡದ ಹಳೆಯ ರಚನೆಗಳಲ್ಲಿ ಇಂತಹ ಉದಾಹರಣೆ ನಮಗೆ ಅಲಭ್ಯವಾಗಿರುವುದಾದರೂ ತೆಲುಗಿನಲ್ಲೇನೋ ಸುಪ್ರಸಿದ್ಧವಾದೊಂದು ಉದಾಹರಣೆ ದೊರೆಯುತ್ತದೆ. ಅದಾವುದೆಂದರೆ—ಸೀಸಪದ್ಯ.

ತೆಲುಗಿನ 'ಸೀಸ'ವು ಮಾತ್ರಾಬಂಧವೋ ಎಂಬಂತೆ ಸಕೃದ್ದರ್ಶನಕ್ಕೆ ಕಾಣಬಹುದಾದರೂ ವಾಸ್ತವಿಕವಾಗಿ ಅದು ಮಾತ್ರಾಬಂಧವಲ್ಲ ; ಅದು ಕನ್ನಡದ ತ್ರಿಮೂರ್ತಿಗಣಗಳ ಅಪರಾವತಾರ ರೂಪವಾದ ಸೂರ್ಯ, ಇಂದ್ರ, ಚಂದ್ರ–ಎಂಬ ಹೆಸರಿನ ಮೂರು ಗಣಗಳೊಳಗೆ ಮೊದಲಿನ ಎರಡು ಗಣಗಳಿಂದ ಘಟಿತವಾದ ಪದ್ಯವಾಗಿದೆ. ಪ್ರತಿಯೊಂದು ಸೀಸಕ್ಕೂ ಅದಕ್ಕಿಂತ ಕಿರಿಯದಾದ 'ತೇಟಗೀತಿ' ಅಥವಾ 'ಆಟವೆಲದಿ' ಎಂಬೆರಡರೊಳಗೊಂದು ಬಂಧವು ನಿರಪವಾದವಾಗಿ ಅನುಬಂಧಿಯಾಗಿಯೇ ಇರುತ್ತದೆ. ಮತ್ತು ಅನುಬಂಧಿಯಾದ ಕಿರಿಯ ಬಂಧಗಳು ಸೀಸದ ಧಾಟಿಗಿಂತ ಭಿನ್ನವಾದ ಧಾಟಿಯಲ್ಲಿರುತ್ತವೆ. ಇದನ್ನು ಸ್ಪಷ್ಟೀಕರಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಇಲ್ಲಿ ಕೊಡುತ್ತೇನೆ—

**ಸೀಸ :—**

ಪಾದಂಬು । ನಾಲುಗು. । ಪಾದಂಬು।ಲಂಗ ಜೇಸಿ । ಮೊದಟಿ ಮೂ।ಡಿಟಿ ಲೋಕ।ವಿದಿತ।ಪೈ ನ
ನಲ ನಾಮ । ಗಣಮುಲು. । ಪೆಲಯುನಿ । ಮೂರ್ಡಿಡಿ. । ಮಾನುಗಾ । ದಕ್ಕಿನ. ।ವಾಸಿ।ಯಂದು॥
ನಗಣಮುಲ್ । ರೆಂಡಿಡಿ. । ತಗಗೂಡ । ಪಾದಮುಲ್ । ನಾಲುಗು. । ನಿವ್ವಾಟ।ಸೋಲಿ।ನಿಲಿಪಿ ।
ಸಮುಸೀಸ।ಮುಲು ಚೆಪ್ಪ।ಡಮುರಂಗ. । ರೆಂಟಿಕಿ । ಪ್ರಾಸಮುಲ್ । ಪೇಱಿಗಾ । ಜೇಸಿ।ಯೊಸಗ॥

**ತೇಟಗೀತಿ :—**

ನಾಲು।ಗಡುಗುಲ । ನುನನಲ । ನಲವ । ನಂಬು ।
ಲೋಲಿ । ನಿಲಿಪಿ ಮೂ।ಡಗು ಕಡ । ನೊಂಡೆ । ವಳ್ಲ ॥
ವ್ರಾಲು । ನಿಡಿಯುಂಡೆ । ಜೆಪ್ಪಿನ । ವಸ್ತು । ಕವಿಜ ।
ನಾಶ್ರ । ಯಾ ತೇಟ । ಗೀದಿಯು । ಯುಗು ಧ । ರಿತ್ರಿ ॥

**ಆಟವೆಲದಿ :—**

ನನನ । ನಲನ । ಗಮ್ಮು । ಲೊನರಗ । ನೊಕ್ಕ ಪಾ ।
ದಂಬು । ನಗಣ । ಪಂಚ।ಕಂಬು । ಗೂಡ ॥
ನವುಲ । ದಾನಿ । ಯುನಲ । ನದಿಯುನು।ನಟ್ಲು ಕಾ ।
ಜೆಪ್ಪ।ನಾಟ।ವೆಲದಿ । ಯೊಪ್ಪು । ಗೃತುಲ ॥

ತೆಲುಗಿನ ಸೂರ್ಯ, ಇಂದ್ರ, ಚಂದ್ರ–ಎಂಬ ಗಣಗಳು ಕನ್ನಡದ ಬ್ರಹ್ಮ, ವಿಷ್ಣು, ರುದ್ರ–ಗಣಗಳ ನಾಮಾಂತರಗಳಾಗಿವೆಯಾದರೂ ಕನ್ನಡದ ಈ ಎಲ್ಲಾ ಗಣಗಳು ತೆಲುಗಿನಲ್ಲಿ ಬಳಕೆಯಾಗುವುದಿಲ್ಲ. ತೆಲುಗರು ಈ ಮೂರು ಗಣವರ್ಗಗಳ ಆರಂಭದ ಎರಡೆರಡು ಗಣಗಳನ್ನು ಬಿಟ್ಟು ಉಳಿದವುಗಳನ್ನು ಮಾತ್ರ ಸ್ವೀಕರಿಸಿ ಅನುಕ್ರಮವಾಗಿ ಅವುಗಳಿಗೆ ಸೂರ್ಯ, ಇಂದ್ರ, ಚಂದ್ರ ಎಂಬ ಹೆಸರುಗಳನ್ನು ಕೊಟ್ಟಿರುತ್ತಾರೆ. ಹೀಗೆ ಮಾಡಿದುದರ ಉದ್ದೇಶವು ತ್ರಿಮೂರ್ತಿಗಣಗಳಿಗೆ ಕರ್ಷಣಾವಶ್ಯಕತೆಯನ್ನು ಕಡಮೆ ಮಾಡಿ ಅಷ್ಟಿಷ್ಟು ಮಾತ್ರಾಸಮತ್ವವನ್ನೂ ತರುವುದಾಗಿದೆ ಯೆಂಬುದು ಸುವ್ಯಕ್ತ. ಇದರಿಂದಾಗಿ ತೆಲುಗಿನ ಗಣಗಳಲ್ಲಿ ಗಣಾಂತದ ಲಘು ವನ್ನು–ಅದೂ ಕೆಲವೆಡೆಗಳಲ್ಲಿ ಮಾತ್ರ–ಗುರುವಾಗಿ ಉಚ್ಚರಿಸಿದರೆ ಸಾಕಾಗುತ್ತದೆ. ಈ ಕಾರಣದಿಂದಾಗಿ ತೆಲುಗಿನ ಆ ಬಂಧಗಳು ಮಾತ್ರಾಬಂಧಗಳೇ ಎಂತೆ ಭಾಸವಾಗು ವುದು ಹೊರತು ವಾಸ್ತವಿಕವಾಗಿ ಅವು ತ್ರಿಮೂರ್ತಿಗಣಬಂಧಗಳೇ ಆಗಿವೆ.

ಈ ಮೇಲೆ ಉದಾಹರಿಸಿದ ಸೀಸವನ್ನು ಮತ್ತು ಅದರ ಅನುಬಂಧಿಗಳಾದ ತೇಟಗೀತಿ ಹಾಗೂ ಆಟವೆಲದಿಯನ್ನು ಕನ್ನಡದ ತ್ರಿಮೂರ್ತಿಗಣವಾಚಕಗಳ ರೂಪ ದಲ್ಲಿ ಪರಿವರ್ತಿಸಿ ನೋಡೋಣ.

**ಸೀಸ :—**

ಕಂಸಾರಿ । ಶ್ರೀಪತಿ । ಕಂಸಾರಿ । ನರಕಾರಿ। ಸ್ಮರಪಿತ। ನರಕಾರಿ। ಸುರಪ । ಧಾತ್ರ।
ನರಕಾರಿ । ಮುರರಿಪು। ಸ್ಮರಪಿತ। ಶ್ರೀಪತಿ। ಮಾಧವ। ಶ್ರೀಪತಿ। ಧಾತ್ರ। ಧಾತ್ರ॥
ಸ್ಮರಪಿತ। ಶ್ರೀಪತಿ । ನರಕಾರಿ । ಮಾಧವ। ಶ್ರೀಪತಿ । ಕಂಸಾರಿ । ಧಾತ್ರ। ಸುರಪ॥
ನರಕಾರಿ । ನರಕಾರಿ । ಮುರರಿಪು । ಮಾಧವ । ಮಾಧವ । ಮಾಧವ । ಧಾತ್ರ ॥
ಸುರಪ ॥

ವಿಷ್ಣುಗಣಗಳೊಳಗೆ 'ಶ್ರೀಪತಿ' ಮತ್ತು 'ಮುರರಿಪು' ಎಂಬೆರಡು ಗಣಗಳ ಕೊನೆಯ ಅಕ್ಷರವನ್ನು ಮಾತ್ರ ಗುರುವಾಗಿ ಉಚ್ಚರಿಸಿ ಪಠಿಸಿದರಾಯಿತು ; ಸೀಸಕ್ಕೆ ಐದು ಮಾತ್ರೆಗಳ ಆವರ್ತದ ಧಾಟಿ ಕೂಡಿಬಂದು ಇದೊಂದು ಮಾತ್ರಾಬಂಧವೋ ಎಂಬಂತೆ ಭಾಸವಾಗುತ್ತದೆ. (ಮೇಲೆ ಉದಾಹರಿಸಿದ 'ಸೀಸ'ದಲ್ಲಿ ಇಂತಹ ಸಂದರ್ಭಗಳು ಏಳು ಇವೆ.)

**ತೇಟಗೀತಿ :—**

ಧಾತ್ರ । ಮುರರಿಪು । ಮುರರಿಪು । ಸುರಪ । ಧಾತ್ರ ।
ಧಾತ್ರ । ಸ್ಮರಜಿತಂ । ಮುರರಿಪು । ಧಾತ್ರ ಧಾತ್ರ ॥
ಧಾತ್ರ । ನರಕಾರಿ । ಶ್ರೀಪತಿ । ಧಾತ್ರ । ಸುರಪ ।
ಧಾತ್ರ । ಕಂಸಾರಿ । ಶ್ರೀಪತಿ । ಸುರಪ । ಧಾತ್ರ ॥

ಇದರ ಪ್ರತಿಯೊಂದು ಪಾದಾರಂಭದ ಬ್ರಹ್ಮಗಣವನ್ನು ಯಥಾಕ್ಷರವಾಗಿ, ಎಂದರೆ ಮೂರು ಮಾತ್ರಾಕಾಲದಲ್ಲಿಯೂ, ಪ್ರತಿಯೊಂದು ಪಾದದ ಎರಡನೆಯ ಗಣವಾದ ವಿಷ್ಣುವನ್ನು ಐದು ಮಾತ್ರಾಕಾಲದಲ್ಲಿಯೂ ಉಚ್ಚರಿಸಿ, ಕೊನೆಯ ಎರಡು ಬ್ರಹ್ಮಗಣಗಳ ಅಂತ್ಯಾಕ್ಷರಗಳನ್ನು ಕರ್ಷಿಸಿ ನಾಲ್ಕುನಾಲ್ಕು ಮಾತ್ರೆಗಳ ಕಾಲದಲ್ಲೂ ಪಠಿಸಬೇಕು. ಆಗ ಈ ಪದ್ಯಕ್ಕೆ ನಾಲ್ಕು ಮಾತ್ರೆಗಳ ಆವರ್ತದ ಧಾಟಿ ಕೂಡಿಬರುತ್ತದೆ. (ಈ ಮೇಲಿನ ತೇಟಗೀತಿಯ ಪ್ರಥಮ ಪಾದದ ಎರಡನೆಯ ಗಣದ ಕೊನೆಯ ಲಘುವನ್ನು ಮಾತ್ರ ಕರ್ಷಿಸಿದರೆ ಸಾಕಾಗುತ್ತದೆ ; ಉಳಿದ ಪಾದಗಳ ದ್ವಿತೀಯಗಣಗಳೆಲ್ಲವೂ ಯಥಾಕ್ಷರವಾಗಿಯೇ ಐದು ಮಾತ್ರೆಯವುಗಳಾಗಿವೆ.)

ಈಗ ಆಟವೆಲದಿಯನ್ನು ಪರೀಕ್ಷಿಸೋಣ :

ಸುರಪ । ಸುರಪ । ಧಾತ್ರ । ಮುರರಿಪು । ಮಾಧವಂ ।
ಧಾತ್ರ । ಸುರಪ । ಧಾತ್ರ । ಧಾತ್ರ । ಧಾತ್ರ ॥
ಸುರಪ । ಧಾತ್ರ । ಸುರಪ । ಮುರರಿಪು । ಮಾಧವಂ ।
ಧಾತ್ರ । ಧಾತ್ರ । ಸುರಪ । ಧಾತ್ರ । ಸುರಪ ॥

ಈ ಆಟವೆಲದಿಯಲ್ಲಿ ಬಂದಿರುವ ಎಲ್ಲ ಬ್ರಹ್ಮಗಣಗಳ ಅಂತ್ಯಾಕ್ಷರಗಳನ್ನು ಕರ್ಷಿಸಿ ಅವುಗಳನ್ನು ನಾಲ್ಕು ಮಾತ್ರೆಯವುಗಳಾಗಿ ಪಠಿಸಿದರೆ. ಹಾಗೂ ಇದರಲ್ಲಿ ಬಂದಿರುವ ವಿಷ್ಣುಗಣಗಳನ್ನು ಯಥಾಕ್ಷರವಾಗಿ ಪಠಿಸಿದರೆ ಇದರ ಧಾಟಿ ಅವಗತವಾಗುತ್ತದೆ. ಹೀಗೆ ಪಠಿಸುವಾಗ ಇದು ನಾಲ್ಕು ಮಾತ್ರೆಗಳ ಆವರ್ತದ ಬಂಧವಾಗಿ ಪರಿಣಮಿಸುತ್ತದೆ. ತೇಟಗೀತಿ ಆಟವೆಲದಿ ಎಂಬೆರಡು ಬಂಧಗಳೊಳಗೆ ಮೊದಲನೆಯದು ಸಮಪಾದ ಬಂಧವಾಗಿದ್ದು ಎರಡನೆಯದು ಅರ್ಧಸಮ ಬಂಧವಾಗಿದೆ.

ಮತ್ತು ಇವೆರಡೂ ಬಂಧಗಳು ಪಠನದಲ್ಲಿ ನಾಲ್ಕು ಮಾತ್ರೆಗಳ ಆವರ್ತದ ಧಾಟಿಯನ್ನು ಪಡೆಯುವವಾಗಿವೆ. ಆದರೂ ಅವುಗಳೊಳಗೆ ಮುಖ್ಯವಾದ ಇನ್ನೊಂದು ವ್ಯತ್ಯಾಸವಿದೆ. ಅದೇನೆಂದರೆ: ತೇಟಗೀತಿಯು ಯಾವ ಪಾದಾಂತದಲ್ಲೂ ವಿರಾಮಾವಕಾಶವಿರುವುದಿಲ್ಲ; ಆದರೆ ಆಟವೆಲದಿಯು ಓಜಪಾದಗಳ ಕೊನೆಗಳಲ್ಲಿ ಮೂರು ಮಾತ್ರೆಗಳ ವಿರಾಮಾವಕಾಶವೂ ಯುಕ್ಪಾದಗಳ ಕೊನೆಗಳಲ್ಲಿ ನಾಲ್ಕು ಮಾತ್ರೆಗಳ ವಿರಾಮಾವಕಾಶವೂ ಇರುತ್ತದೆ. (ಈ ಮೇಲೆ ಉದಾಹೃತವಾದ ತೆಲುಗು ಪದ್ಯಗಳನ್ನು, ನನ್ನ ವಿದ್ವದ್ಬಂಧುಗಳಾದ ಶ್ರೀ ಕುಕ್ಕಿಲ ಕೃಷ್ಣಭಟ್ಟರಿಂದ ಸಂಪಾದಿತವಾಗಿ ಮೈಸೂರಿನಲ್ಲಿ ಡಿ. ವಿ. ಕೆ. ಮೂರ್ತಿಯವರಿಂದ ಪ್ರಕಾಶಿಸಲ್ಪಟ್ಟಿರುವ ಛಂದೋಂಬುಧಿಯ ಪಂಚಮಾಧಿಕಾರದ ವಿವರಣಭಾಗದಿಂದ ಆಯ್ದುಕೊಳ್ಳಲಾಗಿದೆ.)

'ಸೀಸ' ಎಂಬ ಈ ಛಂದೋನಾಮವು 'ಶೀರ್ಷಕ' ಎಂಬ ಶಬ್ದದ ಅಪಭ್ರಂಶವೆಂದು ಹಲವರು ವಿದ್ವಾಂಸರು ಊಹಿಸಿರುತ್ತಾರೆ. ಜಯಕೀರ್ತಿಯ ಛಂದೋನುಶಾಸನದ ಇಪ್ಪತ್ತೆರಡನೆಯ ಪದ್ಯವೂ ಈ ಅಭಿಪ್ರಾಯವನ್ನು ಸಮರ್ಥಿಸುವಂತೆ ತೋರುತ್ತದೆ (ಕರ್ಣಾಟಕೇಽಕ್ಷರಾದ್ಯಾ ವಿಷಯೇ[ಂಧ್ರೇ] ಶೀರ್ಷಕಾದಿ ಜಾತಯ ಉದಿತಾಃ). 'ಸೀಸ' ಎಂಬೀ ಪದ್ಯಸ್ವರೂಪವು ಎಂದೂ ಒಂಟಿಯಾಗಿರದೆ ಅನುಬಂಧಿಯಾದೊಂದು ಭಾಗವನ್ನು ಪಡೆಯುತ್ತಿರುವುದರಿಂದ 'ಶೀರ್ಷಕ'ವೆಂಬ ಹೆಸರು ಇದಕ್ಕೆ ಬಂದಿರಬೇಕೆಂದು ಹೇಳಿದರೆ ತಪ್ಪಾಗಲಾರದು. 'ಸೀಸಕ' ಎಂಬುದು 'ಶೀರ್ಷಕ' ಎಂಬುದರ ತದ್ಭವರೂಪವೆಂಬುದರಲ್ಲಿ ಸಂದೇಹವಿಲ್ಲ. ಈ ಶಬ್ದಕ್ಕೆ ಶಿರಸ್ಸು, ಶಿರಸ್ತ್ರಾಣ, ಟೊಪ್ಪಿಗೆ ಇತ್ಯಾದಿ ಅರ್ಥಗಳಿವೆ. ಕರಿಮಣಿಗಳುಳ್ಳ ಚಿನ್ನದ ಕಂಠಹಾರಕ್ಕೆ ಕೇವಲ 'ಕರಿಮಣಿ' ಎಂಬ ಹೆಸರೇ (ದಕ್ಷಿಣಕನ್ನಡಿಗರಲ್ಲಿ) ರೂಢವಾಗಿರುವಂತೆ, ಸೀಸಕಯುಕ್ತವಾದುದೆಂಬ ಅರ್ಥದಲ್ಲಿ 'ಸೀಸಕ'ವೆಂಬ ರೂಪವೇ ಪ್ರಯುಕ್ತವಾಗುತ್ತಾ ಬಂದು ಕೊನೆಗೆ ಕಕಾರವನ್ನೂ ಕಳೆದುಕೊಂಡು ಕೇವಲ 'ಸೀಸ' ಎಂದಿಷ್ಟೇ ಉಳಿದು ರೂಢವಾಯಿತೆಂದು ಊಹಿಸಿದರೆ ಅಸಾಧುವೆನಿಸಲಾರದೆಂದು ನನಗೆ ತೋರುತ್ತದೆ.

ತೇಟಗೀತಿ ಆಟವೆಲದಿಗಳು ತಮಗಿಂತ ಬೃಹತ್ತರವಾದ ಸೀಸಪದ್ಯಕ್ಕೆ ಅನುಬಂಧಿಗಳಾದಂತೆಯೇ ತನಗಿಂತ ದೊಡ್ಡದೊಂದು ಛಂದೋಬಂಧಕ್ಕೆ ಅನುಬಂಧಿಯಾಗಿರುವ ಕಾರಣದಿಂದಲೇ ಪ್ರಸ್ತುತ ನಾವು ವಿಚಾರಿಸುತ್ತಿರುವ ಬಂಧಕ್ಕೆ 'ಛಂದೋವತಂಸ' (ಬೇರೊಂದು ಛಂದೋಬಂಧದ ಶಿಖೆ ಅಥವಾ ಶಿರೋಭೂಷಣ—ಎಂಬರ್ಥದಲ್ಲಿ) ಎಂಬೀ ಹೆಸರು ಬಂದಿರುವುದು ಸಂಭಾವ್ಯವಾಗಿ ಕಾಣುತ್ತದೆ. ಹಾಗಿದ್ದರೆ ಛಂದೋವತಂಸವು ಯಾವ ಬಂಧಕ್ಕೆ ಅನುಬಂಧಿಯಾಗಿದ್ದಿರಬಹುದು ?—ಇದೀಗ ವಿಚಾರಣೀಯ.

ಸೀಸಪದ್ಯದ ಸ್ವರೂಪವನ್ನು ಪರಾಮರ್ಶಿಸಿದರೆ ಛಂದೋವತಂಸವು ಯಾವುದರ 'ಶಿಬೆ'ಯಾಗಿದ್ದಿರಬಹುದೆಂಬುದು ಹೊಳೆಯುವಂತಿದೆ. ಸೀಸಪದ್ಯದ ಪಾದಗಳಲ್ಲಿ ಆರು ವಿಷ್ಣುಗಣಗಳು ಮತ್ತು ಎರಡು ಬ್ರಹ್ಮಗಣಗಳು ಕೂಡಿ ಎಂಟು ಗಣಗಳು ಇರುವವಷ್ಟೆ. ಹೆಚ್ಚುಕಡಮೆ ಸೀಸಪದ್ಯದ ಪರಿಮಾಣಕ್ಕೆ ತುಲ್ಯವೆನಿಸುವ ಕನ್ನಡದ ಪಿರಿಯಕ್ಕರದ ಪಾದಗಳಲ್ಲಿ ಒಂದು ಬ್ರಹ್ಮ, ಐದು ವಿಷ್ಣು, ಒಂದು ರುದ್ರ–ಹೀಗೆ ಒಟ್ಟು ಏಳು ಗಣಗಳಿರುತ್ತವೆ. ರುದ್ರಗಣಗಳು ಸಂಖ್ಯೆಯಲ್ಲಿ ಹದಿನಾರಾಗಿದ್ದರೂ ಅವುಗಳೊಳಗೆ ಎಂಟು ಗಣಗಳು ಬ್ರಹ್ಮಗಣದ್ವಂದ್ವಗಳೇ ಆಗಿವೆ. ಪಿರಿಯಕ್ಕರದ ಪಾದಗಳ ಕೊನೆಯ ರುದ್ರಗಣವು ಬ್ರಹ್ಮಗಣದ್ವಂದ್ವಸ್ವರೂಪವಾಗಿರುವಲ್ಲಿ ಅದರ ಪಾದಗಳ ಗಣಸಂಖ್ಯೆಯು ಎಂಟೆಂದೂ ಆಗುತ್ತದೆ. ಇದಲ್ಲದೆ ಪಿರಿಯಕ್ಕರದ ಪಾದಗಳ ಪ್ರಥಮಗಣವು ಬ್ರಹ್ಮಗಣವಾಗಿರಬೇಕೆಂಬ ನಿಯಮವಿರುವುದಾದರೂ ಪಂಪಾದಿಗಳು ಕೆಲವೆಡೆಗಳಲ್ಲಿ ಅದರ ಬದಲಾಗಿ ವಿಷ್ಣುಗಣವನ್ನು ಪ್ರಯೋಗಿಸಿದ್ದುಂಟು. ಉದಾ :—

ಸಿಲೆಯು ಮೇ।ಲಾದೊಡಂ । ಶಕುನಮಂ । ನಿಜಿಪಂತೆ । ನಿಜಿಸುವೆಂ ।
ಪಂದಿಯಂ । ನೀಂ ಮೆಚ್ಚಲುಂ ॥
(ಪಂಪಭಾರತ—5—46)

ಇಂತಹ ಪ್ರಯೋಗಗಳು ಪಿರಿಯಕ್ಕರದಲ್ಲಿ ಗ್ರಾಹ್ಯವೆಂದು ಜಯಕೀರ್ತಿಯೂ ಹೇಳುತ್ತಾನೆ. (ಪಾದಾದಿ ಪ್ರಭೃತೀತಿ ಕೇವಲಂ ಸ್ಮರಗಣ ಷಟ್ಕಯಂ ಬಾಣಾಂತಂ ಕೇಚಿದಾಹುಃ—ಛಂದೋನುಶಾಸನ : 7–8.) ಈ ದೃಷ್ಟಿಯಿಂದ ಪಿರಿಯಕ್ಕರವನ್ನೂ ಸೀಸಪದ್ಯವನ್ನೂ ಹೋಲಿಸಿ ನೋಡಿದರೆ ಮೂಲತಃ ಅವು ಅಭಿನ್ನವಾಗಿದ್ದುವೆಂಬುದು ನಮ್ಮ ಗೋಚರಕ್ಕೆ ಬರಬಹುದಾಗಿದೆ. [ಇಂದು ಸೀಸಪದ್ಯವು ಐದು ಮಾತ್ರೆಗಳ ಆವರ್ತದ ಧಾಟಿಯಲ್ಲಿ ನಡೆಯುವ ಪದ್ಯವೆನಿಸಿಕೊಂಡಿರುವುದಾದರೂ ಅದು ವಿಷ್ಣುಗಣಪ್ರಧಾನಬಂಧವೇ ಆಗಿರುವುದರಿಂದ, (ಅದರ ಪಾದಾಂತದ ಬ್ರಹ್ಮಗಣದ್ವಂದ್ವಗಳು ರುದ್ರಗಣಸ್ವರೂಪವಾಗಿರುವಲ್ಲಿ) ಈಗಲೂ ಕೂಡ ಪಿರಿಯಕ್ಕರದ ಧಾಟಿಯನ್ನೇ ಅಳವಡಿಸಿ–ಎಂದರೆ ಏಳು ಮಾತ್ರೆಗಳ ಆವರ್ತದ ವಿಶ್ರಭಾಪು ತಾಳದ ಧಾಟಿಯಲ್ಲಿ–ನಿರಾತಂಕವಾಗಿ ಅದನ್ನು ಪಠಿಸಬಹುದಾಗಿದೆಯೆಂಬುದೂ ಇಲ್ಲಿ ಲಕ್ಷಿಸತಕ್ಕದ್ದಾಗಿದೆ.]

ಸೀಸಪದ್ಯದ ಧಾಟಿಯೂ ಅದಕ್ಕೆ ಅನುಬಂಧಿಗಳಾಗಿ ಕಾಣಿಸಿಕೊಳ್ಳುವ ತೇಟಗೀತಿ ಆಟವೆಲದಿಗಳ ಧಾಟಿಯೂ ಪರಸ್ಪರ ಭಿನ್ನವಾಗಿರುತ್ತವೆಯಷ್ಟೆ. ಸೀಸದ ಧಾಟಿ ಐದು ಮಾತ್ರೆಗಳ ಆವರ್ತಗಳದು ; ತೇಟಗೀತಿ ಆಟವೆಲದಿಗಳ ಧಾಟಿ ನಾಲ್ಕು ಮಾತ್ರೆಗಳ ಆವರ್ತಗಳದು. ಇದೇ ಬಗೆಯ ಸಾಮ್ಯವನ್ನು ಪಿರಿಯಕ್ಕರ ಮತ್ತು ಛಂದೋವತಂಸಗಳನ್ನು ಹೋಲಿಸಿದಾಗಲೂ ನಾವು ಕಾಣಬಹುದು. ಪಿರಿಯಕ್ಕರವು

ವಿಷ್ಣುಧಾಟಿಯ ಬಂಧ. [ವಿಷ್ಣುಧಾಟಿ ದ್ವಿವಿಧವಾಗಿದೆ. ಸಹಜವಾಗಿ ಅದು ಆರು ಮಾತ್ರೆಗಳ ಆವರ್ತದ ಧಾಟಿ. 'ಕೋರೆ'ಯಾಗಿ—ಎಂದರೆ ಅಟ್ಟತಾಳದಲ್ಲಿ (=ಮಿಶ್ರಛಾಪು ತಾಳದಲ್ಲಿ) ಪಠಿಸಿದಾಗ ಏಳು ಮಾತ್ರೆಗಳ ಅಥವಾ ಮೂರೂವರೆ ಮಾತ್ರೆಗಳ ಆವರ್ತದ ಧಾಟಿ.] ಛಂದೋವತಂಸವಾದರೆ ಬ್ರಹ್ಮಧಾಟಿಯ ಬಂಧ–ಎಂದರೆ, ನಾಲ್ಕು ಮಾತ್ರೆಗಳ ಆವರ್ತದ ಬಂಧ ಎಂಬುದನ್ನು ಈ ಹಿಂದೆ ನಿದರ್ಶಿಸಲಾಗಿದೆಯಷ್ಟೆ. ಆದುದರಿಂದ ಆದಿಕಾಲಗಳಲ್ಲಿ ಛಂದೋವತಂಸವು ಪಿರಿಯಕ್ಕರದ ಅನುಬಂಧಿಯಾಗಿ ಪ್ರಯುಕ್ತವಾಗುತ್ತಿದ್ದಿರಬೇಕೆಂದೂ ಇದೇ ಕಾರಣದಿಂದ ಈ ಹೆಸರು ಅದಕ್ಕೆ ಬಂದುದೆಂದೂ, ಮತ್ತು 'ಪಿರಿಯಕ್ಕರ ಛಂದೋವತಂಸ'–ಎಂಬೀ ಯುಗ್ಮವೇ ಮಾತೃಕೆಯಾಗಿ 'ಸೀಸ ಮತ್ತು ಒಂದು ಗೀತಿ' ಎಂಬೀ ಯುಗ್ಮವು ತೆಲುಗಿನಲ್ಲಿ ಹುಟ್ಟಿ ಬಂದಿತೆಂದೂ ಊಹಿಸುವುದು ಸುಸಂಗತವಾಗಿದೆ.*

[ಇದು ಹೇಳಿ ಬರೆಯಿಸಿದ ಲೇಖನ. ಇದನ್ನು ಪ್ರೀತಿಯಿಂದ ಲಿಖಿಸಿದ ಶ್ರೀ ಪಾದೇಕಲ್ಲು ವಿಷ್ಣುಭಟ್ಟ, ಎಂ. ಎ.,—ಇವರಿಗೆ ನನ್ನ ಎದೆದುಂಬಿದ ಹರಕೆಗಳು. **—ಸೇಡಿಯಾಪು ಕೃಷ್ಣಭಟ್ಟ**—ತಾ॥ 4-9-1986]

---

* ಕೀ॥ ಶೇ॥ ಡಿ.ವಿ.ಜಿ.ಯವರು ರಚಿಸಿದ "ಬೇಲೂರಿನ ಶಿಲಾಬಾಲಿಕೆಯರು" ಎಂಬ ಕವನವು ಸೀಸಪದ್ಯದ ಚೌಕಟ್ಟಿನಲ್ಲಿ ರಚಿತವಾದ, ಐದು ಮಾತ್ರೆಗಳ ಆವರ್ತದ ಶುದ್ಧ ಮಾತ್ರಾಗಣಬಂಧ. ಇದೂ ಅಲ್ಲದೆ ಅದರ ಅನುಬಂಧಿ ಗೀತವೂ ಅದೇ ಧಾಟಿಯ–ಎಂದರೆ ಐದು ಮಾತ್ರೆಗಳ ಆವರ್ತದ ರಚನೆ. ಆದುದರಿಂದ ಅದನ್ನು ಸೀಸಪದ್ಯವೆಂದು ಕರೆಯುವುದು ಉಚಿತವೆನಿಸದು. ನಿಜಗುಣ ಶಿವಯೋಗಿ ತ್ರಿಪದಿಯ ಚೌಕಟ್ಟಿನಲ್ಲೊಂದು ಮಾತ್ರಾಬಂಧವನ್ನು ನಿರ್ಮಿಸಿ ಅದನ್ನು 'ತ್ರಿವಿಧಿ' ಎಂದು ಹೆಸರಿಸಿರುವಂತೆ, ಡಿ.ವಿ.ಜಿ.ಯವರ ರಚನೆಯನ್ನು 'ನೂತನ ಸೀಸ' ಎಂದು ಕರೆದರೆ ಒಪ್ಪಬಹುದಾಗಿದೆ.

# ನಾಲ್ಕು ವಿಚಾರಗಳು

—ಸಿ.ಪಿ.ಕೆ.

## ೧. "ಕೌಸಲ್ಯಾ ಸುಪ್ರಜಾ" ಎಂದರೇನು ?

ಇದು ವಾಲ್ಮೀಕಿ ರಾಮಾಯಣದ ಒಂದು ಸುಪ್ರಸಿದ್ಧ ಶ್ಲೋಕ:

ಕೌಸಲ್ಯಾ ಸುಪ್ರಜಾ ರಾಮ ಪೂರ್ವಾ ಸಂಧ್ಯಾ ಪ್ರವರ್ತತೇ ।
ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ ।

ಹೀಗೆಂದು ವಿಶ್ವಾಮಿತ್ರರು ರಾಮನನ್ನು ಎಬ್ಬಿಸಿದರಂತೆ. ಇಲ್ಲಿ "ಕೌಸಲ್ಯಾ ಸುಪ್ರಜಾ" ಎಂದರೇನು ? "ಕೌಸಲ್ಯಾದೇವಿಯ ಸತ್ಪುತ್ರನಾದ ರಾಮನೇ"[1] ಎಂಬ ಸಂಬೋಧನಾರ್ಥ ಇಲ್ಲಿರತಕ್ಕದ್ದು: ಬಹುತೇಕ ಎಲ್ಲರೂ ಇದೇ ಅರ್ಥವನ್ನು ಗ್ರಹಿಸಿರತಕ್ಕದ್ದು. ನಾನೂ ಹೀಗೆಂದೇ ಗ್ರಹಿಸಿ, ಈ ಶ್ಲೋಕದ ಸ್ವಾರಸ್ಯವನ್ನು ಒಂದೆಡೆ ವಿವರಿಸಿದ್ದೇನೆ.[2] ಅದನ್ನು ನೋಡಿದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ನನಗೆ ಬರೆದ ತಮ್ಮೊಂದು ಪತ್ರದಲ್ಲಿ ಹೀಗೆ ಬರೆದಿರುವುದು ಕುತೂಹಲಕರವಾಗಿದೆ:

"ಕೌಸಲ್ಯಾ ಸುಪ್ರಜಾ-ಕೌಸಲ್ಯೆಯ ಕುಮಾರನೇ ಎಂದು ಸಂಬೋಧನೆ ಅಲ್ಲ. ಅದು ಸಮಾಸಪದ ಅಲ್ಲ. 'ಕೌಸಲ್ಯೆ ಸುಪ್ರಜೆ' ಎಂದು ವಾಕ್ಯ. ಇದು ಹಿರಿಯರು ಹೇಳಿರುವ ಅರ್ಥ. ಇದು ಸರಿಯೇ ತಾವು ಯೋಚಿಸಬಹುದು."[3]

ಇದರಿಂದ, "ಕೌಸಲ್ಯಾ ಸುಪ್ರಜಾ" ಎಂಬುದಕ್ಕೆ (ರಾಮನನ್ನು ಪಡೆದು) ಕೌಸಲ್ಯೆ ಸುಪ್ರಜೆಯಾದಳು (ಎಂದರೆ, ಒಳ್ಳೆಯ ಮಗನನ್ನು ಪಡೆದವಳಾದಳು)" ಎಂದೂ ಅರ್ಥೈಸುವ ಸಂಪ್ರದಾಯವೊಂದುಂಟೆಂದು ತಿಳಿದುಬರುತ್ತದೆ.[3*] ಆದರೆ ಇದು ಪ್ರಬಲವಾಗಿರುವಂತೆ ತೋರುವುದಿಲ್ಲ. ಈ ರೀತಿ ಅರ್ಥ ಹೇಳುವುದು ವ್ಯಾಕರಣದ ಪ್ರಕಾರ ಸರಿಯಾಗಿಯೇ ಇರಬಹುದು. ಆದರೆ ಇದರಲ್ಲಿ ವಿಶೇಷವೇನೂ ಕಾಣುವುದಿಲ್ಲ. "ಕೌಸಲ್ಯೆಯ ಸತ್ಪುತ್ರನಾದ ರಾಮನೇ" ಎಂದು ಗ್ರಹಿಸಿದಾಗ, ಅದು ಹೆಚ್ಚು ಸಹಜವೂ ಧ್ವನಿಪೂರ್ಣವೂ ಆಗುವುದರಲ್ಲಿ ಸಂಶಯವಿಲ್ಲ. ಈ ರೂಢಿಯೇ ವ್ಯಾಪಕವಾಗಿರುವಾಗ, "ಕೌಸಲ್ಯೆಯ ಕುಮಾರನೇ" ಎಂದು ಸಂಬೋಧನೆ ಅಲ್ಲ" ಎಂಬ ಮಾಸ್ತಿಯವರ ಮಾತು ಅಷ್ಟೇನೂ ಗಟ್ಟಿಯಾದುದಲ್ಲ ವೆನ್ನಬೇಕು. ಆದರೆ "ಇದು ಸರಿಯೇ ತಾವು ಯೋಚಿಸಬಹುದು" ಎಂದು ನಿರ್ಣಯಸ್ವಾತಂತ್ರ್ಯವನ್ನು ಅವರು ನಮಗೇ ಬಿಟ್ಟಿರುವುದು ಅವರ ಔದಾರ್ಯದ ಲಕ್ಷಣ.

## ೨. "ಪರೀಷಹ ಜಯಮೆ ತಪಂ" : ಮೂಲಗಳು

"ಪರೀಷಹ ಜಯಮೆ ತಪಂ, ತಪಕೆ ಬೇಱೆ ಕೋಡೆರಡೊಳವೇ?" ಎಂಬ ಜನ್ನನ ಉಕ್ತಿ ('ಯಶೋಧರ ಚರಿತೆ', ೧.೪೯) ಸಾಕಷ್ಟು ಪ್ರಸಿದ್ಧವಾದುದು. ಇದು "ಕಿಂಚ ತೀವ್ರಂ ತಪಃ ಪ್ರಾಹುಃ ಪರೀಷಹ ಜಯಂ ಬುಧಾಃ" ಎಂಬ ವಾದಿರಾಜಕೃತ ಸಂಸ್ಕೃತ 'ಯಶೋಧರ ಚರಿತ'ದ (೧.೩೮) ಉಕ್ತಿಯ ಮಾರ್ದನಿ.

ವಾದಿರಾಜನ ಉಕ್ತಿಯೂ ಬೇರೊಂದು ಆಕರದಿಂದ ಬಂದಿರಬಹುದೆ? ಇದ್ದೀತು. ತಮಿಳಿನ 'ತಿರುಕ್ಕುಱಳ್'ನಲ್ಲಿ ಬರುವ ಈ ಹೇಳಿಕೆಯನ್ನು ನೋಡಿ :

ಉಱ್ಱನೋಯ್ ನೋನ್ಱಲ್ ಉಯಿರ್‌ಕ್ಕುಱುಕಣ್ ಶೆಯ್ಯಾಮೈ
ಉಱ್ಱೇ ತವತ್ತಿಱ್‌ಕುರು (೨೭ನೆಯ ಅಧ್ಯಾಯ : ತಪಸ್ಸು, ೨೬೧)

(ಬಂದ ನೋವನ್ನು ತಾಳಿಕೊಳ್ಳುವುದು, ಇತರ ಪ್ರಾಣಿಗಳಿಗೆ ದುಃಖವುಂಟುಮಾಡದಿರುವುದು—ಇವೇ ತಪಸ್ಸಿನ ಲಕ್ಷಣವೆನಿಸಿಕೊಳ್ಳುವುದು.)[4]

'ಬಂದ ನೋವು' ಜೈನಧರ್ಮದ ಪ್ರಕಾರ ಪರೀಷಹ ಎನಿಸಿಕೊಳ್ಳುತ್ತದೆ. ಈ ಪಾರಿಭಾಷಿಕ ಶಬ್ದವನ್ನು 'ತಿರುಕ್ಕುಱಳ್' ಕರ್ತೃ ತಿರುವಳ್ಳುವರ್ ಬಳಸಿಲ್ಲ; ಆದರೆ ವಾದಿರಾಜ ಮತ್ತು ಜನ್ನ ಬಳಸಿದ್ದಾರೆ. ಮೂವರ ಭಾವವೂ ಒಂದೇ.

ವಾದಿರಾಜ ಬಹುಶಃ ತಮಿಳ್ನಾಡಿನವನಾದ್ದರಿಂದ,[5] 'ಕುಱಳ್'ನ ಅಭಿಪ್ರಾಯವನ್ನು ಅವನು ಅನುವದಿಸಿರುವುದು ಸಾಧ್ಯ. 'ಕುಱಳ್' ಜೈನಧರ್ಮಸಂಬಂಧಿಯಾದ ಕೃತಿ ಎಂಬೊಂದು ಮತ ಇರುವುದನ್ನೂ ಇಲ್ಲಿ ಸ್ಮರಿಸಬಹುದು.

## ೩. ಪಂಪರಾಮಾಯಣದಲ್ಲಿ ಎರಡು ಕೋಡುಗಳು

"...ತಪಕೆ ಬೇಱೆ ಕೋಡೆರಡೊಳವೇ?" ಎಂಬ ಜನ್ನನ 'ಯಶೋಧರ ಚರಿತೆ'ಯ ಉಕ್ತಿ ಬಹು ಪರಿಚಿತವಾದುದು. ಆದರೆ ನಾಗಚಂದ್ರನ ಪಂಪರಾಮಾಯಣದಲ್ಲೂ ಒಂದೆಡೆ ಇಂಥದೇ ಮಾತು—ಎರಡು ಕೋಡುಗಳ ಪ್ರಸ್ತಾಪ—ಬರುತ್ತದೆಂಬುದು ಗಮನಾರ್ಹ :

ಭರತನೊಳತಿವೀರ್ಯಂ ಸಂ
ಗರಕ್ಕೆ ಮೇಲೆತ್ತಿ ಬಂದನೆಂಬಪವಾದಂ
ಪರೆವಂದು ರಘುಕುಲಕ್ಕದೆ
ಪರಾಭವಂ ಪರಿಭವಕ್ಕೆ ಕೋಡೆರಡೊಳವೇ (೮.೨೦)

ಜನ್ನನ ಮೇಲ್ಕಂಡ ಮಾತಿನಲ್ಲಿ ತಪಸ್ಸಿನ ಎರಡು ಬೇರೆ ಬೇರೆ ಕೋಡುಗಳು ಉಕ್ತವಾಗಿವೆಯೆಂದು ಎಂ. ಚಿದಾನಂದಮೂರ್ತಿಯವರ ವಾದ.[6] ಅದು ಸರಿಯಲ್ಲ ವೆಂದು ನಾನು ತೋರಿಸಿಕೊಟ್ಟಿದ್ದೇನೆ.[7] ನಾಗಚಂದ್ರನ ಪ್ರಕೃತ ಪದ್ಯ ನನ್ನ ನಿಲುವಿಗೆ ಪೋಷಕವಾಗಿದೆ. ಇಲ್ಲಿರತಕ್ಕದ್ದು ಒಂದೇ ವಿಷಯ : ಅಪವಾದ ; ಅದೇ ಪರಾಭವ. ಅದಕ್ಕೆ ಬೇರೆ ಎರಡು ಕೋಡುಗಳಿವೆಯೋ ಎಂದು ಕವಿ ಜನಜನಿತವಾದ ಒಂದು ನುಡಿಗಟ್ಟಿನ ಮೂಲಕ ಕೇಳುತ್ತಿದ್ದಾನೆ. ಎರಡು ಕೋಡು ಎಂಬುದು ಲೆಕ್ಕಾಚಾರದ ಉಕ್ತಿಯಲ್ಲ ; ಎರಡನ್ನೂ ಒಂದಾಗಿ ಭಾವಿಸುವ ರೂಢಿಯ ಮಾತಷ್ಟೆ. (ನಮ್ಮಲ್ಲಿ ರುವ ಅನೇಕ ಪ್ರಾಣಿಗಳಿಗೆ ಎರಡೆರಡು ಕೊಂಬುಗಳಿವೆ. ಒಂದೇ ಕೋಡಿನ ಖಡ್ಗ ಮೃಗ ನಮ್ಮಲ್ಲಿಲ್ಲ).

ಅಂತೂ 'ಎರಡು ಕೋಡು' ಎಂಬ ಮಾತು ಇಂದಿನಂತೆ ಹಿಂದೆಯೂ ಹೆಮ್ಮೆ ಯನ್ನು, ಪ್ರತಿಷ್ಠೆಯನ್ನು ಸೂಚಿಸುವ ಪಡೆಮಾತಾಗಿತ್ತೆಂಬುದು ನಿಶ್ಚಿತ. ಇಂಥ ಲೆಕ್ಕವಿಲ್ಲದಷ್ಟು ನುಡಿಗಟ್ಟುಗಳನ್ನು ನಮ್ಮ ಕವಿಗಳು ಜನಜೀವನದಿಂದೆತ್ತಿ ಬಳಸಿ ಕೊಂಡಿದ್ದಾರೆ.

## ೪. ರಾಘವಾಂಕ ಬರೆದದ್ದು 'ಹರಿಶ್ಚಂದ್ರ ಕಾವ್ಯ'ವೆ ?

ರಾಘವಾಂಕನ ಹರಿಶ್ಚಂದ್ರಸಂಬಂಧವಾದ ಕೃತಿಯನ್ನು ಎಲ್ಲ ವಿಮರ್ಶಕ, ವಿದ್ವಾಂಸರೂ 'ಹರಿಶ್ಚಂದ್ರ ಕಾವ್ಯ'ವೆಂದೇ ಕರೆಯುತ್ತ ಬಂದಿದ್ದಾರೆ. ವಾಸ್ತವವಾಗಿ, ಕವಿ ಕೊಟ್ಟ ಹೆಸರೇನು ?

ಕಾವ್ಯದ ಆರಂಭಭಾಗವನ್ನು ನೋಡಿ :

ಕೃತಿಗೆ ನಾಮಂ **ಹರಿಶ್ಚಂದ್ರ ಚಾರಿತ್ರ**ವೀ
ಕೃತಿಗೊಡೆಯನಮಳ ಪಂಪಾ ವಿರೂಪಾಕ್ಷ...(೧.೧೫)

ಅಂತ್ಯಭಾಗವನ್ನು ನೋಡಿ :

ಧರೆಯೊಳು **ಹರಿಶ್ಚಂದ್ರ ಚಾರಿತ್ರ**ಮಂ ಕೇಳ್ದ
ನರರೇಳು... (೧೪.೩೩)

ರಾಘವಾಂಕನ ಉಳಿದ ಕೃತಿಗಳು 'ವೀರೇಶ ಚರಿತೆ', 'ಸೋಮನಾಥ ಚಾರಿತ್ರ' ಮತ್ತು 'ಸಿದ್ಧರಾಮ ಚಾರಿತ್ರ'. ಹೀಗಿರುವಾಗ, ಹರಿಶ್ಚಂದ್ರನನ್ನು ಕುರಿತ ಕೃತಿ 'ಹರಿಶ್ಚಂದ್ರ ಕಾವ್ಯ'ವಾಗುವುದೆಂತು ? (ಪ್ರಾಯಃ ನಮ್ಮ ಯಾವ ಕವಿಯೂ ತನ್ನ ಕೃತಿಯ ಶೀರ್ಷಿಕೆಯಲ್ಲಿ 'ಕಾವ್ಯ' ಶಬ್ದವನ್ನು ಸೇರಿಸಿದಂತಿಲ್ಲ).[8]

ಮೊಟ್ಟಮೊದಲು 'ಹರಿಶ್ಚಂದ್ರ ಚಾರಿತ್ರ'ವನ್ನು 'ಹರಿಶ್ಚಂದ್ರ ಕಾವ್ಯ'ವಾಗಿಸಿದವರು 'ಕವಿಚರಿತೆ'ಕಾರರು. (ಮೂಲತಃ ಇದು ಹಸ್ತಪ್ರತಿಕಾರರು ಕೊಟ್ಟ ಶೀರ್ಷಿಕೆ ಇರಬೇಕು.)[9] ಅನಂತರ, ಈ ಕೃತಿಯನ್ನು ಸಂಪಾದಿಸಿದವರೆಲ್ಲರೂ ಇದನ್ನು 'ಹರಿಶ್ಚಂದ್ರ ಕಾವ್ಯ' ಎಂದೆ ಹೆಸರಿಸಿದರು ; ವಿಮರ್ಶಕರೂ ಹಾಗೆಂದೆ ಗ್ರಹಿಸಿದರು. ಸ್ವತಃ ಕವಿ ಇಟ್ಟ 'ಹರಿಶ್ಚಂದ್ರ ಚಾರಿತ್ರ' ಎಂಬ ಹೆಸರಿನ ಕಡೆಗೆ ಯಾರ ಲಕ್ಷ್ಯವೂ ಹೋಗಲಿಲ್ಲ. ತಪ್ಪು–ಸಣ್ಣದೇ ಇರಬಹುದು–ಪುನರಾವರ್ತನೆಗೊಳ್ಳುತ್ತ ಬಂತು. ಇದು ಆಶ್ಚರ್ಯಕರ.

"ಗತಾನುಗತಿಕೋ ಲೋಕಃ" ಎಂಬ ಸೂಕ್ತಿಗೆ ಇದೊಂದು ಒಳ್ಳೆಯ ಉದಾಹರಣೆಯಾದೀತು !

---

1. ಸಿ. ಎನ್. ಶ್ರೀನಿವಾಸ ಅಯ್ಯಂಗಾರ್ ಅವರ ಅನುವಾದ. ನೋಡಿ: 'ಕನ್ನಡ ವಾಲ್ಮೀಕಿ ರಾಮಾಯಣ', ಸಂಪುಟ ೧, ಪು. ೬೯. ದೇವಶಿಖಾಮಣಿ ಅಳಸಿಂಗರಾಚಾರ್ಯರೂ ಹೀಗೆಯೆ ಅನುವದಿಸಿದ್ದಾರೆ.

2. ನೋಡಿ: ಸಿ.ಪಿ.ಕೆ., 'ವಿಚಾರ ನಿಮಿಷ', ಪು. ೯೭.

3. ೨೬–೧೦–೭೯ರ ಪತ್ರ.

3* ಎಸ್. ರಂಗನಾಥಶರ್ಮರ ಭಾಷಾಂತರ ಇದಕ್ಕನುಗುಣವಾಗಿರುವುದು ಈಚೆಗೆ ನನ್ನ ಗಮನಕ್ಕೆ ಬಂದಿದೆ.

4. ಅನು: ಪಾ. ಶ. ಶ್ರೀನಿವಾಸ, 'ತಿರುಕ್ಕುರಳ್', ಪು. ೧೦೪.

5. ನೋಡಿ: K. Krishna Moorthy, 'Vadiraja's Yashodhara Carita', Introd., P. 17.

6. ನೋಡಿ: 'ಸಾಧನೆ' (ಮಂಥನ), ೫–೪.

7. ನೋಡಿ: ಸಿ.ಪಿ.ಕೆ., 'ಶೋಧನ', ಪು. ೨೨–೨೬.

8. ವಿಜಯ. ಪುರಾಣ. ಚಾರಿತ್ರ ಇತ್ಯಾದಿಗಳನ್ನು ನಮ್ಮವರು ಬೆರೆಸಿದ್ದು.

9. ಸಿದ್ಧನಂಜೇಶ ತನ್ನ 'ರಾಘವಾಂಕ ಚಾರಿತ್ರ'ದಲ್ಲಿ 'ಹರಿಶ್ಚಂದ್ರ ಕಾವ್ಯ' ಎಂದಿರುವುದು ಗಮನಾರ್ಹ.

# ಕನ್ನಡ – ತಮಿಳು*

—ಎಲ್. ಗುಂಡಪ್ಪ

ಕಣ್ಣುಡೈಯರ್ ಎನ್ಬವರ್ ಕಟ್ರೋರ್ ಮುಗತ್ತಿರಣ್ಡು
ಪುಣ್ಣುಡೈಯವರ್ ಕಲ್ಲಾದಾರ್ ॥
ಅಱಿವುಡೈಯಾರ್ ಎಲ್ಲಾಮ್ ಉಡೈಯಾರ್ ಅಱಿವಿಲಾರ್
ಎನ್ನುಡೈಯರೇನುಮ್ ಇಲರ್ ॥

ಇವು 2000 ವರ್ಷಗಳಷ್ಟು ಹಿಂದಿನ ತಮಿಳು ಪದ್ಯಗಳು. ಇವನ್ನೋದಿದಾಗ, ಕೇಳಿದಾಗ, ಕನ್ನಡದ ಕಿವಿಗಳಿಗೆ ಇವು ಕನ್ನಡವೇನೋ ಎನ್ನಿಸುತ್ತದೆ. ಹಳಗನ್ನಡದ ಪರಿಚಯವಿರುವವರಿಗೆ ಬಹುಮಟ್ಟಿಗೆ ಅರ್ಥವೂ ಆಗುತ್ತದೆ. ಇಲ್ಲಿರುವ ಪದಗಳೆಲ್ಲಾ ಅಲ್ಪಸ್ವಲ್ಪ ಮಾರ್ಪಟ್ಟು, ಈಗಲೂ ಕನ್ನಡದಲ್ಲಿ ಬಳಕೆಯಿವೆ.

ಕಣ್ಣು, ಉಡೈಯರ್ (ಒಡೆಯರ್), ಎನ್ಬವರ್ (ಎಂಬವರ್), ಕಟ್ರೋರ್ (ಕಲ್ತೋರ್, ಕಲ್ತವರ್), ಮುಗತ್ತು (ಮೊಗದ), ಇರಣ್ಡು (ಎರಡು), ಪುಣ್ಣು, ಕಲ್ಲಾದಾರ್ (ಕಲಿಯದರ್), ಅರಿವು, ಎಲ್ಲಾಮ್, ಇಲಾರ್, ಇಲರ್ (ಇಲ್ಲದರ್), ಎನ್ (ಏನ್).

"ಒರು ನಾಳ್ ಕಾಲೈ ವಾಲ್ಮೀಕಿ ರಿಷಿಯಿನ್ ಆಶೀರಮತ್ತುಕ್ಕು ನಾರದ ಮುನಿವರ್ ವನ್ದಾರ್. ವಾಲ್ಮೀಕಿ ರಿಷಿ ಅವರೈ ಉಪಚರಿತ್ತು ವಣಙ್ಗಿ, 'ಸಕಲಮುಮ್ ತೆರಿನ್ದ ನಾರದರೇ, ಇಂದ ಉಲಗತ್ತಿಲ್ ವೀರರ್ಗಳುಕ್ಕುಳ್ ಎಲ್ಲಾ ನಱ್ಕುಣಙ್ಗಳುಮ್ ಅಱಿವುಮ್ ಪೆಟ್ರ ಉತ್ತಮ ಪುರುಷನ್ ಯಾರ್? ಎನ್ಱು ಕೇಟ್ಟಾರ್".

[ಒಂದು ದಿನ ಬೆಳಿಗ್ಗೆ ವಾಲ್ಮೀಕಿ ಋಷಿಯ ಆಶ್ರಮಕ್ಕೆ ನಾರದ ಮುನಿಗಳು ಬಂದರು. ವಾಲ್ಮೀಕಿ ಋಷಿ ಅವರನ್ನು ಉಪಚರಿಸಿ ನಮಸ್ಕರಿಸಿ "ಸಕಲವನ್ನೂ ತಿಳಿದ ನಾರದರೇ, ಈ ಲೋಕದಲ್ಲಿ ವೀರರುಗಳಲ್ಲಿ ಎಲ್ಲಾ ಸದ್ಗುಣಗಳನ್ನೂ ಜ್ಞಾನವನ್ನೂ ಪಡೆದ ಉತ್ತಮ ಪುರುಷನು ಯಾರು?" ಎಂದು ಕೇಳಿದರು.]

ಇವು ಈಗಿನವರಾದ ದಿವಂಗತ ರಾಜಾಜಿಯವರು ರಚಿಸಿರುವ ರಾಮಾಯಣ ಕಥೆಯ ಎರಡು ವಾಕ್ಯಗಳು. ಇಲ್ಲಿ 'ಕಾಲೈ' 'ವಣಙ್ಗಿ' ಎಂಬ ಎರಡು ಪದಗಳು ಮಾತ್ರ ಕನ್ನಡಿಗರಿಗೆ ಅಪರಿಚಿತವಾದವು, ನಾಳ್ (ದಿನ) ಕನ್ನಡದಲ್ಲಿ 'ನಾಳೆ' ಆಗಿದೆ. ವನ್ದಾರ್ (ಬಂದರು), ತೆರಿನ್ದ (ತಿಳಿದ) ಎಂಬಂತೆ ಕೆಲವು ರೂಪದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಹೊಂದಿವೆ. ಒಟ್ಟಿನಲ್ಲಿ ಎಲ್ಲವೂ ಕನ್ನಡಿಗರಿಗೆ ಚೆನ್ನಾಗಿ ಅರ್ಥವಾಗುತ್ತದೆ.

---

* 17-11-1986ರಂದು ನಿಧನರಾದ ಹಿರಿಯ ವಿದ್ವಾಂಸ ಎಲ್. ಗುಂಡಪ್ಪನವರ ಸಂಸ್ಮರಣಾರ್ಥವಾಗಿ 'ಕೌಸ್ತುಭ' (ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವದ ಸಂಸ್ಮರಣ ಸಂಪುಟ) ದಲ್ಲಿ ಪ್ರಕಟವಾದ ಅವರ ಲೇಖನವನ್ನು ಇಲ್ಲಿ ಪುನರ್ಮುದ್ರಿಸಿದೆ. —ಸಂ.

ಈ ಕೆಲವು ವಾಕ್ಯಗಳನ್ನು ನೋಡಿ :

"ಇದರ್ಕೆ ನಲವೇಡುವೋನ್ ಪುಣ್ಯಭಾಗಿ ಅಕ್ಕೆ". "ಅಱಿಮೆನೆಂದುಪಾದೆಶಂ ಕೊಡುವೋರುಂ ಪಞ್ಚ ಮಹಾಪಾತಕರಪ್ಪಾರ್."

''ಸಿದ್ಧಸಮಯಂ ತಪ್ಪಾದೆ ನೋನ್ತಿನ್ಬಿನಿನ್ ಮುನಿವರನ್ ದೇವಲೋಕಕ್ಕೆ ಸಂದಾನ್'', ''ಕಟ್ವಿಪ್ಪಿನಾ ವೆಟ್ಟದುಳ್........ ಅವರ್ ಸ್ವರ್ಗಾಗ್ರಮಾನೇಱಿದಾರ್'', ''ಪಿಟ್ಟಿ ಇಟ್ಟಿ'', ''ಎಟ್ಟಿಕೋಳ್ ಇಲ್ಲೆ'', ''ಒಕ್ಕಲುಳ್ ಮಕ್ಕಳ್ ಪುಟ್ಟಿಲ್ಕ''.

ಇವು ತಮಿಳು ಮಾತುಗಳೆಂದು ತೋರುತ್ತದೆಯಲ್ಲವೆ ? ಅಲ್ಲ : ಇವು ತಮಿಳಲ್ಲ ; ಅಚ್ಚ ಕನ್ನಡ. ಸಾವಿರ ವರ್ಷಕ್ಕೂ ಹಿಂದಿನ ಕನ್ನಡ. ಶಾಸನಗಳಲ್ಲಿ ಸಿಕ್ಕುವ ಮಾತುಗಳು.

''ಸಮ್ಯಕ್ತ್ವಮನೊಡೆಯುನಾಗಿ,'' ''ಅಣುವ್ರತಂ ಮೊದಲಾಗೊಡೆಯು ಶ್ರಾವಕ ಬ್ರತಂಗಳಂ ಕೊಳಲಾಗ'', ''ತಾಯ್ ತಂದೆವಿರ ಕೇಳ್ವಿಯುಂ ಗೆಯ್ಯದೆ''.
''ಮೋದಾಳಿಯೊಳ್ ಮಱಿವಾಟುತ್ತಿರ್ಕುಂ''.

ಇವೂ ಸಾವಿರ ವರ್ಷಕ್ಕೂ ಹಿಂದಿನ ಕನ್ನಡ ಗ್ರಂಥವೊಂದರಲ್ಲಿರುವ ವಾಕ್ಯಖಂಡಗಳು.

'ಕಣ್ಣುಡೈಯರ್, ಪುಣ್ಣುಡೈಯರ್, ಅಱಿವುಡೈಯರ್'—ಎಂಬುವನ್ನೂ 'ಸಮ್ಯಕ್ತ್ವಮನೊಡೆಯುನ್, ಅಣುವ್ರತಂ ಮೊದಲಾಗೊಡೆಯು' ಎಂಬವನ್ನೂ ಹೋಲಿಸಿ. 'ಕಟ್ರೋರ್' ಮತ್ತು 'ನಲವೇಡುವೋನ್' — ರೂಪಸಾಮ್ಯವುಳ್ಳವಲ್ಲವೇ ?

ಬಂದೋರು, ಹೋದೋರು, ಇದ್ದೋರು, ಇಲ್ಲದೋರು — ಎಂಬಂಥ ರೂಪಗಳು ಕನ್ನಡ ಜನರ ಆಡುಮಾತಿನಲ್ಲಿ ಈಗಲೂ ಬಳಕೆಯಿವೆ. ಇವನ್ನು ಗಮನದಲ್ಲಿಟ್ಟುಕೊಂಡು, ಮೇಲೆ ಕೊಟ್ಟಿರುವ ಪುರಾತನ ತಮಿಳು ಪದ್ಯಗಳನ್ನು ಹಳೆಯ ಕನ್ನಡಕ್ಕೆ ಹೀಗೆ ತಿರುಗಿಸಬಹುದು :

ಕಣ್ಣೊಡೆಯರ್ ಎಂಬವರ್ ಕಲ್ತೋರ್ ಮೊಗದೆರಡು
ಪುಣ್ಣೊಡೆಯರ್ ಕಲಿಯದವರ್,
ಅಱಿವೊಡೆಯರ್ ಎಲ್ಲಾ ವೊಡೆಯರ್, ಅಱಿವಿಲ್ಲದರ್
ಏನೊಡೆಯುರಾದೊಡಂ ಇಲ್ಲದರ್.

ಆ ಕಾಲದ ಕನ್ನಡ–ಅದರಲ್ಲೂ ಕನ್ನಡ ತಮಿಳು ಗಡಿನಾಡಿನ ಜನರ ಬಳಕೆಯ ಕನ್ನಡ–ಹೀಗೆ ತಮಿಳು ಕನ್ನಡಗಳ ಮಿಶ್ರಣವಾಗಿದ್ದಿರಬೇಕು. ಪೂರ್ವದ ಹಳಗನ್ನಡವೆಂದು ಕರೆಯುವ ಈ ಭಾಷಾರೂಪವನ್ನು 'ಕನ್ನಮಿಳು' ಎಂದೋ 'ತಮಿಳ್ಕನ್ನಡ' ಎಂದೋ ಕರೆದರೂ ಹೊಂದುತ್ತದೆ.

ಇದರಿಂದ, ಕನ್ನಡ ತಮಿಳುಗಳು ಒಂದು ಮರದ ಎರಡು ಕೊಂಬೆಗಳ ಹಾಗೆ ವಿಶೇಷ ಸಾಮ್ಯವುಳ್ಳವು—ಎಂದು ಸ್ಪಷ್ಟವಾಗುತ್ತದೆ. ಮೂಲದ್ರಾವಿಡ ಭಾಷೆಯು

ಬಹು ಹತ್ತಿರದ ಶಾಖೆಗಳು ಇವು. ಎಷ್ಟೋ ಶಬ್ದಗಳು ಕನ್ನಡ ತಮಿಳುಗಳೆರಡ ರಲ್ಲಿಯೂ ರೂಪಭೇದ ಅರ್ಥಭೇದಗಳಿಲ್ಲದೆ ಒಂದೇ ರೀತಿ ಪ್ರಯೋಗವಾಗುತ್ತವೆ. ಮತ್ತೆ ಕೆಲವು ಅಲ್ಪ ಸ್ವಲ್ಪ ಮಾರ್ಪಟ್ಟು ಬೇರೆ ರೂಪ ತಾಳಿವೆ. ಉದಾ :

1. ಮಾರ್ಪಾಟಿಲ್ಲದೆ ಒಂದೇ ರೀತಿ ಪ್ರಯೋಗವಾಗುವುವು : ತಾಯ್, ಪೆಣ್, ಅಡಿ, ಮುಡಿ, ಕಣ್, ಕಾಲ್, ಮಣ್, ನೀರ್, ಪಗಲ್, ಆಡು, ಪುಲಿ, ಪೊನ್, ಪಱ, ಅಱು, ಅಱಿವು–ಮೊದಲಾದ ನಾಮವಾಚಕಗಳು. ನಾನ್, ನೀನ್, ಅದು, ಇದು – ಮೊದಲಾದ ಸರ್ವನಾಮಗಳು. ನಲ್, ನೇರ್, ತಣ್, ನುಣ್, ಪೞ, ಮೆಲ್, ಇನಿಯ – ಮೊದಲಾದ ಗುಣವಾಚಕಗಳು. ಅಡು, ಅಱಿ, ಓದು, ಓಡು, ಕಡಿ, ಕುಡಿ, ನಂಬು–ಮೊದಲಾದ ಧಾತುಗಳು. ಅಱು, ಏೞ್, ಪತ್ತು, ನೂಱು–ನೊದಲಾದ ಸಂಖ್ಯಾವಾಚಕಗಳು. ಉಂ, ಪಿನ್, ಪೋಲ್–ಮೊದಲಾದ ಅವ್ಯಯಗಳು. –ಇನ್, –ಉಳ್, –ಅಂ, –ಪು—ಮೊದಲಾದ ಪ್ರತ್ಯಯಗಳು.

2. ಅಲ್ಪ ಸ್ವಲ್ಪ ಮಾರ್ಪಟ್ಟಿರುವುವು : ತನ್ದೆ, ತನ್ದೈ ; ಅರ್ಬಿ, ಅರುವಿ; ಒಡಲ್, ಉಡಲ್ ; ಕಱು, ಕನ್ಱು ; ಅವ್ವ, ಅವ್ವೈ ; ಬೆಳ್, ವೆಳ್ ; ಕಿಱು, ಶಿಱು; ಆರೈ, ಆರಾಯ್ ; ಒಂದು, ಒನ್ಱು ; ಎರಡು, ಇಱನ್ಡು ; ಅಂದು, ಅನ್ಱು ; ಸಲೆ, ಶಾಲ ; ಬರ್ಪುದುಂ, ವರುವುದುಮ್—ಮೊದಲಾದುವು.

3. ಕೆಲವು ವೇಳೆ ಮೂಲದಲ್ಲಿ ಸಂಬಂಧವಿದ್ದರೂ ಒಂದೊಂದು ಭಾಷೆಯಲ್ಲಿ ಒಂದೊಂದು ರೀತಿ ಅರ್ಥ ಬೆಳೆದಿರುವುದುಂಟು : (ಕನ್ನಡ) ನೆಗೞ್-ನಡೆ, ಮಾಡು, ಪ್ರಸಿದ್ಧಿ ಪಡೆ : (ತಮಿಳು) ನಿಗೞ್-ಆಗು, ಪ್ರಕಾಶಿಸು. (ಕ) ಪಾರ್–ಹಾರೈಸು, ನಿರೀಕ್ಷೆಯಲ್ಲಿರು ; (ತ) ನೋಡು. (ಕ) ಕುತ್ತಂ–ರೋಗ, ಸಂಕಟ ; (ತ) ಕುಟ್ರಮ್-ದೋಷ. (ಕ) ನೆತ್ತಿ-ತಲೆಯ ಮೇಲ್ಭಾಗ ; (ತ)ನೆಟ್ರಿ-ಹಣೆ. (ಕ) ಪಱಮೆ-ದುಂಬಿ; (ತ) ಪಱವೈ-ಹಕ್ಕಿ (ಕೆಲವು ವೇಳೆ ದುಂಬಿ ಎಂದು ಬಳಸಿರುವುದೂ ಉಂಟು. ಕನ್ನಡದಲ್ಲಿ ಮೂಲಾರ್ಥ ಮರೆಯಾಗಿ ಹಕ್ಕಿಯಂತೆ ರೆಕ್ಕೆಯುಳ್ಳ 'ದುಂಬಿ' ಎಂಬ ಅರ್ಥವೇ ರೂಢಿಯಾಗಿದೆ. ತಮಿಳಿನಲ್ಲೂ ಮೂಲಾರ್ಥ ಮರೆಯಾಗಿರುವ ಸಂದರ್ಭ ವುಂಟು). (ಕ) ಅಗಿ-'ಹಲ್ಲಿನಿಂದ ಅರೆದು ನುರಿಸು' ಎಂದಿದ್ದರೆ, (ತ) ಅಯಿಲ್-ತಿನ್ನು ಎಂದು ಮಾತ್ರ ಪ್ರಯೋಗವಾಗುತ್ತದೆ.

ಮೇಲೆ ವಿವರಿಸಿರುವಂತೆ ಕನ್ನಡ ತಮಿಳು ಭಾಷೆಗಳಲ್ಲಿ ಬಹುಪಾಲು ಶಬ್ದಗಳು ರೂಪಸಾಮ್ಯ ಅರ್ಥಸಾಮ್ಯವುಳ್ಳದಾಗಿರುವುದು ಮಾತ್ರವೇ ಅಲ್ಲ. ಪ್ರಕೃತಿ ಪ್ರತ್ಯಯಗಳು ಸೇರುವಾಗಲೂ ಸಂಧಿಸಮಾಸಗಳಲ್ಲಿಯೂ. ಅವು ಮಾರ್ಪಡುವ ರೀತಿಯಲ್ಲಿ ಕೂಡ ಸಾಮ್ಯವಿರುವುದು ಕಾಣುತ್ತದೆ. ಇಷ್ಟೇ ಅಲ್ಲದೆ ವ್ಯಾಕರಣ ಪ್ರಕ್ರಿಯೆ. ನುಡಿಗಟ್ಟು, ಭಾಷಾಮರ್ಯಾದೆ ಇವು ಎರಡರಲ್ಲೂ ಒಂದೇ ಬಗೆ ಯಾಗಿವೆ.

ಒಂದೇ ಭಾಷೆಯಲ್ಲಿ ಕಾಲಕ್ರಮಗಳಲ್ಲಿ ಮಾರ್ಪಾಟಾಗುತ್ತಲೇ ಇರುತ್ತವೆ. ಪ್ರಾಂತಭೇದವೂ ಅನ್ಯಭಾಷಾಸಂಪರ್ಕವೂ ಈ ಮಾರ್ಪಾಟನ್ನು ತೀವ್ರಗೊಳಿಸುತ್ತವೆ. ಒಂದೇ ಆಗಿದ್ದ ಮೂಲದ್ರಾವಿಡವು ತಮಿಳು, ಕನ್ನಡ, ತೆಲುಗು, ಮಲೆಯಾಳ ಮೊದಲಾದ ಹಲವು ಭಾಷೆಗಳಾಗಿ ರೂಪಗೊಂಡದ್ದು ಹೀಗೆ. ಕನ್ನಡವೂ ಈ ರೀತಿಯ ಮಾರ್ಪಾಟಿಗೊಳಗಾಗಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಹೊಸಗನ್ನಡ ಎಂಬ ರೂಪಗಳನ್ನು ಪಡೆದಿದೆ.

ತಮಿಳು ಮೂಲದ್ರಾವಿಡದ ಲಕ್ಷಣಗಳನ್ನು ಉಳಿದೆಲ್ಲ ದ್ರಾವಿಡ ಭಾಷೆಗಳಿಗಿಂತಲೂ ಹೆಚ್ಚಾಗಿ ಉಳಿಸಿಕೊಂಡಿದೆಯೆಂದು ಹೇಳಬಹುದು. ಹೊರಗಿನ ಪ್ರಭಾವಗಳನ್ನು ಸುಲಭವಾಗಿ ಸ್ವೀಕರಿಸದೆ ತಮ್ಮತನವನ್ನು ಪಟ್ಟುಹಿಡಿದು ಕಾಪಾಡಿಕೊಳ್ಳುವುದು ತಮಿಳಿನವರ ಸ್ವಭಾವವೆಂದು ತೋರುತ್ತದೆ. ಕನ್ನಡ ತೆಲುಗು ಮಲೆಯಾಳಗಳು ಲೋಕಪ್ರಸಿದ್ಧವಾದ ಸಂಸ್ಕೃತದ ಶಬ್ದಭಂಡಾರವನ್ನೂ ಭಾವಸಮೃದ್ಧಿಯನ್ನೂ ರಚನಾವಿಶೇಷವನ್ನೂ ನಿಶ್ಶಂಕೆಯಿಂದ ನಿರರ್ಗಳವಾಗಿ ಉಪಯೋಗಿಸಿಕೊಂಡಿವೆ. ತಮಿಳು ಬಹು ಸಂಯಮದಿಂದ ಅತ್ಯಂತ ಮಿತವಾಗಿ ಈ ಎರವಲನ್ನು ಪಡೆದುಕೊಂಡಿದೆ. ಶಾಸ್ತ್ರಪರಿಭಾಷೆಗೆ ಕೂಡ ಸ್ವಾವಲಂಬನೆಯಿಂದಲೇ ಶಬ್ದಗಳನ್ನು ಸೃಷ್ಟಿಸಿಕೊಂಡಿದೆ. ಕೆಲವು ವೇಳೆ ಸಂಸ್ಕೃತ ಶಬ್ದಗಳನ್ನು ತೆಗೆದುಕೊಂಡಾಗಲೂ ಅವನ್ನು ತನ್ನ ಜಾಯಮಾನಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡು ಬಳಸುತ್ತಿದೆ.

ವ್ಯಾಕರಣ, ಛಂದಸ್ಸು, ಅಲಂಕಾರ, ಅಕ್ಷರ, ಸಂಧಿ, ಸಮಾಸ, ಧರ್ಮ, ಕರ್ಮ, ಭಕ್ತಿ, ಜ್ಞಾನ, ವೈರಾಗ್ಯ, ಅನುಗ್ರಹ, ಬಂಧ, ಮುಕ್ತಿ, ಮೋಕ್ಷ—ಈ ಮೊದಲಾದ ಸಂಸ್ಕೃತ ಶಬ್ದಗಳು ಕನ್ನಡದಲ್ಲಿ ಧಾರಾಳವಾಗಿ ಪ್ರಯೋಗವಾಗುತ್ತವೆ. ತಮಿಳಿನಲ್ಲಾದರೋ—ಯಾಪ್ಪು, ಅಣಿ, ಎಟುತ್ತು, ಉಯಿರ್, ಮೆಯ್, ವೇಟ್ರುಮೈ, ಪುಣರ್ಚಿ, ತೊಗೈ, ಅಱಮ್, ವಿನೈ, ಅನ್ಬು, ಅಱಿವು, ತುಱವು (ವೈರಾಗ್ಯ, ಸಂನ್ಯಾಸ), ಅರುಳ್, ಕಟ್ಟು, ವೀಡು—ಮುಂತಾದ ಅಚ್ಚ ದ್ರಾವಿಡ ಶಬ್ದಗಳೇ ಮೇಲಿಂದ ಮೇಲೆ ಕಾಣಬರುತ್ತವೆ. ತರುಮಮ್ (ಧರ್ಮ), ಕರುಮಮ್ (ಕರ್ಮ), ಪತ್ತಿ (ಭಕ್ತಿ), ಞಾನಮ್ (ಜ್ಞಾನ), ಇಲಕ್ಕಣಮ್ (ಲಕ್ಷಣ, ವ್ಯಾಕರಣ)—ಮೊದಲಾಗಿ ಮಾರ್ಪಟ್ಟ ರೂಪಗಳಲ್ಲಿ ಸಂಸ್ಕೃತ ಶಬ್ದಗಳನ್ನು ಆಗೊಮ್ಮೆ ಈಗೊಮ್ಮೆ ಬಳಸುವುದುಂಟು. ಉದ್ದಾಮ ಸಂಸ್ಕೃತ ವಿದ್ವಾಂಸರೂ ಕೂಡ ತಮಿಳಿನಲ್ಲಿ ಬರೆಯುವಾಗ ಸಂಸ್ಕೃತ ಶಬ್ದಗಳನ್ನು ಅತಿಯಾಗಿ ಬೆರಸದೆ ಅಚ್ಚ ತಮಿಳನ್ನೇ ವಿಶೇಷವಾಗಿ ಬಳಸುತ್ತಾರೆ.

ಇವನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡೋ ಏನೋ, 'ಕನ್ನಡ ತಮಿಳಿನಿಂದ ಹುಟ್ಟಿತು' ಎನ್ನುವವರೂ ಇದ್ದಾರೆ. ಹಾಗೆ ಹೇಳುವವರು ಕನ್ನಡವನ್ನು ಚೆನ್ನಾಗಿ ಅರಿತವರಲ್ಲ. ದ್ರಾವಿಡ ಭಾಷಾಶಾಸ್ತ್ರ ವಿಷಯದಲ್ಲಿ ಮೊದಮೊದಲು ಕೃಷಿ ಮಾಡಿದ ಕಾಲ್ಡ್‌ವೆಲ್ ಮೊದಲಾದವರು ತಮಿಳನ್ನು ಚೆನ್ನಾಗಿ ಬಲ್ಲವರಾಗಿದ್ದು

ಕನ್ನಡ ತೆಲುಗುಗಳ ಪರಿಚಯ ಅಷ್ಟಾಗಿ ಇಲ್ಲದ್ದರಿಂದ ಈ ಭಾವನೆಗೆ ಕಾರಣವಾಗಿರಬೇಕು.

ತಮಿಳು ಕೈಬಿಟ್ಟ ಪ್ರಾಚೀನ ರೂಪಗಳನ್ನು ಕನ್ನಡ ಉಳಿಸಿಕೊಂಡು ಬಂದಿರುವುದೂ ಕಂಡುಬರುತ್ತದೆ. ಉದಾಹರಣೆಗೆ: ಭಾಷಾಶಾಸ್ತ್ರದ ಪ್ರಕಾರ 'ಕ' ವರ್ಗ 'ಚ' ವರ್ಗಕ್ಕಿಂತ ಹಿಂದಿನದು. ಎಷ್ಟೋ ಶಬ್ದಗಳಲ್ಲಿ 'ಕ' ವರ್ಗಾಕ್ಷರವಿರಬೇಕಾದೆಡೆ ತಮಿಳಿನಲ್ಲಿ 'ಚ'ಕಾರ (ಉಚ್ಚಾರ 'ಶ') ಪ್ರಯೋಗವಾಗುತ್ತಿದೆ: (ಕ) ಕಿಱಿದು, (ತ) ಶಿಱಿದು; (ಕ) ಕಿದಱು, (ತ) ಶಿದಱು; (ಕ) ಕೆಸಱು, (ತ) ಶೇಱು; (ಕ) ಕೆರ್ಪು, (ತ) ಶೆರುಪ್ಪು—ಇವೇ ಮೊದಲಾದುವು.

ಸಾಹಿತ್ಯ ಕ್ಷೇತ್ರದಲ್ಲೂ ಕನ್ನಡ ತಮಿಳುಗಳ ಬಾಂಧವ್ಯ ಗಾಢವಾಗಿದೆ. ಜನಪದ ಸಾಹಿತ್ಯದಲ್ಲಿ ತಾನೇತಾನಾಗಿ, ಅಚ್ಚಗನ್ನಡದ ಸಾರ್ವಭೌಮ ಛಂದಸ್ಸು ಎನಿಸಿದ 'ತ್ರಿಪದಿ' ತಮಿಳು 'ಕುಱಳ್'ನ ಒಡಹುಟ್ಟು. ಹರಿಹರನ ಕೃತಿಗಳಲ್ಲಿ ನಾನಾ ಗತಿಗಳಲ್ಲಿ ನರ್ತಿಸುತ್ತಿರುವ 'ರಗಳೆ', ತಮಿಳು 'ಅಗವಱ್ಪಾ'ವಿನ (ಅಗವಲ್ ಛಂದಸ್ಸಿನ) ಪ್ರತಿಬಿಂಬ. ಅಕ್ಕರ ವೃತ್ತ ಜಾತಿಗೂ ತಮಿಳು 'ಅಶಿರಿಯಪ್ಪಾ'ವಿಗೂ ಸಂಬಂಧವಿರುವಂತೆ ತೋರುತ್ತದೆ.

ರಾಮಾಯಣ ಮಹಾಭಾರತಾದಿ ಪ್ರಸಿದ್ಧ ಗ್ರಂಥಗಳು ಎಲ್ಲಾ ದೇಶಭಾಷೆಗಳಲ್ಲೂ ದೊರೆಯುತ್ತವೆಯಷ್ಟೆ. ಮೂಲ ಸಂಸ್ಕೃತದಲ್ಲಿಲ್ಲದ ಕೆಲವು ಸಂಗತಿಗಳು ಈ ಗ್ರಂಥಗಳಲ್ಲಿ ಅಲ್ಲಲ್ಲಿ ಸೇರಿರಬಹುದು. ಅಂಥ ಸಂದರ್ಭಗಳಲ್ಲಿ ದ್ರಾವಿಡ ಭಾಷಾಸಾಹಿತ್ಯಗಳಲ್ಲಿ ಅವಕ್ಕೆ ಆಕರ ದೊರೆಯಲೂಬಹುದು.

ಉದಾಹರಣೆಗೆ ಪಂಪಭಾರತದಲ್ಲಿ ಭಾನುಮತಿ ನೆತ್ತವಾಡಿ ಸೋತ ಒಂದು ಪ್ರಸಂಗ ಬರುತ್ತದೆ (ಆ. 9–69). ಅವಳೊಡನೆ ಆಡುತ್ತಿದ್ದವರು ಯಾರು ಎಂಬುದು ಅಲ್ಲಿ ಸಂದಿಗ್ಧವಾಗಿದೆ. ಅದರ ವಿವರಣೆ ಕನ್ನಡದಲ್ಲಿ ಒಂದು ದೊಡ್ಡ ಚರ್ಚೆಗೇ ಕಾರಣವಾಯಿತು. ತಮಿಳಿನ ವಿಲ್ಲಿಪುತ್ತೂರ ಭಾರತದಲ್ಲಿ ಅದೇ ಸನ್ನಿವೇಶ ವರ್ಣಿತವಾಗಿದೆ. ಆಡುತ್ತಿದ್ದವನು ಕರ್ಣನೆಂದೂ ದುರ್ಯೋಧನ ಸುಮ್ಮನೆ ನೋಡುತ್ತಿದ್ದನೆಂದೂ ಅಲ್ಲಿ ನಿಸ್ಸಂದಿಗ್ಧವಾಗಿ ಹೇಳಿದೆ.

ತಮಿಳಿನಲ್ಲಿ ಅನುವಾದ ಅನುಕರಣೆಗಳಿಲ್ಲದ ಸ್ವತಂತ್ರ ಸಾಹಿತ್ಯವೂ ವಿಪುಲವಾಗಿದೆ. ಅವುಗಳ ಕಥೆ. ವರ್ಣನೆ. ಅಲ್ಲಿನ ಜೀವನಚಿತ್ರ, ಸಮಾಜ ಸ್ವರೂಪ—ಎಲ್ಲಾ ಒಂದು ಹೊಸ ಕಳೆಯಿಂದ ಹೊಳೆಯುತ್ತದೆ.

ಕನ್ನಡ-ತಮಿಳು ಸಾಹಿತ್ಯಗಳನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡುವುದು ಉಭಯ ಭಾಷೆಗಳ ಪಂಡಿತರಿಗೂ ಬಹು ಲಾಭದಾಯಕವಾಗುವುದೆಂಬುದರಲ್ಲಿ ಸಂಶಯವಿಲ್ಲ.

**ಕೊಳುಕೊಡೆ**

ಒಂದೇ ಮೂಲದ ಎರಡು ಶಾಖೆಗಳಾಗಿ ಅಕ್ಕಪಕ್ಕದಲ್ಲಿ ಪ್ರಚಲಿತವಾಗಿರುವ

ಈ ಎರಡು ಭಾಷೆಗಳಲ್ಲೂ ಪರಸ್ಪರ ಕೊಳುಕೊಡೆಗಳಾಗಿರುವುದು ಅಸಹಜವಲ್ಲ. ಆದರೆ ಆದಿಕಾಲದಿಂದ ಇದುವರೆಗೆ ಆಗಿರಬಹುದಾದ ಕೊಳುಕೊಡೆಗಳ ಬಗ್ಗೆ ಎರಡು ಭಾಷಾಸಾಹಿತ್ಯಗಳನ್ನೂ ಆಳವಾಗಿ ಅಭ್ಯಾಸಮಾಡಿ ಬಲ್ಲವರು ವಿಚಾರಮಾಡಿ ನಿರ್ಧರಿಸಬೇಕಾಗಿದೆ. ಈಗ ತಿಳಿದುಬಂದಿರುವ ಒಂದೆರಡು ಸಂಗತಿಗಳನ್ನು ಮಾತ್ರ ಇಲ್ಲಿ ಸೂಚಿಸಬಹುದು.

ಕನ್ನಡದ ಪ್ರಸಿದ್ಧ ಕವಿಗಳಲ್ಲೊಬ್ಬನಾದ ಹರಿಹರನು ರಚಿಸಿರುವ 'ಪುರಾತನ 'ರಗಳೆ'ಗಳ ನಾಯಕರೆಲ್ಲ ತಮಿಳುನಾಡಿನ ಶಿವಭಕ್ತರು. ತಮಿಳಿನಲ್ಲಿ ಅವರ ಚರಿತ್ರೆ 'ಪೆರಿಯ ಪುರಾಣಮ್' ಎಂಬ ಪ್ರಸಿದ್ಧ ಕಾವ್ಯದಲ್ಲಿ ವಿಶದವಾಗಿ ನಿರೂಪಿತವಾಗಿದೆ. ಅದು ಹರಿಹರನಿಗಿಂತ ಸ್ವಲ್ಪ ಹಿಂದಿನ ಗ್ರಂಥ. ಇದಲ್ಲದೆ, ತೇವಾರ ಗೀತಗಳೂ ಸ್ಥಳೀಯ ಐತಿಹ್ಯಗಳೂ ಅವರ ಬಗ್ಗೆ ವಿಷಯ ತಿಳಿಸುತ್ತವೆ. ಇವನ್ನೆಲ್ಲ ಬಳಸಿ ಕೊಂಡು, ಹರಿಹರ ರಗಳೆಗಳನ್ನು ರಚಿಸಿದ್ದಾನೆಂದು ತೋರುತ್ತದೆ. ತಮಿಳು ಮೂಲಗಳಿಂದ ವಿಷಯಗಳನ್ನು ಮಾತ್ರ ಸಂಗ್ರಹಿಸಿದ್ದಾನೋ, ವರ್ಣನೆ ನಿರೂಪಣೆ ಮೊದಲಾದ ವಿವರಗಳನ್ನೂ ಭಾಷಾಂತರಿಸಿದ್ದಾನೋ ಎಂಬುದನ್ನು ಇನ್ನುಮೇಲೆ ವಿಮರ್ಶಿಸಿ ಒರೆಹಚ್ಚಬೇಕಾಗಿದೆ.

ಕನ್ನಡದ ಪ್ರಸಿದ್ಧ ಚಂಪು 'ರಾಜಶೇಖರ ವಿಳಾಸ'ದ ವಸ್ತು ಗುಬ್ಬಿ ಮಲ್ಲಣಾರ್ಯನ 'ಭಾವಚಿಂತಾರತ್ನ'ದಿಂದ ತೆಗೆದುಕೊಂಡದ್ದು. 'ಭಾವಚಿಂತಾರತ್ನ'ದ ಕಥೆ ತಮಿಳು ಮೂಲದ್ದಂತೆ. ತಿರುಜ್ಞಾನ ಸಂಬಂಧರು ಕುಲಚ್ಚರಿಯನಿಗೆ ಉಪದೇಶ ಮಾಡುವಾಗ ಆ ಕಥೆಯನ್ನು ಉದಾಹರಿಸಿದರೆಂದು ಅಲ್ಲಿ ಹೇಳಿದೆ. ಆದರೆ ತಮಿಳು ಮೂಲದಲ್ಲಿ (ಉದಾ: ಪೆರಿಯಪುರಾಣದಲ್ಲಿ) ಆ ಸಂದರ್ಭದಲ್ಲಿ ಆ ಕಥೆಯಿಲ್ಲ. ಅದಕ್ಕೆ ಬದಲಾಗಿ ತಿರುವಾರೂರ ಮಹಿಮೆಯನ್ನು ವರ್ಣಿಸುವಾಗ ಮನುಚೋಳನ ಕಥೆಯಲ್ಲಿ ಇಂಥ ಸನ್ನಿವೇಶ ಕಂಡುಬರುತ್ತದೆ. ರಾಜಪುತ್ರನ ರಥದ ಗಾಲಿಗೆ ಸಿಕ್ಕಿ ಕರು ಸಾಯಲು, ತಾಯಿಹಸು ಹೋಗಿ ಅರಮನೆಯ ಕರೆಗಂಟೆಯನ್ನೆಳೆದು ರಾಜನಿಗೆ ದೂರಿಕ್ಕಿತೆಂದೂ, ನಡೆದದ್ದನ್ನು ವಿಚಾರಿಸಿ ತಿಳಿದು ರಾಜ ತನ್ನ ಒಬ್ಬನೇ ಮಗನಾದ ಯುವರಾಜನನ್ನು ಅದೇ ಸ್ಥಳದಲ್ಲಿ ಮಲಗಿಸಿ ಅವನ ಮೇಲೆ ರಥ ನಡಸಿದನೆಂದೂ, ಆಗ ಶಿವ ಪ್ರತ್ಯಕ್ಷನಾಗಿ ಅನುಗ್ರಹ ತೋರಿದನೆಂದೂ, ಸತ್ತ ಕರುವೂ ರಾಜಪುತ್ರನೂ ಜೀವಗೊಂಡು ಎದ್ದರೆಂದೂ ಅಲ್ಲಿನ ಕಥೆ. ಕರುವಿಗೆ ಬದಲಾಗಿ ಇಲ್ಲಿ ಬಡವಿ ತಿರುಕೊಳವಿನಾಚಿಯ ಮಗ ಬಾಲಕ ಶಂಕರ ರಥಚಕ್ರಕ್ಕೆ ಬಲಿಯಾಗುತ್ತಾನೆ. ಈ ಕಥೆ ಷಡಕ್ಷರ ಕವಿಗೂ ಗೊತ್ತು. "ಮನುಚೋಳಂ ಮನ್ನಿಸಿದನೆ ತನಯನನಾಗ ಸತ್ಕೃತನಂ" ಎಂದು ಕೇಳಿದ್ದಾನೆ. ಪೆರಿಯ ಪುರಾಣವೋ ತಿರುಜ್ಞಾನ ಸಂಬಂಧರ ಉಪದೇಶವೋ ಯಾವುದೇ ಆದರೂ ತಮಿಳು ಮೂಲವೆಂಬುದು ಸ್ಪಷ್ಟ.

ಇದೇ ರೀತಿ ಕನ್ನಡದಿಂದ ತಮಿಳಿಗೆ ಹೋಗಿರುವುದೂ ಉಂಟು. ಪ್ರಸಿದ್ಧ ಶಿವಶರಣೆ ಮಹಾದೇವಿಯಕ್ಕ ಮತ್ತು ಪರಶಿವನ ಅವತಾರವೆನ್ನಿಸಿದ ಅಲ್ಲಮ ಪ್ರಭು

—ಇವರ ಜೀವನ ವೃತ್ತಾಂತವನ್ನೊಳಗೊಂಡ ಚಾಮರಸನ 'ಪ್ರಭುಲಿಂಗಲೀಲೆ' ತಮಿಳಿಗೆ ಭಾಷಾಂತರವಾಗಿದೆ. 17ನೆಯ ಶತಮಾನದ ಪ್ರಸಿದ್ಧ ಕವಿ ಶಿವಪ್ರಕಾಶ ಸ್ವಾಮಿಗಳು ಈ ಕಾವ್ಯವನ್ನು ತಮಿಳು ಕಾವ್ಯವಾಗಿ ಪರಿವರ್ತಿಸಿದ್ದಾರೆ.* ಇದು ಪಂಡಿತರಿಗೆ ಮೆಚ್ಚಾಗಿದೆ. 'ತಮಿಳು ಸಾಹಿತ್ಯ ಚರಿತ್ರೆ'ಯಲ್ಲಿ, "ಕನ್ನಡ ಗ್ರಂಥಗಳು, 'ಪ್ರಭುಲಿಂಗಲೀಲೆ' ಮೊದಲಾದುವು ತಮಿಳಿನಲ್ಲಿ ಭಾಷಾಂತರ ಹೊಂದಿದವು" ಎಂದು ಹೇಳಿದೆ. 'ಮೊದಲಾದುವು' ಎಂಬ ಮಾತಿನಲ್ಲಿ ಬೇರೆ ಯಾವ ಗ್ರಂಥಗಳು ಅಡಗಿವೆಯೋ ಗೊತ್ತಿಲ್ಲ.

ಆಧುನಿಕ ಕಾಲದಲ್ಲಿ—ಮುಖ್ಯವಾಗಿ, ಸ್ವಾತಂತ್ರ್ಯ ಚಳವಳಿ ಪ್ರಾರಂಭವಾದ ಮೇಲೆ ಮತ್ತು ಸ್ವಾತಂತ್ರ್ಯಾನಂತರ—ನಮ್ಮ ರಾಷ್ಟ್ರದ ಬೇರೆ ಬೇರೆ ಪ್ರದೇಶಗಳ ಜನರಲ್ಲಿ ನಿಕಟ ಪರಿಚಯ ಹೆಚ್ಚಾಗುತ್ತಾ ಬಂದು, ಅವರ ಭಾಷಾ ಸಾಹಿತ್ಯಗಳಲ್ಲಿಯೂ ಪರಸ್ಪರ ಕೊಳುಕೊಡೆಗಳು ಹೆಚ್ಚತೊಡಗಿದುವು. ಕನ್ನಡ ತಮಿಳುಗಳಿಗೂ ಈ ಮಾತು ಅನ್ವಯಿಸುತ್ತದೆ. ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ, ಇತರ ನಿಯತಕಾಲಿಕಗಳು, ಮತ್ತು ವಿಶ್ವವಿದ್ಯಾನಿಲಯಗಳೇ ಮೊದಲಾದ ಸಂಸ್ಥೆಗಳ ಪ್ರಕಾಶನಗಳು—ಇವುಗಳಲ್ಲಿ ಎಷ್ಟೋ ಭಾಷಾಂತರಗಳೂ ರೂಪಾಂತರ ಸಾರ ಸಂಗ್ರಹಗಳೂ ಪ್ರಕಟವಾಗುತ್ತಿವೆ. ಉದಾಹರಣೆಗಾಗಿ ಕೆಲವನ್ನು ಇಲ್ಲಿ ಸೂಚಿಸಿದೆ:

**ದಿವಂಗತ ಕೆ. ಸಂಪದ್ಗಿರಿರಾಯರು** (ತಮಿಳಿನಿಂದ ಕನ್ನಡಕ್ಕೆ): ರಾಜಾಜಿಯವರ ಹಲವು ಸಣ್ಣಕತೆಗಳು, ಭಗವದ್ಗೀತೆ, ರಾಮಾಯಣ ('ಚಕ್ರವರ್ತಿಯಿನ್ ತಿರುಮಗನ್'). **ಪು. ತಿ. ನರಸಿಂಹಾಚಾರ್ಯರು**: ನಮ್ಮಾಳ್ವಾರರ 'ತಿರುವಾಯ್ ಮೊಳಿ'ಯ ಕೆಲವು ಪಾಶುರಗಳನ್ನು 'ಸಿರಿಬಾಯಿ ನುಡಿ' ಎಂದು ಕನ್ನಡಿಸಿದ್ದಾರೆ. **ಮತ್ತೂರು ಕೃಷ್ಣಮೂರ್ತಿಯವರು** 'ಅಖಿಲನ್' ಅವರ ಒಂದೆರಡು ಕಾದಂಬರಿಗಳನ್ನು ಕನ್ನಡಿಸಿದ್ದಾರೆ.

**ಜಯಲಕ್ಷ್ಮಿ ಶ್ರೀನಿವಾಸನ್** ಅವರು ತಮಿಳಿನಿಂದ ಕನ್ನಡಕ್ಕೂ ಕನ್ನಡದಿಂದ ತಮಿಳಿಗೂ ಅನೇಕ ಕತೆ ಕಾದಂಬರಿ ಪ್ರಬಂಧಗಳನ್ನು ಭಾಷಾಂತರ ಮಾಡಿದ್ದಾರೆ. ಅವುಗಳಲ್ಲಿ ಕೆಲವು:

ಕನ್ನಡದಿಂದ ತಮಿಳಿಗೆ: ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಶ್ರೀನಿವಾಸ) ಅವರ ಹಲವು ಸಣ್ಣ ಕತೆಗಳು: 'ಸುಬ್ಬಣ್ಣ'. ಅ. ನ. ಕೃಷ್ಣರಾಯರ ಹಲವು ಸಣ್ಣ ಕತೆಗಳು ಮತ್ತು 'ಸಂಧ್ಯಾರಾಗ', 'ಮಂಗಳಸೂತ್ರ', 'ಕಣ್ಣೀರು' ಕಾದಂಬರಿಗಳು, ಹೊ. ಶ್ರೀನಿವಾಸಯ್ಯನವರ 'ನಾನು ಕಂಡ ಜರ್ಮನಿ' ಎಂಬ ಪ್ರವಾಸ ಗ್ರಂಥ, 'ಶ್ರೀಸ್ವಾಮಿ', ದೇವುಡು ನರಸಿಂಹಶಾಸ್ತ್ರಿ, ಸಿ. ಕೆ. ವೆಂಕಟರಾಮಯ್ಯ.

* "ತಮಿಳು ಪ್ರಭುಲಿಂಗ ಲೀಲೆ ಪು. 207 ಪದ್ಯ 23ರಲ್ಲಿ. ಅದು ರಚಿತವಾದ ಕಾಲವನ್ನು ಶಾ. ಶ. 1574 ಎಂದು ಕೊಟ್ಟಿದೆ".—ಎಂ.ಆರ್.ಶ್ರೀ: 'ಪ್ರಭುಲಿಂಗಲೀಲೆ'ಯ ಸಂಗ್ರಹ, ಪೀಠಿಕೆ, ಪು. LXI—ಸಂ., 'ಕೌಸ್ತುಭ'.

ಪಿ. ಜಿ. ಟಿ. ಕೃಷ್ಣ, ಶ್ಯಾಮಲಾದೇವಿ, ವಾಣಿ—ಮೊದಲಾದವರ ಹಲವು ಸಣ್ಣ ಕತೆಗಳು.

ತಮಿಳಿನಿಂದ ಕನ್ನಡಕ್ಕೆ : ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿಗಳ ಅಪೂರ್ವ ಬರಹಗಳು. 'ಕಲ್ಕಿ' (ಆರ್. ಕೃಷ್ಣಮೂರ್ತಿ), ಕೆ. ಎಸ್. ವೆಂಕಟರಮಣಿ, 'ಕಲೈಮಗಳ್' ಪತ್ರಿಕೆಯ ಸಂಪಾದಕರು ಕೆ. ವಿ. ಜಗನ್ನಾಥನ್, 'ಗುಹಪ್ರಿಯೆ' (ಸ್ವರ್ಣಾಂಬಾಳ್), 'ಕುಮುದಿನಿ', ಅನುತ್ತಮಾ', ಚೂಡಾಮಣಿ, ಬಾಲಾಂಬಾಳ್, ಪುರಸು ಬಾಲಕೃಷ್ಣನ್, ಕ. ನಾ. ಸುಬ್ರಹ್ಮಣ್ಯಂ—ಮೊದಲಾದ ಹಲವು ಕತೆಗಾರ ಕತೆಗಾರ್ತಿಯರ ಹಲವು ಕತೆ ಕಾದಂಬರಿಗಳು.

ಮಹಾಕವಿ 'ಭಾರತಿ'ಯವರು, ನಾಮಕ್ಕಲ್ ರಾಮಲಿಂಗಂ ಪಿಳ್ಳೆಯವರು. ಶುದ್ಧಾನಂದ ಭಾರತಿಯವರು—ಇವರ ಕೆಲವು ಕವಿತೆಗಳು. ಈ ಕವಿಗಳ ಜೀವನ ಪರಿಚಯವನ್ನು ಕನ್ನಡ ಪತ್ರಿಕೆಗಳಲ್ಲಿ ಪ್ರಚುರಪಡಿಸಿದೆ.

**ಎಲ್. ಗುಂಡಪ್ಪ** (ತಮಿಳಿನಿಂದ ಕನ್ನಡಕ್ಕೆ) :—ಉದಯನ ಕಥಾಸಂಗ್ರಹ ('ಪೆರುಙ್ಗತೈ' ಮಹಾಕಾವ್ಯದ ಕಥಾಸಾರಾಂಶ). ನಾಲ್ಮಣಿ ಕಡುಕು : (ನಾಲ್ಮಣಿಕ್ಕಡಿಗೈ—ಎಂಬ ನೀತಿಶತಕದ ಅನುವಾದ). ತಿರುಕ್ಕುಱಳ್—ಧರ್ಮಭಾಗ (ಪ್ರಸಿದ್ಧ ಪುರಾತನ ನೀತಿಗ್ರಂಥದ ಮೊದಲನೆಯ ಭಾಗ — ಪದ್ಯಗ್ರಂಥ). ಅವ್ವೈಯಾರ ಕೃತಿಗಳು (ಪದ್ಯಗಳು) : ೧. ಆತ್ತಿಶೂಡಿ ೨. ಕೊನ್‌ಱೈವೇನ್ಸನ್ ೩. ಮೂದುರೈ (ಮುದುಮೊರೆ) ೪. ನಲ್ವಳಿ (ನಲ್ವಳಿ). ಉಲಗನೀತಿ (ಲೋಕ ನೀತಿ : ಪದ್ಯಗ್ರಂಥ). ಭಾರತಿಯವರ ಕವಿತೆಗಳು (ಸಾಹಿತ್ಯ ಅಕಾಡೆಮಿಯ ಪ್ರಕಟನೆ). ನನ್ನ ಚರಿತ್ರೆ ('ಎನ್ ಚರಿತ್ತಿರಮ್'—ಮಹಾಮಹೋಪಾಧ್ಯಾಯ ಉ. ವೇ. ಶಾಮಿನಾಥೈಯರವರ ಆತ್ಮಕಥೆ : ಸಾಹಿತ್ಯ ಅಕಾಡೆಮಿಯ ಪ್ರಕಟನೆ). ತಿರುವಾರೂರ ಮಹಿಮೆ (ಪೆರಿಯ ಪುರಾಣದ ಒಂದು ಪ್ರಕರಣದ ಪದ್ಯಾನುವಾದ). ತಿರುವಾಚಕಮ್—ನಾಲ್ಕು ಪ್ರಕರಣಗಳು. (ಮಾಣಿಕ್ಯವಾಚಕ ಸ್ವಾಮಿಗಳ ಅದೇ ಹೆಸರಿನ ಗ್ರಂಥದ ನಾಲ್ಕು ಅಧ್ಯಾಯಗಳ ಪದ್ಯಾನುವಾದ). ಶಿಲಪ್ಪದಿಗಾರಮ್ (2ನೇ ಶತಮಾನದ ಪ್ರಾಚೀನ ತಮಿಳು ಮಹಾಕಾವ್ಯದ ಗದ್ಯಾನುವಾದ–ಅಪೂರ್ಣ) ಪೆರಿಯಪುರಾಣಮ್ : ಅರುವತ್ತುಮೂವರು ಪುರಾತನರ ಚರಿತ್ರೆಯನ್ನು ವಿವರಿಸುವ ತಮಿಳು ಕಾವ್ಯ. (ಬೆಂಗಳೂರು ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿದೆ. ಮೊದಲನೆಯ ಭಾಗ ಪ್ರಕಟವಾಗಿದೆ.) (ಅಪೂರ್ಣ). ವ್ಯಾಸರ ಔತಣ (ರಾಜಾಜಿಯವರು ರಚಿಸಿದ ಭಾರತ ಕಥೆ) ('ವ್ಯಾಸರ್ ವಿರುನ್ದು').

ಶೇಷನಾರಾಯಣ ಅವರು ಕನ್ನಡದಿಂದ ತಮಿಳಿಗೂ ತಮಿಳಿನಿಂದ ಕನ್ನಡಕ್ಕೂ ಹಲವು ಕತೆ ಕಾದಂಬರಿಗಳನ್ನು ಭಾಷಾಂತರ ಮಾಡಿದ್ದಾರೆ.

# ವಿಚಾರ ತರಂಗ

ಶ್ರೀಮಾನ್ ಆರ್. ವೆಂಕಟೇಶ್ ಅವರ "ವಿಚಾರ ತರಂಗ*"ವು ವಿಚಾರಶೀಲರ ಮನಸ್ಸಿನಲ್ಲಿ ವಿಚಾರಗಳ ಮತ್ತು ವಿಮರ್ಶೆಗಳ (ಆತ್ಮವಿಮರ್ಶೆಯನ್ನೂ ಒಳಗೊಂಡ) ಆರೋಗ್ಯಕರವಾದ ತರಂಗಗಳನ್ನೆಬ್ಬಿಸಿ ಅವರನ್ನೆಬ್ಬಿಸಿ ಕೂಡ್ರಿಸುವಂಥ ಒಂದು ಅಪರೂಪವಾದ ಗ್ರಂಥವಾಗಿದೆ. ಆದರೆ ಈ ಗ್ರಂಥದ ಮೂಲಭೂತ ವಿರೋಧಾ-ಭಾಸ ಎಂಬಂತೆ ಇದರ ಮೊದಲ ಪ್ರಕರಣದಲ್ಲಿಯೇ ಎಲ್ಲ ವಿಚಾರಗಳ ಮತ್ತು ಎಲ್ಲ ವಿಮರ್ಶೆಗಳ (ಆತ್ಮವಿಮರ್ಶೆಯೂ ಸೇರಿದಂತೆ) ಮೂಲಾಧಾರವಾದ 'ತರ್ಕ'ಕ್ಕೆ ತಾರ್ಕಿಕತೆಗೆ ಕೊಡಲೀಪೆಟ್ಟು ಬಿದ್ದಿದೆ—'ಮೂಲೇ ಕುಠಾರಃ' ಎಂಬಂತೆ! ಆದರೂ ಅಲ್ಲಿ ಲೇಖಕರು ಹೇಳುವ ಮಾತುಗಳ ಅಂತರಾರ್ಥವನ್ನು ಗಮನಿಸಿದಲ್ಲಿ ಅವರ ಈ ಕೊಡಲೀ ಪೆಟ್ಟು ಶುದ್ಧ, ಅನಿರ್ಬದ್ಧ ತರ್ಕವನ್ನು ಧ್ವಂಸ ಮಾಡುವುದಕ್ಕೋಸ್ಕರ ವಾಗಿರದೇ ಕೇವಲ ಒಣ ತರ್ಕಕ್ಕಾಗಿ ತರ್ಕ, ವಾದಕ್ಕಾಗಿ ವಾದ ಎಂದು ತರ್ಕಿಸು ವವರ ಮತ್ತು ವಾದಿಸುವವರ ಶುಷ್ಕ ಮತ್ತು ಬದ್ಧ ತಾರ್ಕಿಕತೆಯನ್ನು ಧ್ವಂಸ ಮಾಡುವುದಕ್ಕೋಸ್ಕರವಾಗಿರುತ್ತದೆಂಬುದು ಮುಕ್ತ ಮನಸ್ಸಿನ ವಿಚಾರವಂತರಿಗೆ ಗೊತ್ತಾಗದಿರದು.

ಈ ಗ್ರಂಥವನ್ನು ಲೇಖಕರು ೧. ವಿಚಾರ ನೈವೇದ್ಯ, ೨. ವಿಚಾರ ವಿಹಾರ, ೩. ವಿಚಾರ ಲಹರಿ, ೪. ಬಂಡಾಯದ ಬಗೆ, ಹಾಗೂ ೫. ವಿಶ್ವಮಾನವೀಯ ಚಿಂತನ ಎಂದು ಒಟ್ಟು ಐದು ತರಂಗ ಪ್ರವಾಹಗಳಲ್ಲಿ ವಿಂಗಡಿಸಿದ್ದಾರೆ. ಈ ಐದು ವಿಭಾಗಗಳ ಪೈಕಿ 'ಬಂಡಾಯದ ಬಗೆ' ಮತ್ತು 'ವಿಶ್ವಮಾನವೀಯ ಚಿಂತನ' ಎಂಬ ಕೊನೆಯೆರಡು ವಿಭಾಗಗಳು ಮಾತ್ರ ಅರ್ಥಪೂರ್ಣವಾಗಿವೆ. ಉಳಿದ ಮೂರು ವಿಭಾಗಗಳಲ್ಲಿ ಮೂರು ಪ್ರತ್ಯೇಕ ಗುಂಪುಗಳಲ್ಲಿ ಸೇರ್ಪಡೆಯಾಗಿರುವ ಚಿಂತನಗಳಲ್ಲಿ ಸ್ಥೂಲವಾಗಿ ಕೂಡ ಏಕ-ವಿಷಯ-ಕೇಂದ್ರತೆ ಇಲ್ಲವಾದ್ದರಿಂದ ಆ ವಿಭಾಗಗಳು ಅರ್ಥ ಪೂರ್ಣವೆಂದನಿಸುವುದಿಲ್ಲ. ಕೇವಲ ತರ್ಕಕ್ಕಾಗಿ ತರ್ಕ ಹೇಗೆ ಒಳ್ಳೆಯದಲ್ಲವೋ ಹಾಗೆಯೇ ಕೇವಲ ವಿಭಾಗಕ್ಕಾಗಿ ವಿಭಾಗ ಕೂಡ ಒಳ್ಳೆಯದಲ್ಲ, ಆವಶ್ಯಕವೂ ಅಲ್ಲ.

ಈ ಗ್ರಂಥದಲ್ಲಿ ಲೇಖಕರು ಕಾರ್ಯ-ಕಾರಣ ವಿಚಾರ, ಧರ್ಮ ವಿಮರ್ಶೆ, ಜಾತಿ ವಿಮರ್ಶೆ, ವೈಜ್ಞಾನಿಕತೆಯ ವಿಮರ್ಶೆ, ಜೀವನಮೌಲ್ಯ ವಿಮರ್ಶೆ, ಜನಸಂಖ್ಯಾ ಸಮಸ್ಯೆ, ಸರ್ಕಾರ ಮತ್ತು ಆಡಳಿತ ಇವುಗಳ ವಿಮರ್ಶೆ, ಇತಿಹಾಸ ವಿಮರ್ಶೆ, ಸಾಹಿತ್ಯಕ ಪಂಥಗಳ ವಿಮರ್ಶೆ, ವಾಣಿಜ್ಯ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿಯ ಸ್ಥಿತಿ-ಗತಿಗಳ ಹಾಗೂ ಸಮಸ್ಯೆಗಳ ವಿಮರ್ಶೆ, ವಿಶ್ವಮಾನವ್ಯತೆಯ ವಿಮರ್ಶೆ, ಆಧ್ಯಾತ್ಮಿಕತೆಯ ವಿಮರ್ಶೆ ಮತ್ತು ಆತ್ಮ-ವಿಮರ್ಶೆ ಇವೇ ಮುಂತಾದ ಮಾನವ

---

* ಆರ್. ವೆಂಕಟೇಶ್ : ವಿಚಾರ ತರಂಗ (ವಿಶ್ವಸಮಾಜ, ತಲಕಾಡು-571122 : 1983); ಬೆಲೆ : ರೂ. 15-00 ; ಪುಟಗಳು : X + 294.

ಜೀವನದ ಮತ್ತು ಸಂಸ್ಕೃತಿಯ ವಿಭಿನ್ನ ಮಹತ್ವದ ಕ್ಷೇತ್ರಗಳನ್ನು ಮತ್ತು ವಿಷಯಗಳನ್ನು ಕುರಿತು ಆಳವಾಗಿ ಚಿಂತನೆ ನಡೆಸಿದ್ದಾರೆ. ನಾವು ಶ್ರೀ ವೆಂಕಟೇಶ್ ಅವರ ಅನೇಕ ಅಭಿಪ್ರಾಯಗಳನ್ನು ಮತ್ತು ತೀರ್ಮಾನಗಳನ್ನು ಒಪ್ಪದಿರಬಹುದು. ಆದರೆ ಅವರ ವೈಚಾರಿಕ ಪ್ರಾಮಾಣಿಕತೆ, ತೀಕ್ಷ್ಣತೆ ಮತ್ತು ನಿರ್ದಾಕ್ಷಿಣ್ಯತೆ ಇವುಗಳನ್ನು ಮಾತ್ರ ಒಪ್ಪದಿರಲಾಗುವುದಿಲ್ಲ. ಈ ಗ್ರಂಥದ ಚಿಂತನಗಳಲ್ಲಿ ವ್ಯಕ್ತವಾಗುವ ವೆಂಕಟೇಶ್ ಅವರ ಬಹುಶ್ರುತತ್ವ, ಬಹುವಾಚನತ್ವ ಹಾಗೂ ಬಹುಮುಖಿಯಾದ ವಿಚಾರಶೀಲತ್ವ ಇವುಗಳು ನಿಷ್ಪಕ್ಷಪಾತ ಧೋರಣೆಯ ವಿಚಾರ ವಿಮರ್ಶೆಗಳ ಪಕ್ಷಪಾತಿಗಳ ಮೆಚ್ಚುಗೆಗೆ ಪಾತ್ರವಾಗುತ್ತವೆ.

ಇನ್ನು ಈ ಗ್ರಂಥದಲ್ಲಿನ ಚಿಂತನಗಳ ಕೆಲವು ಮಾದರಿಗಳನ್ನು ಪರಿಶೀಲಿಸಿ ನೋಡೋಣ. 'ನಗೆಯು ಬರುತಿದೆ...' 'ಜಗದ್ಗುರು ಜಿಜ್ಞಾಸೆ', 'ಭಕ್ತಿ ಪಂಥ', 'ಧರ್ಮ-ಒಂದು ವಿವೇಚನೆ', ಹಾಗೂ 'ಬ್ರಾಹ್ಮಣ್ಯವನ್ನು ಕುರಿತ ಚಿಂತನೆಗಳು' ಇವುಗಳಲ್ಲಿ ಲೇಖಕರು ಧರ್ಮದ ತತ್ವ ಮತ್ತು ಅದರ ಆಚರಣೆ ಇವುಗಳಲ್ಲಿ ಕಂಡು ಬರುವ ಡಂಭಾಚಾರ ಹಾಗೂ ಡೋಂಗೀತನಗಳನ್ನು ಕುರಿತು ಆಳವಾದ ಮತ್ತು ಖಾರವಾದ ಚಿಂತನೆ-ವಿಮರ್ಶೆಗಳನ್ನು ನಡೆಸಿದ್ದಾರೆ. ಇವುಗಳಲ್ಲಿನ ಚಿಂತನೆಯ ತೀಕ್ಷ್ಣತೆ, ನಿರ್ದಾಕ್ಷಿಣ್ಯತೆ ಮತ್ತು ವಿಡಂಬಕತೆಗಳು ನಮಗೆ ಇಂಥವೇ ವಿಷಯಗಳನ್ನು ಕುರಿತ ಶಿವರಾಮ ಕಾರಂತರ, ಶ್ರೀರಂಗರ ಹಾಗೂ ಬೀಚಿಯವರ ಬರೆಹಗಳನ್ನು ನೆನಪಿಗೆ ತರುತ್ತವೆ.

'ವಿಮರ್ಶಾ ವೈಖರಿ', 'ಸಾಹಿತ್ಯ ಮತ್ತು ವಿಚಾರ', 'ವಿಚಾರ ಸಾಹಿತ್ಯ', 'ಸಾಹಿತ್ಯದ ಗತಿ-ವಿಧಿಗಳು', 'ಸಾಹಿತ್ಯ ವಿಚಾರ', 'ವಿಮರ್ಶಾ ವಿಚಾರ' ಮುಂತಾದ ಪ್ರಬಂಧಗಳಲ್ಲಿ ಲೇಖಕರು ತಮ್ಮ ನಿಶಿಥ ಮತ್ತು ಮುಕ್ತ ವಿಮರ್ಶಾಬುದ್ಧಿಯನ್ನು ಸಾಹಿತ್ಯದ, ವಿಚಾರ ಸಾಹಿತ್ಯದ ಮತ್ತು ವಿಮರ್ಶಾಸಾಹಿತ್ಯದ ಸ್ವರೂಪ, ಅವುಗಳ ಮೂಲಭೂತ ತಳಹದಿ ಹಾಗೂ ಧಾಟಿ ಧೋರಣೆಗಳು ಮತ್ತು ಅವು ಜನಸಾಮಾನ್ಯರನ್ನು ಮುಟ್ಟುವ ಅಥವಾ ಮುಟ್ಟದಿರುವ ಹಾಗೂ ತಟ್ಟುವ ಅಥವಾ ತಟ್ಟದಿರುವ ಸ್ಥಿತಿ-ಗತಿಗಳು ಇವೇ ಮುಂತಾದ ಸಾಹಿತ್ಯ ವಿಚಾರಗಳತ್ತ ಹರಿಬಿಟ್ಟಿದ್ದಾರೆ. ಈ ಎಲ್ಲ ಪ್ರಬಂಧಗಳಿಂದ ಪ್ರಸ್ತುತ ಲೇಖಕರ ವಿಚಾರಧಾರೆಯು ಹಾಗೂ ಅವರ ಧೋರಣೆಯು ಪ್ರಾಚೀನ, ಅರ್ವಾಚೀನ, ಆಧುನಿಕ, ನವ್ಯ ಎಂಬಿತ್ಯಾದಿ ಸಾಹಿತ್ಯದ ಕಾಲವಾಚಕ ಮತ್ತು ಸ್ವರೂಪವಾಚಕ ಸೀಮಾರೇಖೆಗಳಿಂದ ಬಂಧಿತವಾಗಿಲ್ಲ. ಅವುಗಳಿಗೆ ಸೀಮಿತವಾಗಿಲ್ಲವೆನ್ನುವುದು ಹಾಗೂ ಅವರ ವಿಮರ್ಶಾದೃಷ್ಟಿಯು ಕ್ಲಾಸಿಕಲ್, ರೊಮ್ಯಾಂಟಿಕ್, ನವ್ಯ, ಪ್ರಗತಿಶೀಲ, ಬಂಡಾಯ, ದಲಿತ ಮುಂತಾದ ಸಾಹಿತ್ಯದ ಬಣ್ಣದ ಕನ್ನಡಕಗಳಿಂದ ಉಂಟಾಗುವ ದೃಷ್ಟಿದೋಷಗಳಿಂದ ಮುಕ್ತವಾಗಿದೆಯೆನ್ನುವುದು ನಮಗೆ ಗೊತ್ತಾಗುತ್ತದೆ. ಈ ಪ್ರಬಂಧಗಳಲ್ಲಿ ಬರುವ: "ತೋಚಿದ್ದನ್ನು ಗೀಚುವುದಷ್ಟೇ ಹೇಗೆ ಸಾಹಿತ್ಯವಾಗುವುದಿಲ್ಲವೋ ಹಾಗೆಯೇ ಬಾಯಿಗೆ ಬಂದದ್ದೆಲ್ಲ

ಮಾತಲ್ಲ. ಅಂತೆಯೇ 'ಬುದ್ಧಿ'ಯು ಬಡಬಡಿಸಿದ್ದೆಲ್ಲ 'ವಿಚಾರ' ಎಂದು ಭ್ರಮಿಸ ಬಾರದು. ನಮ್ಮ ಬುದ್ಧಿ-ಮನಸ್ಸುಗಳು ಸರಿಯಾಗಿವೆಯೇ? ಅವು ಲೋಕದ ವಿವಿಧಾನುಭವಗಳನ್ನು ಯಥಾಯೋಗ್ಯವಾಗಿ ತನ್ನವನ್ನಾಗಿಸಿಕೊಳ್ಳುವ ಯೋಗ್ಯತೆ ಹೊಂದಿವೆಯೇ?—ಎಂಬುದನ್ನು ಮೊದಲು ಪರೀಕ್ಷಿಸಿಕೊಳ್ಳಬೇಕು." (ಪುಟಗಳು ೬೧-೬೨).

"ಇಂದು ಎಲ್ಲರೂ ವಿಮರ್ಶಕರೇ... ಎಲ್ಲರೂ ಎಲ್ಲವನ್ನೂ ವಿಮರ್ಶಿಸುವರು. 'ಬಿದ್ದವನ ಮೇಲೆ ಆಳಿಗೊಂದು ಕಲ್ಲು' ಎಂಬಂತೆ ಎಲ್ಲರೂ ನನ್ನದೂ ಒಂದು ಕಲ್ಲಿರಲೆಂದು ತೂರಿಬಿಡುವವರೇ" (ಪುಟ ೪೧). "ಇಂದಿನ ವಿಮರ್ಶಕರಿಗೆ ಹಳೆಯು ದೆಲ್ಲ ಹೊಲಸು ನಾರುವ ಗಬ್ಬಗಳಾಗಿವೆ. ಇದು ಪ್ರಾಮಾಣಿಕ ಅಭಿವ್ಯಕ್ತಿಯೇ? ಸಂಸ್ಕಾರ-ವಂಶವೃಕ್ಷ-ಗತಿಸ್ಥಿತಿಗಳನ್ನು ಪದೇ ಪದೇ ಉಲ್ಲೇಖಿಸುವುದು ಇಡೀ ಸಾಹಿತ್ಯದ ಸಮಗ್ರ ವಿಮರ್ಶೆ ಎಂಬ ಭ್ರಾಂತಿವಾದ ಎಂತಹ ವಿಮರ್ಶೆಯಾದೀತು?" (ಪುಟ ೪೧), "ಪಾಶ್ಚಾತ್ಯ ಲೇಖಕರ ಅಥವಾ ಮೇಧಾವಿಗಳ ಉದ್ಧೃದ್ಧ ಹೇಳಿಕೆಗಳ ಚರ್ವಿತಚರ್ವಣ ವರದಿಯೇ ವಿಮರ್ಶೆಯೇ? (ಪುಟ ೪೨), "...ಈ ಎಲ್ಲ ಪಕ್ಷ-ಪಂಥಗಳ ಅಬ್ಬರವನ್ನು ಪೂರ್ವಾಗ್ರಹಗಳ ಪುಂಗಿಯನ್ನು ನಾನಂತೂ ವಿಮರ್ಶೆ ಎಂದು ಖಂಡಿತಾ ಕರೆಯಲಾರೆ! ನನಗಂತೂ ನನ್ನ ನಾನರಿಯುವುದೇ ವಿಮರ್ಶೆ! ಲೋಕವನ್ನು ನನ್ನಂತೆ ತಿದ್ದುವುದೆಂದಿಗೂ ವಿಮರ್ಶೆಯಲ್ಲ! ಆತ್ಮಜಾಗೃತಿ ಯನ್ನುಂಟುಮಾಡುವ ಸ್ವತಂತ್ರ ವಿಚಾರಧಾರೆಯೇ ಪ್ರಾಮಾಣಿಕ ವಿಮರ್ಶೆ" (ಪುಟ ೪೫) ಇತ್ಯಾದಿ ಹೇಳಿಕೆಗಳು ಹಾಗೂ ಅವುಗಳ ಸಮರ್ಥನೆಗಳು ಎಲ್ಲ ವಿಚಾರ ಶೀಲ ಸಾಹಿತ್ಯಾಭ್ಯಾಸಿಗಳ ಮತ್ತು ಸಾಹಿತ್ಯ ವಿಮರ್ಶಕರ ಗಂಭೀರವಾದ ಚಿಂತನಕ್ಕೆ ಮತ್ತು ಮನನಕ್ಕೆ ಯೋಗ್ಯವಾಗಿವೆ.

ಈ ಗ್ರಂಥದ ಮೂರನೆಯ ಭಾಗದಲ್ಲಿ ಬರುವ "ಜನಪದ ವಾಙ್ಮಯ ಮತ್ತು ಜನಜೀವನ" ಎಂಬ ಪ್ರಬಂಧವು ಬರೀ ಜಾನಪದ ಸಾಹಿತ್ಯದಲ್ಲಿ ಆಸಕ್ತಿಯಿರುವವ ರಿಗಷ್ಟೇ ಅಲ್ಲ, ನಮ್ಮ 'ಜಾನಪದ-ವಿಜ್ಞಾನಿ'ಗಳಿಗೆ ಕೂಡ ಅಭ್ಯಾಸಯೋಗ್ಯವಾಗಿದೆ.

ಈ ಗ್ರಂಥದಲ್ಲಿ ಇತಿಹಾಸಶಾಸ್ತ್ರಕ್ಕೆ ಹಾಗೂ ಇತಿಹಾಸದ ಅಧ್ಯಯನಕ್ಕೆ ಸಂಬಂಧಿಸಿದಂತೆ ಎರಡು ಲೇಖನಗಳಿವೆ—ಎರಡನೆಯ ಭಾಗದಲ್ಲಿ ಒಂದು ಹಾಗೂ ಮೂರನೆಯ ಭಾಗದಲ್ಲಿ ಮತ್ತೊಂದು "ಇತಿಹಾಸದ ವೈಪರೀತ್ಯ : ಆರ್ಯ-ದ್ರಾವಿಡ ಸಂಘರ್ಷ" ಎಂಬ ಲೇಖನದಲ್ಲಿ ಉಲ್ಲೇಖಿಸಲಾದ ಪಿ. ಎನ್. ಓಕ್‌ರವರ ವಿಚಾರ ಗಳನ್ನಾಗಲಿ ವಿಸ್ತಾರವಾಗಿ ಉದ್ಧರಿಸಲಾದ ಪ್ರೊ॥ ಡಿ. ಡಿ. ಮಿಶ್ರಾರವರ ಹೇಳಿಕೆಗಳ ನ್ನಾಗಲಿ ನಾವು ವೈಜ್ಞಾನಿಕವಾಗಿ ಗಟ್ಟಿಯಾಗಿ ಸಿದ್ಧವಾದ ವಿಚಾರಗಳೆಂದು ಅಥವಾ ಹೇಳಿಕೆಗಳೆಂದು ಹೇಳಲು ಸಾಧ್ಯವಾಗದಿದ್ದರೂ ಈ ಲೇಖನದಲ್ಲಿನ "ಆರ್ಯರ ಆಗಮನ, ಆರ್ಯ-ದ್ರಾವಿಡ ಸಂಘರ್ಷ ಮುಂತಾದ ಸಂಗತಿಗಳ ಬಗೆಗಿನ ಇದುವರೆ ಗಿನ ಗತಾನುಗತಿಕ ಮಿಥ್ಯಾಕಲ್ಪನೆಗಳನ್ನು ಪುನರ್ವಿಮರ್ಶಿಸುವ ಕಾಲ ಇದೀಗ ಕೂಡಿ

ಬಂದಿದೆ" (ಪುಟ : ೧೭೫) ಎಂಬ ಲೇಖಕರ ಮಾತುಗಳನ್ನು ಎಲ್ಲ ವೈಜ್ಞಾನಿಕ ಧೋರಣೆಯ ಇತಿಹಾಸ ಶಾಸ್ತ್ರಜ್ಞರೂ ಒಪ್ಪಿಕೊಳ್ಳಬೇಕು.

"ನೀರು ಮತ್ತು ಆರೋಗ್ಯ", "ನೀಲಗಿರಿ : ವರದಾನದ ಸೋಗು ಹಾಕುವ ಶಾಪ !", "ಜನಸಂಖ್ಯಾ ಸಮಸ್ಯೆ ಹಾಗೂ ಕುಟುಂಬ ಯೋಜನೆ ; ಒಂದು ಚಿಂತನೆ", "ಸರ್ಕಾರ ಮತ್ತು ನಾವು", "ಸರ್ಕಾರಿ ನೌಕರ ಮತ್ತು ಕೃಷಿ ಕಾರ್ಮಿಕ" ಹಾಗೂ "ವರ ಮಹಾಶಯರೇ ! ತಮೋನಿದ್ರೆಯನ್ನು ತೊರೆದೇಳಿ" ಮುಂತಾದ ಲೇಖನಗಳು ಲೇಖಕರ ಸಾಮಾಜಿಕ ಕಳಕಳಿ ಮತ್ತು ಕಮಿಟ್‌ಮೆಂಟು ಹಾಗೂ ಅವರಿಗೆ ದಿನನಿತ್ಯದ ವ್ಯಾವಹಾರಿಕ ಮತ್ತು ಸಾಮಾಜಿಕ ವಿಷಯಗಳ ಬಗ್ಗೆ ಹಾಗೂ ಸಮಸ್ಯೆಗಳ ಬಗ್ಗೆ ಇರುವ ಜಾಗೃತಿ ಇವುಗಳ ದ್ಯೋತಕಗಳಾಗಿವೆ.

ಮುಖ್ಯವಾಗಿ ಜೀವನದ, ಸಂಸ್ಕೃತಿಯ ಹಾಗೂ ಸಾಹಿತ್ಯದ ಗಂಭೀರ ಹಾಗೂ ಗಭೀರ ಚಿಂತನೆಯನ್ನೇ ಕೇಂದ್ರವಾಗಿರಿಸಿಕೊಂಡಿರುವ ಈ "ವಿಚಾರ ತರಂಗ"ಗಳ ನೇರಪ್ರವಾಹದ ಓಘದಲ್ಲಿ ಬಂಡಾಯ-ಸಾಹಿತ್ಯವನ್ನು ಕುರಿತ ಮತ್ತು ಕುವೆಂಪು ರವರ ವಿಶ್ವಮಾನವತ್ವ, ಅವರ ಮತಧರ್ಮ—ಅದರಲ್ಲೂ ದ್ವೈತಮತಧರ್ಮ—ಖಂಡನತ್ವ ಇವುಗಳನ್ನು ಕುರಿತ ವಾದ-ವಿವಾದಗಳ (ಇವು ಮಹತ್ವದವಲ್ಲ ಎಂದೇನೂ ನಾನು ಹೇಳುತ್ತಿಲ್ಲ.) ತಿರುಗಣಿ ಮಡವುಗಳ ಅಡೆತಡೆಗಳು ಬರದೇ ಇದ್ದರೆ ಚೆನ್ನಾಗಿತ್ತು. ಆ ವಾದ-ವಿವಾದಗಳಿಗಾಗಿ ಲೇಖಕರು ಬೇರೊಂದು ಗ್ರಂಥವನ್ನಾಗಲಿ, ಇಲ್ಲವೆ ಪುಸ್ತಿಕೆಯನ್ನಾಗಲಿ, ಇಲ್ಲವೆ ಇನ್ನಾವುದಾದರೂ ಪತ್ರಿಕಾ ವೇದಿಕೆಯನ್ನಾಗಲಿ ಮುಡಿಪಾಗಿಡಬಹುದಿತ್ತು ಎಂದು ನನ್ನ ಭಾವನೆ.

'ಗ್ರಂಥ', 'ಪುಸ್ತಿಕೆ', ಅನ್ನುತ್ತಲೇ ಪ್ರಸ್ತುತ ಲೇಖಕರು ಈ ಗ್ರಂಥದ ಮುನ್ನುಡಿಯಲ್ಲಿ ತಿಳಿಸಿರುವ, ಈ ಗ್ರಂಥಪ್ರಕಟಣೆಗಾಗಿ ಅವರು ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ತಲಕಾಡು ಶಾಖೆಯಿಂದ ತೆಗೆದುಕೊಂಡಿರುವ ಮೂರು ಸಾವಿರ ರೂಪಾಯಿಗಳ ಸಾಲದ ನೆನಪಾಗುತ್ತದೆ. ಈ ಲೇಖಕರು ಸರಸ್ವತೀದೇವಿಯ ಸುಪುತ್ರರಾಗಿರುವರಾದರೂ ಅವಳತ್ತೆ ಲಕ್ಷ್ಮೀದೇವಿಯ ಮುದ್ದಿನ ಮೊಮ್ಮಕ್ಕಳಾಗಿರುವಂತೆ ಕಾಣುವುದಿಲ್ಲ. ಆದುದರಿಂದ ಲಕ್ಷ್ಮೀದೇವಿಯ ಅನುಗ್ರಹಕ್ಕೆ ತಕ್ಕಮಟ್ಟಿಗಾದರೂ ಪಾತ್ರರಾಗಿರುವಂಥ ವಿಚಾರ-ಸಾಹಿತ್ಯಾಭಿಮಾನಿಗಳು ಕೇವಲ ಹದಿನೈದೇ ರೂಪಾಯಿಗಳ ಅಲ್ಪ ವಿತ್ತ-ಬೆಲೆಯ (ಅರ್ಥಾತ್ ಈಗಿನ ದುಬಾರೀ ಕಾಲದಲ್ಲಿ) x + 294 ಪುಟಗಳ, ವೈಚಾರಿಕವಾಗಿ ಅತಿ ಬೆಲೆಯುಳ್ಳ ಈ ಪುಸ್ತಕವನ್ನು ಹಣ ಕೊಟ್ಟು ಕೊಂಡುಕೊಂಡು ಲೇಖಕರ ಸಾಲಪರಿಹಾರಕ್ಕೆ ನೆರವಾಗುವುದು ತಮ್ಮ ಪವಿತ್ರ ಕರ್ತವ್ಯ ಎಂದು ತಿಳಿಯಬೇಕು.

—ಜಾ. ಗೋ.

# ಹಿರೊಷೀಮಾ*

'ಹಿರೊಷೀಮಾ' 400 ಪುಟಗಳಷ್ಟು ನೀಳವಾದ ಗ್ರಂಥ. ನಡುಗನ್ನಡ ಎನ್ನಬಹುದಾದ, ಪದ್ಯಹೃದಯಿಯಾದ ಗದ್ಯದಲ್ಲಿ ರಚಿತವಾಗಿದೆ. ಶಬ್ದಸಂಪತ್ತು ಇಂದಿನ ಹೊಸಗನ್ನಡದಲ್ಲಿ ಬಳಕೆಯಲ್ಲಿರುವುದೇ ಆಗಿದ್ದರೂ, ಪದಗಳಿಗೆ ಹಳಗನ್ನಡದಲ್ಲಿ ಪ್ರಯೋಗದಲ್ಲಿದ್ದ ಪ್ರತ್ಯಯರೂಪಗಳನ್ನು ಪ್ರಯೋಗಿಸಲಾಗಿದೆ. ಇದರಿಂದ ಪದ್ಯಕಾವ್ಯಗಳ ಧಾಟಿ ಬಂದಂತಾಗಿದೆ. ಗ್ರಂಥಕರ್ತರ ಈ ಭಾಷಾಶೈಲಿಗೆ ಕೆಂಪು ನಾರಾಯಣ ಕವಿಯ 'ಮುದ್ರಾಮಂಜೂಷ' ಮತ್ತು ಮುದ್ದಣನ 'ರಾಮಾಶ್ವಮೇಧ' ಕಾವ್ಯಗಳ ಪ್ರಭಾವ ಇದ್ದಿರಬಹುದು. ಈ ಶೈಲಿಯಿಂದ ರಚಿತವಾದ ಈ ಕಾವ್ಯವನ್ನು ರಾಗವಾಗಿ ಓದಿಕೊಳ್ಳುವ ಸಾಧ್ಯತೆ ಇದೆ. ಆದರೆ ಪದಗಳು ಒಂದಕ್ಕೊಂದು ಹೆಣೆದುಕೊಂಡು ಹಲವೆಡೆ ಸಾಮಾನ್ಯ ಸಂಧಿಕಾರ್ಯ ನಡೆದಿರುವುದರಿಂದ, ಭಾಷಾಪ್ರೌಢಿಮೆ ಇಲ್ಲದ ಸಾಮಾನ್ಯ ಓದುಗರಿಗೆ ಓದುವಾಗ ತೊಡಕಾಗುತ್ತದೆ. ಮುದ್ರಣದಲ್ಲಿ ಪದಗಳನ್ನು ಬಿಡಿಬಿಡಿಯಾಗಿ ಮುದ್ರಿಸಿದ್ದಿದ್ದರೆ ಓದು ಸರಾಗವಾಗುತ್ತಿತ್ತು. ಇದರಿಂದ ಕರ್ತೃವಿನ ಭಾಷಾಶೈಲಿಗಾಗಲಿ, ಪದಪ್ರಯೋಗಗಳಿಗಾಗಲಿ ಯಾವ ಚ್ಯುತಿಯೂ ಉಂಟಾಗಲಾರದು.

'ಹಿರೊಷೀಮಾ' ಕಾವ್ಯವನ್ನು 'ಅರ್ಥಾಂತರನ್ಯಾಸ' ಕಾವ್ಯವೆಂದು ವರ್ಣಿಸಬಹುದು. ಅಣುಬಾಂಬಿನಿಂದ ನಾಶಗೊಂಡ ಜಪಾನ್ ದೇಶದ ಹಿರೊಷೀಮಾ ನಗರವನ್ನು ಒಂದು ಬೃಹತ್ ಪ್ರತಿಮೆಯನ್ನಾಗಿ ಉಪಯೋಗಿಸಿಕೊಂಡು, ಅದರ ಕಥನವನ್ನು ವಿಶಾಲ ಉಪಮಾನವನ್ನಾಗಿ (ಅಥವಾ ರೂಪಕವನ್ನಾಗಿ) ರೂಪಿಸಿಕೊಂಡು ಪಾಶ್ಚಾತ್ಯ ಪದ್ಧತಿಯ ನಾಗರಿಕತೆಯ ಅನಿರ್ಬಂಧಿತ, ಅಸಂಸ್ಕೃತ ಬೆಳವಣಿಗೆಯ ವೈಖರಿಯನ್ನು ಮತ್ತು ಅದಕ್ಕೆ ಒದಗುವ ವಿಪತ್ತನ್ನು ಎತ್ತಿತೋರಿಸಲು ಗ್ರಂಥಕರ್ತರು ಪ್ರಯತ್ನಿಸಿದ್ದಾರೆ. ಅಲ್ಲದೆ ಇಂಥ ವಿಪತ್ತನ್ನು ನಿವಾರಿಸಿಕೊಂಡು ಬದುಕಿ ಬಾಳಲು ಮಾನವಶಿಶುವಿಗೆ ಇರುವ ಏಕೈಕ ಮಾರ್ಗ, ಜ್ಞಾನದೇವತಾ ಮಾತೆಯ ಜ್ಞಾನಾಮೃತಪಾನ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಗ್ರಂಥಕರ್ತರ ಈ ವಿಶಾಲ ಉಪಮಾನ ಉಪಮೇಯಗಳು ಕಾವ್ಯಮಯವಾಗಿ ಮೂಡಿಬಂದು ಅವರ ಪ್ರಯತ್ನ ಬಹು ಯಶಸ್ವಿಯಾಗಿದೆ. ಅವರ ಕಥನದಲ್ಲಿ ಅನೇಕ ಕಡೆ ಮಹಾಕಾವ್ಯಗಳಲ್ಲಿ ಬರುವಂಥ ಮಹೋಪಮೆಗಳು (ಎಪಿಕ್ ಸಿಮಿಲಿ) ಕಂಡುಬರುತ್ತವೆ. ಇಡಿಯ ಕಾವ್ಯವೇ ಮಹೋಪಮೆಯಾಗಿ, ಅರ್ಥಾಂತರನ್ಯಾಸವಾಗಿ ಇರುವ ನಿದರ್ಶನಗಳು ಆಂಗ್ಲ ಮೊದಲಾದ ಪಾಶ್ಚಾತ್ಯ ಭಾಷಾ ಸಾಹಿತ್ಯಗಳಲ್ಲಿ ಕಂಡುಬಂದರೂ, ಕನ್ನಡ ಸಾಹಿತ್ಯ

---

* ಹಿರೊಷೀಮಾ: ಲೇಖಕರು—ಶ್ರೀ 'ಸೀತಾಸುತ'; ಪ್ರಕಾಶಕರು: ಸೀತಾಸುತ ಪ್ರಕಾಶನ, ಮಂಡ್ಯ; 1981: ಪು. xvi+404; ಬೆಲೆ: ರೂ. 20-00.

ದಲ್ಲಿ ಇಂಥ ಪ್ರಯತ್ನ ಇಲ್ಲವೆಂದೇ ಹೇಳಬಹುದು. ಶ್ರೀ 'ಸೀತಾಸುತ' ಅವರ ಈ ಹೊಸ ಬಗೆಯ ಪ್ರಯೋಗ ಶ್ಲಾಘನೀಯ.

ಆಂಗ್ಲಸಾಹಿತ್ಯದಲ್ಲಿ 'ಅಲಿಗರಿ' (allegory) ಎಂಬ ಸಾಹಿತ್ಯ ಪ್ರಭೇದ ಬೆಳೆದುಬಂದಿದೆ. ಈ ಸಾಹಿತ್ಯ ಪ್ರಕಾರವು ಅರ್ಥಾಂತರನ್ಯಾಸವನ್ನು ಹೋಲುತ್ತದೆ. ಅಡಿಸನ್ ಎಂಬ ಆಂಗ್ಲ ಪ್ರಬಂಧ ಸಾಹಿತಿಯ 'ದಿ ವಿಶನ್ ಆಫ್ ಮಿರ್ಜಾ' (ಮಿರ್ಜಾನ ಕಣಸು) ಎಂಬ ಚಿಕ್ಕ ಪ್ರಬಂಧವು ಈ ಸಾಹಿತ್ಯ ಪ್ರಕಾರಕ್ಕೆ ಒಳ್ಳೆಯ ಉದಾಹರಣೆ. ಇಡಿಯ ಕಾವ್ಯವೇ ಒಂದು 'ಅಲಿಗರಿ' ಆಗಿರುವುದಕ್ಕೆ ಎರಡು ಒಳ್ಳೆಯ ಉದಾಹರಣೆಗಳನ್ನು ಕೊಡಬಹುದು. ಆಂಗ್ಲ ಸಾಹಿತಿ ಜಾನ್ ಬನ್ಯನ್ ಅವರ ಪ್ರಸಿದ್ಧ ಕಾದಂಬರಿ 'ದಿ ಪಿಲ್‌ಗ್ರಿಮ್ಸ್ ಪ್ರೋಗ್ರೆಸ್' (ಯಾತ್ರಿಕನ ಪ್ರಗತಿ) ಒಂದು, ಮತ್ತೊಂದು ಮಧ್ಯಯುಗದಲ್ಲಿ ಇಟಲಿ ದೇಶದ ಫ್ಲಾರೆನ್ಸ್ ನಗರದ ಪ್ರಸಿದ್ಧ ಕವಿ ಡಾಂಟೆ ಅಲಿಘಿಯೇರಿ ಅವರ 'ದಿ ಡಿವೈನ್ ಕಾಮೆಡಿ' (ದೈವಿಕ ಸುಖಾಂತ) ಎಂಬ ಸುಪ್ರಸಿದ್ಧ ಮಹಾಕಾವ್ಯ. ಜಾನ್ ಬನ್ಯನ್ ಮಾನವನ ಜೀವನ ಒಂದು ತೀರ್ಥಯಾತ್ರೆ, ಅವನು ತನ್ನ ಪರಮಧ್ಯೇಯವಾದ ಸ್ವರ್ಗಕ್ಕೆ ಹೋಗುವ ದಾರಿಯಲ್ಲಿ ಅನೇಕ ದುಷ್ಟಶಕ್ತಿಗಳನ್ನು ಎದುರಿಸಿ ಅವುಗಳನ್ನು ನಿವಾರಿಸಿಕೊಂಡು, ಕೊನೆಗೆ ಬೆನ್ನುಹತ್ತಿದ್ದ ಕರ್ಮದ ದೊಡ್ಡ ಹೊರೆಯನ್ನು ಕಳಚಿಕೊಂಡು ಸ್ವರ್ಗಾರೋಹಣ ಮಾಡುವನು, ಎಂದು ವರ್ಣಿಸಿದ್ದಾನೆ. ಡಾಂಟೆ ತನ್ನ ಮಹಾಕಾವ್ಯದಲ್ಲಿ ತಾನು ಕಂಡ ಮಹಾಕಣಸೊಂದನ್ನು ವಸ್ತುವನ್ನಾಗಿ ಮಾಡಿಕೊಂಡಿದ್ದಾನೆ. ತಾನು ಬಾಲ್ಯದಲ್ಲೇ ಪ್ರಪ್ರಥಮವಾಗಿ ಸಂಧಿಸಿದ ಬಿಯಾಟ್ರಿಸ್ ಎಂಬ ಕನ್ಯೆಯಲ್ಲಿ ಪ್ರೇಮ ವಂಕುರಿಸಿ ಆಕೆಯಲ್ಲಿ ಪರಿಶುದ್ಧವಾದ ಆದರ್ಶ ದೈವೀಪ್ರೇಮವನ್ನು ಬೆಳೆಸಿಕೊಳ್ಳುತ್ತಾನೆ. ಸ್ವರ್ಗಸ್ಥಳಾದುದರಿಂದ ಅವಳನ್ನು ಅರಸಿಕೊಂಡು ಅವನು ಸ್ವರ್ಗದ ಕಡೆಗೆ ಪ್ರಯಾಣ ಬೆಳಸುತ್ತಾನೆ. ದಾರಿಯಲ್ಲಿ ನರಕಲೋಕ ಬಂದಾಗ ಬಿಯಾಟ್ರಿಸ್ ಆತನ ಸಹಾಯಕ್ಕೆ ಕಳುಹಿಸಿಕೊಟ್ಟ ವರ್ಜಿಲ್ ಕವಿಯು ಅವನನ್ನು ನರಕದ (ಹೆಲ್) ಮೂಲಕ ದಾಟಿಸಿಕೊಂಡು, ಪಾಪವಿಸರ್ಜನಾಲೋಕವನ್ನು (ಪರ್ಗೇಟರಿ) ತೋರಿಸಿಕೊಂಡು ಮುಂದೆ ಸ್ವರ್ಗಲೋಕದ (ಪ್ಯಾರಡೈಸ್) ಅಂಚಿಗೆ ಬರುತ್ತಾನೆ. ಬಿಯಾಟ್ರಿಸ್ ಸ್ವರ್ಗದ (ಹೆವನ್) ಒಂಬತ್ತನೆಯ ಮಹಲಿನಿಂದ ಬಂದು ಡಾಂಟೆಯನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಾಳೆ. ಅಲ್ಲಿ ದೇವರ ಮಹಾಮಹಿಮೆ ಅವನಿಗೆ ತಿಳಿಯುತ್ತದೆ. ಶ್ರೀ 'ಸೀತಾಸುತ' ಅವರ 'ಹಿರೊಷಿಮಾ' ಕಾವ್ಯದಲ್ಲಿ ಕೊಂಚಮಟ್ಟಿಗೆ ಈ ಎರಡು ಕಾವ್ಯಗಳ ಛಾಯೆ ಕಂಡುಬರುತ್ತದೆ. ಶ್ರೀ 'ಸೀತಾಸುತ' ಅವರು ಮಾನವ ಇತಿಹಾಸವನ್ನು 'ಮಾನವನ ಮಹಾಯಾತ್ರೆ' ಎಂದು ಕರೆದು ಅದು ಆದಿಯಿಂದ ಇದುವರೆಗೆ ಹರಿದುಬಂದ ರೀತಿ ನೀತಿಗಳನ್ನು ವರ್ಣಿಸಿ, ಅದು ಮಾನವೋದ್ಧಾರ ಗಿರಿಶಿಖರವನ್ನೇರಲು ಮುಂದುವರಿಯುತ್ತಿದೆ. ಎಂಬುದನ್ನು ಸೂಚಿಸಿದ್ದಾರೆ. ಈ ಪ್ರಗತಿಯಲ್ಲಿ 'ಷೀಮಾ' ಮಾತೆಯು ಮಾರ್ಗದರ್ಶಕಳಾಗಿ, ಪ್ರೋತ್ಸಾಹಕಳಾಗಿ,

ಪಾಪಕರ್ಮಿಗಳಿಗೆ ಎಂಥ ಯುಮಯಾತನೆಗಳು ಕಾದಿವೆಯೆಂಬುದನ್ನೂ, ಸನ್ಮಾರ್ಗಿಗಳಾಗಿ ಪುಣ್ಯಕಾರ್ಯ ಮಾಡಿದವರಿಗೆ ಎಂಥ ಸ್ವರ್ಗಸುಖ ಒದಗಲಿದೆ ಎಂಬುದನ್ನೂ ತೋರಿಸಿ, ಮಾನವೋದ್ಧಾರಗಿರಿಯನ್ನು ಏರುತ್ತಾಳೆ. ಈ ಸ್ಥೂಲ ಹೋಲಿಕೆಯಿಂದ ಜಾನ್ ಬನ್ಯನ್ ಅವರ ಕಾವ್ಯವೂ, ಡಾಂಟೆಯವರ ಮಹಾಕಾವ್ಯವೂ ಹಿರೋಷೀಮಾ ಕಾವ್ಯರಚನೆಯಲ್ಲಿ ಸ್ವಲ್ಪಮಟ್ಟಿಗೆ ಪ್ರಭಾವ ಬೀರಿವೆಯೆಂದು ನನಗೆ ತೋರುತ್ತದೆ. ಆದರೆ ಶ್ರೀ 'ಸೀತಾಸುತ' ಅವರು ಬಳಸಿರುವ ಕಾವ್ಯತಂತ್ರಗಳೂ ನಿರೂಪಣಾ ವಿಧಾನವೂ ಸಂಪೂರ್ಣವಾಗಿ ಸ್ವತಂತ್ರವಾಗಿವೆ; ಅವರದೇ ಕೌಶಲ. ಇವು ಕಾವ್ಯಮಯವಾಗಿಯೂ, ಭಾರತೀಯ ಸಂಸ್ಕೃತಿಯ ಸುದೃಢ ತಳಹದಿಯ ಮೇಲೆ ಮನೋಜ್ಞವಾಗಿಯೂ ಮೂಡಿಬಂದಿವೆ. ಇದಕ್ಕೆ ಒಂದು ನಿದರ್ಶನವೆಂದರೆ, ಬನ್ಯನ್ ಕವಿ ಮಾನವಸಮಾಜದಲ್ಲಿ ಅಥವಾ ಮನಸ್ಸಿನಲ್ಲಿ ಕಂಡುಬರುವ ದುಷ್ಟಶಕ್ತಿಗಳಿಗೆ ವ್ಯಕ್ತಿಗಳ, ನಗನಗರಗಳ ರೂಪಗಳನ್ನು ಕೊಟ್ಟು ಯಾತ್ರಿಕನು ಅವುಗಳನ್ನು ನಿವಾರಿಸಿಕೊಂಡು ಮುಂದುವರಿಯುವನೆಂಬ 'ಪರ್ಸಾನಿಫಿಕೇಶನ್ (ವ್ಯಕ್ತಿ ರೂಪ) ತಂತ್ರವನ್ನು ಮಾತ್ರ ಬಳಸಿದ್ದಾನೆ. ಆದರೆ ಶ್ರೀ 'ಸೀತಾಸುತ' ಅವರು ಮಾನವ ಸಮಾಜದಲ್ಲಿ ಕಂಡುಬರುವ ನೂರಾರು ವಿವಿಧ ದೃಶ್ಯಗಳನ್ನು, ನೇರವಾಗಿ, ವಿವರವಾಗಿ, ಯಥಾರ್ಥವಾಗಿ ಚಿತ್ರಿಸಿ, ಅವುಗಳ ಆಗು–ಹೋಗುಗಳನ್ನು ಮನದಟ್ಟು ಮಾಡಿಸುತ್ತಾರೆ. ಡಾಂಟೆ ಕವಿ ತನ್ನ ಪ್ರೇಯಸಿಯ ನೆನಪಿನಿಂದ ಸ್ವರ್ಗದ ಕಡೆಗೆ ಮನತಿರುಗಿಸಿ ಅಲ್ಲಿಗೆ ಹೋಗುವ ಮಹದಾಸೆಯಿಂದ ಆ ಕಣಸು ಕಾಣುತ್ತಾನೆ. ಆದರೆ ಹಿರೋಷೀಮಾ ಕಾವ್ಯದಲ್ಲಿ, ಇಪ್ಪತ್ತನೆಯ ಶತಮಾನದ ಅತ್ಯಂತ ಘೋರ ಹಾಗೂ ಮಹಾ ವಿಪತ್ಕಾರಿ ಎನಿಸಿಕೊಂಡ ಅಣ್ವಸ್ತ್ರ ಪ್ರಯೋಗದ ನಗರ ನಿರ್ನಾಮವನ್ನು ಮೂಲವಸ್ತುವನ್ನಾಗಿ ಮಾಡಿಕೊಂಡು ಬಹು ವಿಶಾಲವಾದ ಅರ್ಥವನ್ನು ಕೊಟ್ಟು ತನ್ಮೂಲಕ ಮಾನವನ ಕೊನೆಯ ಗುರಿ ಏನು, ಅದನ್ನು ಸಾಧಿಸುವ ಮಾರ್ಗ ಯಾವುದು ಎಂಬುದನ್ನು ಸೂಚಿಸಿದ್ದಾರೆ. ಹೀಗೆ ಮೇಲೆ ಹೇಳಿದ ಆ ಎರಡು ಪಾಶ್ಚಾತ್ಯ ಕಾವ್ಯಗಳಿಗಿಂತಲೂ ಒಂದು ರೀತಿಯಲ್ಲಿ ಉತ್ತಮತರವೂ, ಆಕರ್ಷಣೀಯವೂ ಆಗಿ ಈ ಕಾವ್ಯ ಮೂಡಿಬಂದಿದೆ.

'ಹಿರೋಷೀಮಾ' ಕಾವ್ಯದ ಅಧ್ಯಯನದಿಂದ ಕಂಡುಬರುವ ಶ್ರೀ 'ಸೀತಾಸುತ' ಅವರ ಒಂದು ಮನೋಧರ್ಮ ನಿವೇದನಾರ್ಹ. 'ಮಾನವೋದ್ಧಾರಗಿರಿ' ಶಿಖರವನ್ನು ಮಾನವನು ಸೇರಬೇಕಾದರೆ ಸ್ತ್ರೀಯ ಮಾರ್ಗದರ್ಶನ, ಪ್ರೇಮ, ಆತ್ಮಶಕ್ತಿ, ಪಾತಿವ್ರತ್ಯ, ಮಾತೃ ಹೃದಯ, ಇವುಗಳ ಅವಶ್ಯಕತೆ ಇದೆ, ಎಂಬುದು ಈ ಕಾವ್ಯದಲ್ಲಿ ಧ್ವನಿತವಾಗಿರುವ ಒಂದು ಪ್ರಮುಖ ಅಂಶ. ಶ್ರೀ 'ಸೀತಾಸುತ' ಅವರಿಗೆ ಸ್ತ್ರೀತ್ವದಲ್ಲಿ ಪೂರ್ಣ ನಂಬಿಕೆ, ಉದಾತ್ತ ಭಾವನೆ ಹಾಗೂ ಗೌರವ. ಅವರ ಕಾವ್ಯನಾಮ 'ಸೀತಾಸುತ' ಈ ಮನೋಧರ್ಮದ ದ್ಯೋತಕವಾಗಿದೆ. ಇತ್ತೀಚೆಗೆ ನಮ್ಮ ರಾಷ್ಟ್ರದ ಅಭಿವೃದ್ಧಿಕಾರ್ಯಗಳಲ್ಲಿ ಬಹು ಮುಖ್ಯವಾದ ಪಾತ್ರವನ್ನು

ಸ್ತ್ರೀಯರಿಗೆ ಕೊಡಬೇಕೆಂದೂ, ಅದಕ್ಕಾಗಿ ಸ್ತ್ರೀ ವಿದ್ಯಾಭ್ಯಾಸ, ಪ್ರಶಿಕ್ಷಣ, ಸ್ವಾವಲಂಬನದಿಂದ ಆರ್ಥಿಕ ಅಭಿವೃದ್ಧಿಗೆ ಅವಕಾಶಗಳನ್ನು ಒದಗಿಸಬೇಕೆಂದು ರಾಷ್ಟ್ರ ನಾಯಕರುಗಳು ಸಾರಿ ಸಾರಿ ಹೇಳುತ್ತಿರುವ ನುಡಿಗಳನ್ನೂ, ಈಗೀಗ ಸ್ತ್ರೀಯರು ಮುಂದುವರಿಯಲು ಪ್ರಾರಂಭಿಸಿರುವುದನ್ನೂ ಗಮನಿಸಿದರೆ, ಶ್ರೀ 'ಸೀತಾಸುತ' ಅವರ ಮನೋಧರ್ಮಕ್ಕೆ ಸಮರ್ಥನೆ ದೊರೆಯುತ್ತದೆ. ಇವರು ಸ್ತ್ರೀ ಪಕ್ಷಪಾತಿಗಳು ಎಂದು, ಇದು ಬಹು ನ್ಯಾಯವಾದುದೆಂದು ಹೇಳಬಹುದು. ತಲತಲಾಂತರದಿಂದ ಪುರುಷಪ್ರಧಾನವಾದ ಮಾನವಕುಲದಲ್ಲಿ ಪುರುಷರೇ ನಾಯಕತ್ವ ವಹಿಸಿ ಸ್ತ್ರೀಯರನ್ನು ದಾಸಿಯರನ್ನಾಗಿ, ಅನುಯಾಯಿಗಳನ್ನಾಗಿ ಮಾಡಿಕೊಂಡ ಪುರುಷರು ಇದುವರೆಗೆ ಸಾಧಿಸಿರುವ ಪ್ರಗತಿಯ ಗುಣಲಕ್ಷಣಗಳನ್ನು ಗಮನಿಸಿದರೆ, ಪುರುಷನ ಮುಂದಾಳುತನ ವಿಫಲಗೊಂಡಿದೆಯೆಂದು ಹೇಳಬಹುದು. ಆದುದರಿಂದ ಮಾನವ ಸಮಾಜದ ಮೂಲ ಪ್ರಕೃತಿದೇವತೆ ಈಗ ಸ್ತ್ರೀಯರಿಗೆ ಮುಂದಾಳುತನವನ್ನು ಕೊಟ್ಟು, ಅವರಿಗೂ ಮಾನವೋದ್ಧಾರ ಮಹಾಕಾರ್ಯದಲ್ಲಿ ಒಂದು ಅವಕಾಶವನ್ನು ಕೊಡಲು ನಿರ್ಧರಿಸಿರುವಳೋ ಏನೋ ಎಂದು ತೋರುತ್ತದೆ.

ಅತ್ಯಾಧುನಿಕ ದೃಷ್ಟಿಯಲ್ಲಿ ಪ್ರಾಚೀನ ಭಾರತೀಯ ಮಾನವೀಯ ಸಂಸ್ಕೃತಿಯ ಸಾರವನ್ನು ವಿಲೀನಗೊಳಿಸಿಕೊಂಡಿರುವುದು ಶ್ರೀ 'ಸೀತಾಸುತ' ಅವರ ಮನೋಧರ್ಮದ ಇನ್ನೊಂದು ಅಂಶ. ಆಧುನಿಕ ವೈಜ್ಞಾನಿಕ ಅಣುಬಾಂಬನ್ನು ವಸ್ತುವನ್ನಾಗಿ ಮಾಡಿಕೊಂಡು ಸನಾತನ ಧರ್ಮದ ರೂಢಮೂಲ ಸಾಂಸ್ಕೃತಿಕ ಮೌಲ್ಯಗಳ ದೃಷ್ಟಿಯಿಂದ ವಿವೇಚಿಸಿ, ಮಾನವನ ಇಂದಿನ ಸಮಾಜದ ಚಿತ್ರವನ್ನು ವಿಶಾಲ ಕಲ್ಪನೆಯಿಂದ ಮೂಡಿಸಿದ್ದಾರೆ. ಈ ಮನೋಧರ್ಮವೂ, ವಿಶಾಲ ದೃಷ್ಟಿಯೂ, ಹಿರೋಷೀಮಾ ಕಾವ್ಯದ ಜೀವಾಳ. ಕನ್ನಡದ ಹಿರಿಕವಿಯೊಬ್ಬರ ನುಡಿ, "ಹೊಸ ಚಿಗುರು ಹಳೆ ಬೇರು" ನೆನಪಿಗೆ ಬರುತ್ತದೆ.

'ಹಿರೋಷೀಮಾ' ಕಾವ್ಯದ ಚೌಕಟ್ಟು — ಗ್ರಂಥಕರ್ತರು ಗ್ರಂಥಾರಂಭದಲ್ಲಿ ಹೀಗೆಂದು ನುಡಿದಿದ್ದಾರೆ: "ಸರ್ವಾಂತರ್ಯಾಮಿಯಾದವಗೆ ಸರ್ವಮಂ ಸಮರ್ಪಿಸಿದಲ್ಲದೆ ಸತ್ಕಾರ್ಯದೊಳ್ ಸಂತೃಪ್ತಿ ಬರ್ಪುದೆ ॥" ಈ ಹಿರಿಯ ಉದಾತ್ತ ಸಮರ್ಪಣಾ ಭಾವನಾ ನಾಂದಿಯ ನಂತರ ಕರ್ತೃವು ತನ್ನ ಆರಾಧ್ಯರಾದ ದೇವತೆಗಳನ್ನೂ, ಮಹಾಪುರುಷರನ್ನೂ ಸ್ಮರಿಸಿ ಸ್ತುತಿಸಿದ್ದಾರೆ. ಕಾಳಿಕಾಂಬ, ಶ್ರೀ ರಾಮಕೃಷ್ಣ ಪರಮಹಂಸ, ಶ್ರೀ ಶಾರದಾದೇವಿ, ಶ್ರೀ ವಿನಾಯಕ, ಶ್ರೀ ವಿವೇಕಾನಂದ, ಅವರ ಮನೆದೇವರೂ ಗ್ರಾಮದೇವತೆಯೂ ಆದ ಈಚಗೆರೆಯ ಹಿರಿದೇವಿ, ಗಾಂಧಿಮಹಾತ್ಮ, ಪ್ರಥಮ ಗುರು ಪುಟ್ಟಾಚಾರ್ಯ—ಇವರುಗಳನ್ನು ಒಬ್ಬೊಬ್ಬರನ್ನಾಗಿ ಸ್ಮರಿಸಿದ್ದಾರೆ. ಈ ಸ್ತುತಿಗಳು ಸರಳ ಹಾಗೂ ಸುಂದರ. ಮುಂದೆ ಕರ್ತೃವು ತಮ್ಮ ಪ್ರವರವನ್ನು ನಿವೇದಿಸಿಕೊಂಡಿದ್ದಾರೆ. ಈ ಪ್ರವರದಲ್ಲಿ ಬರುವ ಒಂದು ಹಿರಿಯ ನುಡಿ ಗಮನಾರ್ಹ: "ಬಾಳನಾಳ್ವನ್ ಅಳಿದಲ್ಲದೆ, ಬರಡೆದೆಗೆ ಮರುಕವ

ತುಂಬಿಕೊಟ್ಟಲ್ಲದೆ, ಆಗಸಕೆ ಮನವ ಹರಿಸಿದಲ್ಲದೆ ಸನ್ನಿಯುನೇ ಬಿಗಿದಪ್ಪಿ ಸರಸತಿಯು ಹರಕೆಯು ಪೊತ್ತಲ್ಲದೆ ಭುವನದ ಭಾಗ್ಯದ ಕಾವ್ಯೋದ್ಭವವಾಗಬಲ್ಲುದೇ ಈ ಗಾಂಪನ ಜಿಪ್ವೆಯೊಳ್ ?" ಎರಡನೆಯ ಸರ್ಗದಲ್ಲಿ ಸಂಕ್ಷಿಪ್ತ ಕಥಾನಿರೂಪಣೆ ಮಾಡಿದ್ದಾರೆ. ಇವರಲ್ಲಿ ಅವರು ಮಾನವನ ಪ್ರಗತಿಯಲ್ಲಿ ಚತುರಾಶ್ರಮಗಳಾದ ಬ್ರಹ್ಮಚರ್ಯಾಶ್ರಮ, ಗೃಹಸ್ಥಾಶ್ರಮ, ವಾನಪ್ರಸ್ಥಾಶ್ರಮ ಮತ್ತು ಸಂನ್ಯಾಸಾಶ್ರಮಗಳನ್ನು ಗುರುತಿಸಿರುವರು. ಜಲಜನಕ ಅಣ್ವಸ್ತ್ರ ತಯಾರಾದ ಇಪ್ಪತ್ತನೆಯ ಶತಮಾನದ ಆದಿಭಾಗಕ್ಕೆ ಮಾನವನ ಬ್ರಹ್ಮಚರ್ಯಾಶ್ರಮ ಮುಗಿದು ಗೃಹಸ್ಥಾಶ್ರಮ ಪ್ರಾರಂಭಗೊಂಡಿತೆಂದೂ, ಅದು ಕಲಿಯುಗದ ಎರಡನೆಯ ಪಾದಕ್ಕೆ ಕೊನೆಗೊಂಡು ಮುಂದೆ ಮೂರನೆಯ ಪಾದದಲ್ಲಿ ವಾನಪ್ರಸ್ಥಾಶ್ರಮವೆಂದೂ, ನಾಲ್ಕನೆಯ ಪಾದದಲ್ಲಿ ಸಂನ್ಯಾಸಾಶ್ರಮವೆಂದೂ, ಮುಂದಿನ ಕೃತಯುಗದಲ್ಲಿ ನವಮಾನವ ಉದಯವಾಗಿ ಮುಂದುವರಿಯುವನೆಂದೂ ಗ್ರಂಥಕರ್ತರ ಅಭಿಮತ. ಪ್ರತಿ ಆಶ್ರಮದ ಪ್ರಧಾನ ಗುಣ ಲಕ್ಷಣಗಳನ್ನು ಅರ್ಥವತ್ತಾಗಿ ನಿರೂಪಿಸಿರುವರು. ಪ್ರತಿ ವ್ಯಕ್ತಿಯ, ರಾಷ್ಟ್ರದ ಮತ್ತು ಇಡಿಯ ಮನುಕುಲದ ಜೀವನದಲ್ಲಿ ಈ ಚತುರಾಶ್ರಮಗಳಿಗೆ ಗ್ರಂಥಕರ್ತರು ಮಹತ್ವವನ್ನು ಕೊಟ್ಟಿರುತ್ತಾರೆ. ಅವರು ತಮ್ಮ ಇಡಿಯ ಕಥನವನ್ನು ಸರ್ಗಗಳಾಗಿ ವಿಂಗಡಿಸಿ ಅವುಗಳಲ್ಲಿ ನಾಲ್ಕು ಸರ್ಗಗಳಿಗೆ ಈ ನಾಲ್ಕು ಆಶ್ರಮಗಳ ಶೀರ್ಷಿಕೆಗಳನ್ನೇ ಕೊಟ್ಟಿರುವುದೂ, ಕೊನೆಯ ಸರ್ಗಕ್ಕೆ 'ಮುಕುತಿ' ಎಂಬ ಶೀರ್ಷಿಕೆಯನ್ನು ಕೊಟ್ಟಿರುವುದೂ ಇದಕ್ಕೆ ನಿದರ್ಶನ.

ಮುಂದೆ ಮಾನವನ ಇತಿಹಾಸವನ್ನು 'ಜಗಜ್ಜೀವನವಾಹಿನಿ', 'ಮಾನವನ ಮಹಾಯಾತ್ರೆ' ಎಂದು ವರ್ಣಿಸಿ ಆದಿಯಿಂದ ಮಾನವನ ಪ್ರಗತಿ ನಾಗರೀಕತೆ ಸಂಸ್ಕೃತಿಗಳಲ್ಲಿ ಹೇಗೆ ಮುಂದುವರಿಯುತ್ತಾ ಬಂದಿರುವುದೆಂಬುದನ್ನು ವರ್ಣಿಸಿದ್ದಾರೆ. ಅವರು ಇಲ್ಲಿ ಹೇಳಿರುವ ಒಂದು ವಿಷಯ ಯೋಚಿಸುವಂಥದು : ಕೃತಯುಗದಿಂದ ತ್ರೇತೆ ದ್ವಾಪರ ಕಲಿಯುಗಗಳಲ್ಲಿಯೂ 'ಮತ್ಸ್ಯನ್ಯಾಯವೇ' ಪ್ರಧಾನವಾಗಿ ಕಂಡು ಬಂದಿದೆ. ಮನುಷ್ಯನು ಎಷ್ಟೇ ಜ್ಞಾನಭಂಡಾರವನ್ನು ತುಂಬಿಸಿಕೊಂಡಿದ್ದರೂ, ದೊಡ್ಡದು ಚಿಕ್ಕದನ್ನು, ಚಿಕ್ಕದು ಇನ್ನೂ ಚಿಕ್ಕದನ್ನು ಹೀಗೆ ನುಂಗಿ ಬೆಳೆಯುತ್ತಿರುವ ಮತ್ಸ್ಯನ್ಯಾಯ ಇಂದಿಗೂ ಕಂಡುಬರುತ್ತಿದೆ. ಮಾನವ ಮಹಾಯಾತ್ರೆಯ ವರ್ಣನೆ ಮಾಡುವಾಗ ಕವಿಯು ಎರಡು ಮಹೋಪಮೆಗಳನ್ನು ಹೃದಯಂಗಮವಾಗಿ ರಚಿಸಿದ್ದಾರೆ. ಒಂದು ಅದನ್ನು ಪಗಡೆಯಾಟಕ್ಕೆ ಹೋಲಿಸಿರುವುದು. ಇನ್ನೊಂದು ಅದರಲ್ಲಿ ನವರಸಗಳನ್ನು ಕಂಡಿರುವುದು. ಗ್ರಂಥಕರ್ತೃವು ಮಾನವನ ಇತಿಹಾಸವನ್ನು 'ಜೀವನವಾಹಿನಿ' ಎಂದು ಕರೆದಿರುವುದು ಅರ್ಥವತ್ತಾಗಿದೆ. ಜಲವಾಹಿನಿಯು ಹೇಗೆ ಎಲ್ಲೂ ನಿಲ್ಲದೆ ಹರಿಯುತ್ತಲೇ ಇರುವುದೋ. ಕ್ಷಣಕ್ಷಣಕ್ಕೂ ಹಳೆಯ ನೀರು ಕೊಚ್ಚಿಹೋಗಿ ಹೊಸ ನೀರು ಬರುತ್ತಿರುವುದೋ. ಜಲವಾಹಿನಿಯು ಇನ್ನೂ ದೊಡ್ಡ ವಾಹಿನಿಗೆ ಸೇರಿಕೊಂಡು ಮುಂದೆ ಸಾಗರವನ್ನು ಸೇರುವುದೋ,

ಸಾಗರದಿಂದ ಆವಿಯಾಗಿ ಪುನಃ ಜಲವಾಗಿ ವಾಹಿನಿಯಾಗಿ ಹರಿಯುತ್ತಲೇ ಇರುವುದೋ, ಮಾನವಜೀವನವಾಹಿನಿಯೂ ಹೀಗೆಯೇ ಅಮರವಾದುದು, ಸರ್ವದಾ ನವೀನವಾಗುತ್ತಿರುವುದು—ಇವೇ ಮೊದಲಾದ ಚಿಂತನೆಗಳು ಜಗಜ್ಜೀವನವಾಹಿನಿ ಎಂಬ ಅಚ್ಚುಕಟ್ಟಾದ ನುಡಿಯಲ್ಲಿ ಧ್ವನಿತವಾಗುತ್ತವೆ. ಈ ಸಂದರ್ಭದಲ್ಲಿ ಕರ್ತೃವು ಕೃತ, ತ್ರೇತ, ದ್ವಾಪರ, ಕಲಿ ಯುಗಧರ್ಮಗಳನ್ನು ವಿವೇಚಿಸಿದ್ದಾರೆ. ಅವರು ಕಲಿಯುಗದ ವಿಷಯದಲ್ಲಿ ಹೇಳುವ ಒಂದು ಮಾತು ಗಮನಾರ್ಹ: "ಅನ್ನ ದಾರಿದ್ರ್ಯಮಂ ನೀಗಲ್ ಯಂತ್ರಂಗಳಂ ನಿರ್ಮಿಸಲು ಅನ್ನಕೇ ಕಡುಬಡತನಂ ಹಿರಿಹಿರಿದಾಗುತ ಬರುತಿರ್ಪುದು ಈ ಯುಗದಚ್ಚರಿ." ಕಲ್ಕ್ಯವತಾರವನ್ನು ಹೇಳುತ್ತ. ಕಲಿಪುರುಷನ ಸ್ವರೂಪವೆಂಥದೆಂದು ತಿಳಿಸಲು ಒಂದು ಸಂಪೂರ್ಣ ನುಡಿಚಿತ್ರವನ್ನೇ ಕೊಟ್ಟಿದ್ದಾರೆ. ಈ ವರ್ಣನೆ ಸಮರ್ಥ ಚಿತ್ರಕಾರನೊಬ್ಬನಿಗೆ ಕಲಿಪುರುಷನ ಚಿತ್ರವನ್ನು ಚಿತ್ರಿಸಲು ಸ್ಫೂರ್ತಿಯನ್ನು ಕೊಡುವುದಲ್ಲದೆ ಒಂದು ಬಗೆಯ ಸವಾಲನ್ನೂ ಹಾಕಿದಂತಿದೆ. "ರೈಲುಕಂಬಿಗಳ ರಕ್ತನಾಳಗಳಿಂ, ತಾರು ತಂತಿಗಳ ಲೋಮನಾಳಗಳಿಂ, ಆಕಾಶವಾಣಿಯ ಕರ್ಣಂಗಳಿಂ, ವಿದ್ಯುಚ್ಛಕ್ತಿಯ ಕಂಗಳಿಂ, ಅಚ್ಚಿನ ಮೊಳೆಗಳ ಎದೆಯಿಂ, ವಿಜ್ಞಾನ ಪ್ರಯೋಗಶಾಲೆಗಳ ಮಿದುಳಿನಿಂ, ಕೈಗಾರಿಕಾ ಕಾರ್ಖಾನೆಗಳ ಕೈಗಳಿಂ, ಹಡಗುಗಳ ಮಲದ್ವಾರದಿಂ, ಉಕ್ಕಿನ ಕಾರ್ಖಾನೆಗಳ ಜಠರದಿಂ, ಶತಘ್ನಿಗಳ ಜಠರಾಗ್ನಿಯಿಂ, ವಾಣಿಜ್ಯೋದ್ಯಮ ಸಂಸ್ಥೆಗಳ ಉಚ್ಛ್ವಾಸ ನಿಶ್ವಾಸಂಗಳಿಂ. ದಂಡುದಾಳಿಗಳ ಕಾಲುಗಳಿಂ, ಮಾನವ ದ್ವೇಷದ ಜಿಹ್ವೆಯಿಂ, ಭೂಗರ್ಭೋತ್ಪನ್ನ ಲೋಹಗಳ ದೇಹದಿಂ, ಅಣುಶಕ್ತಿಯ ಪ್ರಾಣದಿಂ, ದುರಾಶೆಯ ಶಿರದಿಂ, ಪಾಶ್ಚಾತ್ಯ ನಾಗರಿಕತಾ ಕಲ್ಕಿ ಅವತಾರವನೆತ್ತಿ, ಜಗದ ರಾಷ್ಟ್ರ ಜನಾಂಗಗಳ ಶಕ್ತಿಯ ಸಮತೋಲನದ ರಾಜತಂತ್ರದ ಮಾರ್ಗಮಂ ಪಿಡಿದು, ಪೃಥ್ವೀಪತಿಯ ಕಿರೀಟಮಂ ಧರಿಸುವ ಕುತಂತ್ರದ, ಶಾಂತಿಬೀಜಮಂ ಬಿತ್ತುವ ಪ್ರಚ್ಛನ್ನತೆಯೊಳು ಅಶಾಂತಿ ಬೆಳೆಯಂ ಬೆಳೆಯಲ್ ಉದ್ಯುಕ್ತನಾಗಿ ತ್ರಿವಿಕ್ರಮನಾಗಲ್ ಎಳಸುತಿರ್ಪನ್." ಈ ಕಲ್ಕಿಯ ವಿರಾಟ್‌ರೂಪ ನಮ್ಮ ಕಣ್ಣೆದುರಿಗೇ ಇದೆ. ನೋಡಬಲ್ಲ ಮನಸ್ಸು, ಶಕ್ತಿಗಳಿದ್ದರೆ.

ಹಿರೋಷೀಮಾ ನಗರಿ—ಮೇಲೆ ವಿವರಿಸಿದ ಪ್ರಾಚೀನ ಮತ್ತು ಅರ್ವಾಚೀನ ಸಂಸ್ಕೃತಿಗಳನ್ನು ತಮ್ಮ ಕಾವ್ಯದ ತಳಹದಿಯನ್ನಾಗಿ ಹಾಕಿಕೊಂಡ ಶ್ರೀ 'ಸೀತಾಸುತ' ಅವರು ಮುಂದೆ ಕಾವ್ಯದ ಕೇಂದ್ರ ಮತ್ತು ಪ್ರಧಾನ ಪ್ರತಿಮಾ ವಸ್ತುವಾದ ಹಿರೋಷೀಮಾ ನಗರಿಯ ಪ್ರಸ್ತಾಪ ಮಾಡುತ್ತಾರೆ. ಭೌಗೋಳಿಕ ಹಿರೋಷೀಮಾ ನಗರ ಹೇಗಿತ್ತೆಂಬ ವಿಷಯ ಕವಿಗೆ ತಿಳಿದಿತ್ತೋ ಇಲ್ಲವೋ: ಆದರೆ ಕಾವ್ಯದಲ್ಲಿ ಬರುವ ವರ್ಣನೆಯೆಲ್ಲಾ ಸುರಸ ಕಾದಂಬರಿಯೊಂದರಲ್ಲಿ ಕಾದಂಬರಿಕಾರ ಕೊಡುವ ಪ್ರದರ್ಶನಗಾರಂಗದ ನಗರವೊಂದರ ಆಕರ್ಷಣೀಯ ವರ್ಣನೆ. ಎಂದು ಭಾವಿಸುವುದು ಸೂಕ್ತ. ಈ ನಗರವು ಇಡಿಯ ಮಾನವಕುಲದ ಇಂದಿನ ನವನಾಗರಿಕ ನಗರಗಳ

ಒಂದು ಪ್ರತಿನಿಧಿಯಾದ ಆದರ್ಶ ನಗರದ ವರ್ಣನೆ. ಗ್ರಂಥಕರ್ತರು ಈ ನಗರವು ಇಡೀ ಮಾನವ ನಗರಗಳ ಸಂಕೇತ ಎಂದು ಹೇಳಿದ್ದಾರೆ. ಈ ನಗರವನ್ನು ಜಪಾನೀಯ ನಾವಿಕರು ಮತ್ತು ವರ್ತಕರು ಬುದ್ಧಾವತಾರವಾದ 'ದ್ವಿಸಹಸ್ರ ಸಂವತ್ಸರಂಗಳ್ ಉರುಳಿದ ಸಮಯದೊಳ್' ಕಾರ್ತಿಕ ಮಾಸದ ಶುಕ್ಲಪಕ್ಷದ ವ್ಯಾಸಪೂರ್ಣಿಮೆ ಯಂದು ಸ್ಥಾಪಿಸಿದರು ಎಂದು ಗ್ರಂಥಕರ್ತರು ಹೇಳುತ್ತಾರೆ. ಇದಕ್ಕೆ ಐತಿಹಾಸಿಕ ಆಧಾರವಿದ್ದಂತೆ ತೋರುವುದಿಲ್ಲ. ಆದರೆ ಈ ಭೌಗೋಳಿಕ ನಗರದ ವಿನಾಶದ ದಿನ ವನ್ನು, ಘಳಿಗೆಯನ್ನು ಕರಾರುವಾಕ್ ಪಂಚಾಂಗದಿಂದ ಹುಡುಕಿ ಹೇಳಬಹುದು. ಆದರೆ ಕರ್ತೃವು ಆ ಗೋಜಿಗೆ ಹೋಗುವುದಿಲ್ಲ. ಈ ನಗರದ ರಾಜ ಹಿರೊ' ರಾಣಿ ಷೀಮಾ, ಇವರು ಇಡಿಯ ಮಾನವ ಕುಲದ ನರನಾರಿಯರ ಪ್ರತಿನಿಧಿಗಳು. ಅವರ ಸಂಕಷ್ಟಗಳು, ನೋವು ಬೇನೆಗಳು, ಸುಖ ಸಂತೋಷಗಳು, ಆಮೋದ ಪ್ರಮೋದಗಳು ಇಡಿಯ ಮಾನವಕುಲದ ಭಾವಗಳ ಅನುಭವಗಳ ಪ್ರತೀಕ. ಅಣು-ಬಾಂಬು ನಗರದ ಮೇಲೆ ಸಿಡಿದುಬಿದ್ದ ಕಾಲದಲ್ಲಿ ಷೀಮಾ ರಾಣಿ ಪ್ರಸವ ವೇದನೆಯನ್ನು ಅನುಭವಿಸುತ್ತಿದ್ದಳು. ತಾಯಿ ಮಗುವೊಂದಕ್ಕೆ ಜನ್ಮಕೊಡುವ ಪವಿತ್ರ ಕಾರ್ಯವನ್ನು ಕವಿ 'ಸೃಷ್ಟಿಯಜ್ಞ' ಎಂಬ ಮನೋಜ್ಞವಾದ ಮಾತಿನಿಂದ ವರ್ಣಿಸಿದ್ದಾರೆ. ಅಣುಬಾಂಬನ್ನು ನಗರದ ಮೇಲೆ ಎಸೆದ ವೈಮಾನಿಕನನ್ನು 'ಭಸ್ಮಾಸುರ' ಎಂದು ಅರ್ಥವತ್ತಾಗಿ ವರ್ಣಿಸಿದ್ದಾರೆ. ನಗರದ ವಿವಿಧ ಭಾಗಗಳಲ್ಲಿ, ವಿವಿಧ ಪ್ರಜಾವರ್ಗಗಳಲ್ಲಿ ಅಣುಬಾಂಬು ಸಿಡಿದುಬಿದ್ದ ವೇಳೆಯಲ್ಲಿ ನಗರದಲ್ಲಿ ನಡೆಯುತ್ತಿದ್ದ ನೂರಾರು ಚಟುವಟಿಕೆಗಳ, ಮಾತುಕತೆಗಳ, ಘಟನೆಗಳ ವಿವರವಾದ ವರ್ಣನೆಗಳನ್ನು ಗ್ರಂಥಕರ್ತರು ಕೊಟ್ಟಿದ್ದಾರೆ. ಈ ವರ್ಣನೆಗಳ ಪ್ರತಿಯೊಂದು ದೃಶ್ಯವೂ, ಸಂಪೂರ್ಣ ಚಿತ್ರಣದಿಂದಲೂ, ಭಾವನೆಗಳಿಂದಲೂ ಸಂವೇದನೆಗಳಿಂದಲೂ, ಭಾವೋದ್ರೇಕಗಳಿಂದಲೂ ಕೂಡಿ ಸಹಜಸುಂದರವಾಗಿದೆ. ಪ್ರತಿಯೊಂದು ದೃಶ್ಯದ ಕೊನೆಗೂ ಅಣ್ವಸ್ತ್ರದ ವಿಪತ್ತಿನ ಸೂಚಕವಾಗಿ 'ಬಿತ್ತೋ ಬಿತ್ತೋ ಭಸ್ಮಾಸುರನ ಆಟಂಬಾಂಬ್ ಥಂ ಥಮಾರೆಂದು' ಎಂದು ಹೇಳಿರುವುದು ಈ ಕಾವ್ಯದ ಹಾಡಿಗೆ ಪಲ್ಲವಿಯನ್ನು ಹಾಡಿದಂತೆ ವಿನಾಶದ ಭಯಾನಕತೆಯನ್ನು ಓದುಗರ ಮನಸ್ಸಿನ ಮೇಲೆ ಪರಿಣಾಮಕಾರಿಯಾಗಿ ಮಾಡುತ್ತದೆ. ಕಾವ್ಯದಲ್ಲಿ ಈ ಭಾಗವೇ ಪ್ರಧಾನ ವಾದ ಮತ್ತು ಹಿರಿದಾದ ಮತ್ತು ನೀಳವಾದ ಭಾಗ. ಈ ದೃಶ್ಯಗಳಲ್ಲಿ ಕೆಲವನ್ನು ಈ ಲೇಖನದ ಕೊನೆಯಲ್ಲಿ ಉದ್ಧರಿಸಿದ್ದೇನೆ. ಕೆಲವು ಒಳ್ನುಡಿಗಳನ್ನು, ದೃಶ್ಯ ವರ್ಣನೆಗಳನ್ನೂ ಸೇರಿಸಿದ್ದೇನೆ. ಇವುಗಳಿಂದ ಈ ಲೇಖನದ ಓದುಗರಿಗೆ ಕಾವ್ಯದ ಒಂದು ಇಣುಕುನೋಟ ದೊರೆಯುವುದೆಂದು ನಂಬಿದ್ದೇನೆ. ಪದಗಳನ್ನು ಬಿಡಿಬಿಡಿಸಿ ಓದಲು ಸರಾಗವಾಗುವಂತೆ ಬರೆದಿದ್ದೇನೆ. ಇವುಗಳಿಂದ ಕಾವ್ಯದ ಭಾಷೆ, ಕವಿಯ ಶೈಲಿ, ಮನೋದೃಷ್ಟಿ ಇವುಗಳ ಪರಿಚಯವಾಗುವುದಲ್ಲದೆ, ಇಡಿಯ ಕಾವ್ಯವನ್ನು ಓದಬೇಕೆಂಬ ಸ್ಫೂರ್ತಿ ಮತ್ತು ಪ್ರೇರಣೆ ಉಂಟಾಗಬಹುದೆಂದು ಆಶಿಸುತ್ತೇನೆ.

ಈ ದೃಶ್ಯಗಳೆಲ್ಲವೂ ಇಡೀ ಮಾನವಕುಲದ ವಿವಿಧ ಜೀವನದೃಶ್ಯಗಳ ಪ್ರತಿನಿಧಿಗಳೆಂಬುದನ್ನು ನಾವು ಮರೆಯಬಾರದು.

ಈ ಕಾವ್ಯದಲ್ಲಿ ಬರುವ ನೂರಾರು ದೃಶ್ಯಗಳು ವೈವಿಧ್ಯಮಯವಾಗಿರುವಂತೆಯೇ ವ್ಯಾಪ್ತಿಯಲ್ಲಿ ವಿಶಾಲವೂ ಆಗಿವೆ. ಶಿಶುಜನನದಿಂದ ಹಿಡಿದು ವೃದ್ಧಾಪ್ಯದ ಕೊನೆಯುಂಚಿನವರೆಗೆ, ಕಡುಬಡತನದಿಂದ ಹಿಡಿದು ಶ್ರೀಮಂತಿಕೆಯ ಸುಖಲೋಲುಪತಾ ಜೀವನದವರೆಗೆ, ಭಿಕ್ಷುಕರಿಂದ ಹಿಡಿದು ರಾಜ ರಾಣಿಯರವರೆಗೆ, ಗ್ರಾಮ ನಗರಗಳಿಂದ ಹಿಡಿದು ರಾಷ್ಟ್ರ ಅಂತಾರಾಷ್ಟ್ರೀಯ ವಿಷಯಗಳವರೆಗೆ ವಿವಿಧ ಮಟ್ಟಗಳ, ಪ್ರಕಾರಗಳ, ಜನಜೀವನಗಳ ದೃಶ್ಯಗಳು ಚಿತ್ರಿತವಾಗಿವೆ. ಇವುಗಳಿಂದ ಕವಿ–ಗ್ರಂಥಕರ್ತರ ನಿರೀಕ್ಷಣಾಧ್ಯಯನದ ಸೂಕ್ಷ್ಮಶಕ್ತಿ, ಆಳವಾದ ಚಿಂತನಸಾಮರ್ಥ್ಯವೂ, ಸೂಕ್ಷ್ಮದಲ್ಲಿಯೂ ವಿಶಾಲಾರ್ಥವನ್ನು ಕಾಣುವ ದೃಷ್ಟಿಯೂ, ಮನುಕುಲದ ಹಿಂದು, ಇಂದು, ಮುಂದುಗಳ ಐತಿಹಾಸಿಕ ತುಲನಾತ್ಮಕ ವಿವೇಚನೆಯೂ ಮಾನವನ ಭವಿಷ್ಯದಲ್ಲಿ ಇಟ್ಟಿರುವ ಆಶಾವಾದಯುತ ಭಾವನೆಯೂ ಕಂಡುಬರುತ್ತವೆ. ಅವರ ದೀರ್ಘ ಜೀವನದ ಅನುಭವ ಮತ್ತು ಅನುಭಾವಗಳೂ, ಪರಿಪಕ್ವವಾದ ಮನಸ್ಸೂ, ಕರುಣಾರ್ದ್ರ ಹೃದಯವೂ ಇವರ ವರ್ಣನೆಗಳಿಂದ ವೇದ್ಯವಾಗುತ್ತವೆ. ಅನುಭವಪೂರ್ಣವಾದ ನಾಣ್ಣುಡಿಗಳಂಥ ವಾಕ್ಯಗಳು ಕಥನದ ಉದ್ದಕ್ಕೂ ಅಲ್ಲಲ್ಲಿ ಕಂಡುಬರುತ್ತವೆ.

ಶ್ರೀ 'ಸೀತಾಸುತ' ಅವರ ಈ ಕಾವ್ಯ ಎಂಥ ಓದುಗರಿಗೆ ಪ್ರಿಯ ಎನ್ನುವುದು ವಿವೇಚನಾರ್ಹ. ಜೀವನದ ಅನುಭವವನ್ನು ತಕ್ಕಮಟ್ಟಿಗೆ ಗಳಿಸಿದ್ದು ಸ್ವಲ್ಪ ಮಟ್ಟಿಗಾದರೂ ಕನ್ನಡ ಭಾಷಾಜ್ಞಾನವಿರುವ ಮಧ್ಯಮ ವಯಸ್ಸಿನವರಿಗೂ, ವೃದ್ಧಾಪ್ಯವು ಸಮೀಪಿಸುತ್ತಿರುವವರಿಗೂ, ಸನಾತನ ಧರ್ಮ, ಸಂಸ್ಕೃತಿಗಳಲ್ಲಿ ದೃಢ ವಿಶ್ವಾಸವಿರುವವರಿಗೂ, ಈ ಕಾವ್ಯ ಪ್ರಿಯವಾಗುವುದು ನಿಸ್ಸಂದೇಹ. ಇಂದಿನ ಕಿಶೋರಾವಸ್ಥೆಯಲ್ಲಿರುವ ಯುವಕ, ಯುವತಿಯರು ಸಾಮಾನ್ಯವಾಗಿ ಪ್ರಣಯದ, ಪತ್ತೇದಾರಿಯ, ಕೊಲೆ, ದರೋಡೆಗಳ ಕಾದಂಬರಿಗಳಲ್ಲಿಯೇ ಮಗ್ನರಾಗಿ ಅವೇ ಉತ್ತಮ ಸಾಹಿತ್ಯವೆಂದು ನಂಬಿರುವುದರಿಂದ ಅವರಿಗೆ ಈ ಕಾವ್ಯದ ರಸಾಸ್ವಾದನೆ ಮಾಡುವಷ್ಟು ತಾಳ್ಮೆ, ಸಹನೆಗಳು ಇರುವುದಿಲ್ಲವೆಂದು ನನ್ನ ಅನಿಸಿಕೆ. ಆದರೆ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ವ್ಯಾಸಂಗ ಮಾಡುತ್ತಿರುವ ಮತ್ತು ಸಂಶೋಧನೆಗಳಲ್ಲಿ ತೊಡಗಿರುವ ಕನ್ನಡ ಭಾಷೆ, ಇತಿಹಾಸ, ದರ್ಶನಶಾಸ್ತ್ರ ಮೊದಲಾದವುಗಳ ವಿದ್ಯಾರ್ಥಿಗಳಿಗೆ ಈ ಕಾವ್ಯವು ಅಧ್ಯಯನಯೋಗ್ಯವಾಗಿದೆ. ಪ್ರತಿ ಶಾಲೆ, ಪ್ರಶಿಕ್ಷಣ ಶಾಲೆ, ಕಾಲೇಜುಗಳ ಗ್ರಂಥಾಲಯಗಳಲ್ಲೂ ಸಾರ್ವಜನಿಕ ಗ್ರಂಥಾಲಯಗಳಲ್ಲೂ ತಪ್ಪದೆ ಇರಲೇಬೇಕಾದ ಗ್ರಂಥವಿದು.

ಶ್ರೀ 'ಸೀತಾಸುತ' ಅವರು ತಮ್ಮ ವೃದ್ಧಾಪ್ಯದಲ್ಲಿ ತಮ್ಮ ದೀರ್ಘ ಜೀವನದ ಆಳವಾದ ಜ್ಞಾನ, ಅನುಭವಗಳನ್ನು ಒಳಗೊಂಡ ಈ ಹೊಸ ವಿಧದ ಕಾವ್ಯವನ್ನು

ರಚಿಸಿ ಕನ್ನಡ ಸಾಹಿತ್ಯ ಮಾತೆಗೆ ಸಮರ್ಪಿಸಿ ಸಂತೃಪ್ತಿ ಪಡೆದು ಧನ್ಯರಾಗಿದ್ದಾರೆ. ಅವರಿಗೆ ನನ್ನ ಅಭಿನಂದನೆಗಳು. ಈ ಕಾವ್ಯದ ಪ್ರತಿಗಳು ಎಲ್ಲಾ ಕಡೆಗೂ ನಿರರ್ಗಳವಾಗಿ ಹರಿದು ಹೋಗಿ, ಬೇಗನೆ ಎರಡನೆಯ ಮುದ್ರಣದ ಬೇಡಿಕೆ ಬರಲೆಂದೂ, ಆ ಮುದ್ರಣದಲ್ಲಿ ಪದಗಳನ್ನು ಬಿಡಿಬಿಡಿಯಾಗಿ ಮುದ್ರಿಸಿ ಮುಂದಿನ ಮುದ್ರಣದ ಓದುಗರಿಗೆ ಓದು ಸರಾಗವಾಗಲೆಂದೂ ಹಾರೈಸುತ್ತೇನೆ.

## ಅವತರಣಿಕೆಗಳು

['ಹಿರೊಷೀಮಾ' ಕಾವ್ಯದಿಂದ ಆರಿಸಿ ಉದ್ಧರಿಸಿದ ಕೆಲವು ವಾಕ್ಯಗಳು ಹಾಗೂ ವರ್ಣನೆಗಳು. ಇವುಗಳು ಗ್ರಂಥದಲ್ಲಿ ಬರುವ ವಾಕ್ಯವೃಂದದ ಸಂಖ್ಯೆಯನ್ನು ಆವರಣ ಚಿಹ್ನೆಗಳಲ್ಲಿ ಸೂಚಿಸಿದೆ.]

1. ಪ್ರಭುಸಂಹಿತೆ ಮೇಣ್ ಮಿತ್ರಸಂಹಿತೆಗಳಂ ಸಮನ್ವಯಗೊಳಿಸಿರ್ಪ ಕಾಂತಾಸಂಹಿತೆಯು ಆದಿ ಪಿತೃವೆನಿಪ್ಪ ವಾಲ್ಮೀಕಿಯು ಪೆಸರಿಂ ನಗರಿಯು ಕೇಂದ್ರವೃತ್ತಮನ್ ಅಲಂಕರಿಸಿದರ್. (೩೨)

2. ಸಂಪರ್ಕಮೋಹಿನಿ – (೩) ಸಂಸಾರದೊಳ್ ಸಂಪರ್ಕಸಾಧನಮ್ ಅತ್ಯಮೂಲ್ಯಂ. ಅತಿಸ್ನೇಹ ಗತಿಗೇಡೆಂತೊ ಅತಿಸಂಪರ್ಕಮ್ ಅತಿವ್ಯಸನಕರಂ ಮೇಣ್ ಅತಿ ಅಶಾಂತಿಯು ನೆಲೆ ಕಣಾ. (೫೧)

3. ಭವಿಷ್ಯದೊಳ್ ಸುದ್ದಿಯು ಯಂತ್ರಂಗಳೇ ಜಗದ ಮೆದುಳಾಗಿ ಪರಿವರ್ತನೆಗೊಳ್ಳುವುದೈ ! ! (೫೩)

4. ಜಗಜ್ಜೀವನವಾಹಿನಿ ಹರಿದುಬಂದಿತ್ತು. ರಣಗೃಧ್ರಂ ಯೂರೋಪು ಕಣದೊಳ್ ಹೇರುಣಿಸನ್ ಉಂಡುಂಡು, ಪೂರ್ವದತ್ತ ಹಾರಿ, ಆಗ್ನೇಯ ದೇಶಂಗಳಂ ಮೇಣ್ ಆದಿತ್ಯೋದ್ಭವ ಸಾಮ್ರಾಜ್ಯದ ರಣಕ್ಷೇತ್ರಮಂ ವೀಕ್ಷಿಸುತ, ಫ್ಯೂಜಿಯಾಮಾ ಶಿಖರವನ್ ಅಡರಿ ಕಾದಿತ್ತು. (೭೩)

5. ಮಿಥುನ ಪ್ರಕರಣವೇ ರಾಮಾಯಣ. ಮೈಥುನೋತ್ಸವವೇ ಮಹಾಭಾರತಂ. ಮನದ ಮಿಥುನ ಮೈಯ ಮಿಥುನ ಇದೇ ಮಾನವ ಜೀವನದ ಕಥನ. (೭೮)

6. ಸುರೋದ್ಯಾನವನದಿಂ ಕುಸಿದುಬಿದ್ದ ಕುಸುಮವಿದು. ಇದರ ಹೃದಯರಂಗದೊಳ್ ದೇವ ದೇವಂ ಅದೃಶ್ಯನಾಗಿರ್ಪಂ. ಹಿರಿಯರಿಗರಿವಾಗದ ನನ್ನೀ ಕಂದನೆದೆಯೊಳಗೆ ಸುಪ್ತಾವಸ್ಥೆಯೊಳ್ ವಿರಾಜಿಸುತ್ತಿರ್ಪಂ ಒಂದೊಂದು ಕಂದನುಂ ದೇವ ದೇವನ ನವಕಲೆಯಾಗಿ ಕುಸುಮವಾಗಿ ನವದರ್ಶನವಂ ಪೊಸ ಪೊಸ ಬಾಳ್ಗುರಿಯಂ ಸಾರುವ ದೂತನಾಗಿ ಧರೆಗಿಳಿಯುತಿರ್ಪುದೇನ್ ಅಚ್ಚರಿಯೋ? (೮೫)

7. ಸಹನೆ ಪ್ರೇಮ ಸಂಯಮ ನಿಸ್ವಾರ್ಥತೆಗಳಂ ಬೋಧಿಪ ವಿಶ್ವವಿದ್ಯಾನಿಲಯಂ ಕಂದನೆ ಕಣಾ ! ! (೮೬)

8. ನಿದ್ದೆ ಪ್ರಕೃತಿಯ ಮಾಯಾ ಮುಸುಕು. (೯೭)

9. ಇಂತು ಮಾನವ ಶಿಶು, ಮಾನವ ಶೈಶವಾವಸ್ಥೆಯೊಳು ಪ್ರಕೃತಿ ಮಾತೆಯ ಮಡಿಲೊಳ್ ಮಲಗಿ ಅವಳ ಪೀಯೂಷಮಂ ಹೀರಿ ಸ್ವೇಚ್ಛೆಯಲಿ ಮಾತೆಯ ನಿಯಮ ಬಂಧನದಲಿ ಬೆಳೆದು ಬಾಳಿ ಬದುಕಿದನು ಶತಶತಮಾನಂಗಳ್. (೧೦೫)

10. ನವರಸಗರ್ಭಿತ ಬೃಹತ್ ಕಾವ್ಯಂ ಸೃಷ್ಟಿಯಾಗಿ ಕಾವ್ಯಾನಂದಂ ನಿತ್ಯವಾಯ್ತು. ಹಿಮಾಚ್ಛಾದಿತ ಶ್ವೇತಮುಗ್ಧ ನಗಗಳಿಂ ಶಾಂತಿರಸಮಂ, ಮೇಘವರ್ಷೋತ್ಪನ್ನ ನದಿ ನದಗಳಿಂ ಕರುಣರಸಮಂ, ವನವೃಕ್ಷ ಪಚ್ಚೆ ಪೈರುಗಳ ಮೇಲಿರ್ಪ ಹಿಮಮಣಿಗಳ ದರ್ಪಣದಿಂ ಪ್ರತಿಬಿಂಬಿಪ ಅರುಣನ ಕಿರಣಗಳಿಂ ಮೇಣ್ ಇಂದ್ರ ಚಾಪದಿಂ ಶೃಂಗಾರರಸಮಂ, ಭೂಕಂಪ ಜ್ವಾಲಾಮುಖಿಗಳ ಯಜ್ಞದಿಂ ಭಯಾನಕ ರಸಮಂ, ಸಾಗರದ ಅಂತರಾಳದೊಳ್ ಎಸಗುತಿರ್ಪ ಕ್ರೀಡೆಗಳಿಂ ಭೀಭತ್ಸ ರಸಮಂ, ಜಲಾಗ್ನಿ ಪ್ರಳಯಂಗಳಿಂ ರೌದ್ರರಸಮಂ, ಶಶಿ ಸೂರ್ಯರ ಗತಿಯಿಂ ಹಾಸ್ಯರಸಮಂ, ಮೇಣ್ ನಿಶೆಯ ಮುತ್ತಿಗೆಯಿಂ ಶೋಕರಸಂಗಳಂ ವ್ಯಕ್ತಗೊಳಿಸಿ, ತ್ರಿಮೂರ್ತಿಗಳಂ ತ್ರಿಮಾತೆಯರಂ ಕಾವ್ಯ ನಾಯಕ ನಾಯಕಿಯರಾಗಿ ನೆಗಳ್ದು, ನಕ್ಷತ್ರಂಗಳ್ ಅಕ್ಷರಂಗಳಿಂ ಜೀವನದ ಹೊತ್ತಗೆಯಂ ತ್ರಿಪದಿ ಷಟ್ಪದಿಗಳೊಳ್ ನಿರೂಪಿಸಿ, ಗೋಳಗಾನದಿಂ ಕಾವ್ಯಧ್ವನಿಗೈಯ್ಯುತಿದೆ. ಆತ್ಮಕ್ರೀಡಾ ಕಾವ್ಯಾನಂದ ವಾಹಿನಿ ಪರಿಯುತಿದೆ, ಪರಿಯುತಿದೆ ! (15)

11. ಜ್ಞಾನವೇ ಶಕ್ತಿ, ಶಕ್ತಿಯಿಂ ಸಾಧನೆ, ಸಾಧನೆಯಿಂ ಸಾಕ್ಷಾತ್ಕಾರಂ, ಸಾಕ್ಷಾತ್ಕಾರದಿಂದೆಡೆಬಿಡದ ಶಾಂತಿ ಜ್ಞಾನದ ಗುರಿ. (೧೬೪)

12. ಸರ್ವರ್ಗೆ ಸರ್ವಾಂಗಗಳ್ ಸಮಾನವಾಗಿರ್ಪೊಡಂ ಇಂದ್ರಿಯ ನಿಗ್ರಹಮಂ ಸರ್ವರ್ ಸಮವಾಗಿ ಮಾಳ್ಪರೇಂ ? (೧೬೭)

13. ಸಮಾಜದ ಹೊಗಳಿಕೆ ತೆಗಳಿಕೆಗಳ ಪೊರೆಯಂ ಪೊತ್ತು ಸ್ಮಶಾನ ಯಾತ್ರೆಯಂ ಕೈಗೊಳ್ಳದಿರ್ಪ ವ್ಯಕ್ತಿ ಅದಾವನಿರ್ಪನ್ನೈ. (೨೨೧)

14. ಬಾಲ್ಯದ ಗೆಳೆತನ ಮುಪ್ಪಿನತನಕವಿರುವೊಡದು ನನ್ನಿಯ ಕೆಳೆ (೨೨೨)

15. ಬಡತನ ಎಂಬುದೊಂದು ಮತಿ ಮನದ ಎರಕ. ಸ್ವಯಂಕೃತ ಕರ್ಮವದು ಮನುಜಂಗೆ. ಆಲಸ್ಯತನದಿಂದ ಅವಿವೇಕದಿಂ, ಮದ್ಯಸೇವನೆಯಿಂ, ದ್ಯೂತದ ಇಂದ್ರಿಯಲೋಲುಪತೆಯಿಂ ಜನಿಸಿದ ದಾರಿದ್ರ್ಯಂ ನಿಜದಾರಿದ್ರ್ಯಮಲ್ಲಂ: ಅದು ಅವಿವೇಕದ ಕರ್ಮಫಲಮಲ್ತೆ ! (೨೭೫)

16. ಕಾಫಿಯಂ ಕುಡಿಯುತಿರ್ಪಾಗ ಕಾಫಿಕಾಡಿನ ಕಾರ್ಮಿಕರ ಕಷ್ಟ ಕಾರ್ಪಣ್ಯಂಗಳಂ ಸ್ಮರಿಸುವರೇಂ ? (೨೬೨).

17. ಕಿವಿಯುಗಲದ ರೊಟ್ಟಿಯಂ ಕೊಟ್ಟವರನ್ ಮರಣಪರ್ಯಂತ ನೆನೆಯುವುದು ಎಮ್ಮ ಕುಲಕೆ ಮೀಸಲ್ಕಣಾ. (೩೦೫)

18. ಪಂಜರದೊಳಿರ್ಪ ಗಿಳಿ, ಪಾಲ್ಬಣ್ಬರಲ್ ತಡವಾದುದಂ ಮೇಣ್ ಹಸಿವೆಯುಂ ಸಹಿಸಲಾರದೆ ಮನೆಯೊಳಿರ್ಪ ಮತ್ರಕಾಶಿನಿಯಂ "ಸಾಕು, ಸಾಕು ಉಪಪತಿಯ ಸಹವಾಸ, ಪೇಳ್ದೀಳುವೆ ಮಾರಾಯರ್ಮನೆಗೆ ಬಂದಾಗ ಎಂದು ಎಚ್ಚರಿಸುತ್ತ, ಪಾ, ಪಾ ಎಂದದು ಕೂಗಿದುದಕೆ ಮಾರುತ್ತರವಂ ನೀಡುತ್ತ, ಪಾಲ್ಗಿ ಬೆಣ್ಣೆಯುಂ ಬೆರಸಿ, ತನಿತನಿಯಾದ ಪಣ್ಗೊಳಿಗಳಂ ತರುತಿರ್ಪೆನ್, ನೀನೆನ್ನ ಗುಟ್ಟಂ ರಟ್ಟು ಮಾಡದಿರಲೆಂದವಳ್ ಮೆಲ್ಲಮೆಲ್ಲಗೆ ಮದ್ದಾನೆಯಂತೆ ಭಯಮಂ ಗರ್ಭದೊಳ್ ಧರಿಸಿ ಬರುತಿರ್ಪಾಗ, ಕಳಕಂಠಂ ಒಟ ಒಟಗುಟ್ಟುತಿರ್ಪಾಗ...... (೩೩೦) ...... ಬಿತ್ತೋ ಬಿತ್ತು ಬಿಳಿಯ ಭಸ್ಮಾಸುರನ ಬಾಂಬು ಢಂ ಢಂ ಢಮಾರೆಂದು ಹಿರೊಷೀಮಾ ನಗರದ ಜಗದ ಪ್ರತಿನಿಧಿಯ ನರನಾರಿಯರಂ ಕೊನೆಗಾಣಿಸಲ್ ನಿರಾಶಾಂಗನೆ ನಿಡಿನಿಮಿರಿ ನಿಂದಳ್ ನಿಶಾಚರೆಯಾಗಿ ; ಕಬ್ಬೊಗೆ ಕೃಷ್ಣವರ್ಣೀಯರ ಯಜ್ಞಪಶುವಿನ ಯೂಪಸ್ತಂಭದ ರೂಪವನಾಂತ ತಿರೆಯಾಗಸಕೆ ನಿಂತಿತು. (೩೪೨)

19. ಜೀವನ ಜಹಜು ಸಾಗಿ ಸಾಗಿ ಮುಂದೆ ಹೋಗಿ ವಿನಾಶ ಸಾಗರಸಂಗಮದೊಳು ಮುಳುಗುತಿರುವುದ ನೋಡಿರುವಿರಾ ಮರುಳ ಮನುಜರೇ ನೋಡಿದಿರಾ ? ಮುಳುಗುವ ಮುನ್ನ ಸತ್ಯಾಹಿಂಸೆಗಳ ಲಂಗರು ಹಾಕಿ ಬಿಡುಗಡೆಯ ಬಂದರಿನೊಳು ಬಂಧಿಸಿರೋ, ಮರುಳ ಮನುಜರೇ, ಬಂಧಿಸಿರೊ. (೫೧೮)

20. ವಂದಿಪೆ ಜಗದಂಬೆ, ವಂದಿಪೆ ಜಗದಂಬೆ ಅಹರ್ನಿಶಿ ವಂದಿಪೆ. ಜೈ ಜಗಜ್ಜನನಿ, ಜೈಜಗಜ್ಜನನಿ. ಸಂಕಲ್ಪದಿಂ ಸತ್ಸಂತಾನ ಗರ್ಭೀಕೃತ ಸಾರ್ವಭೌಮಿಣಿ ಭವ್ಯ ಭವಿಷ್ಯ ಜನಾಂಗ ಗರ್ಭಧಾರಿಣಿ ಶ್ವೇತ ಕೃಷ್ಣ ಹರಿದ್ರಾ ಕೇಸರವರ್ಣೀಯರ ಗರ್ಭಿಣಿ. ಆಫ್ರಿಕಾ, ಅಮೇರಿಕಾ, ಆಸ್ಟ್ರೇಲಿಯಾ, ಯೂರೋಪ್, ಏಷ್ಯಾನಿವಾಸಿನಿ ॥ವಂ॥ಜೈ॥

ಆಲ್ಪ್ಸ್, ಕುನ್‌ಲುನ್, ಅಪಲೇಷಿಯಾ, ಫೂಜಿಯಾಮಾ, ಹಿಮಾಲಯಗಳೊಳ್ ಮಾತೃತತ್ವ ಪ್ರತಿಧ್ವನಿತ ವಿಜೃಂಭಿಣಿ. ಡಾನ್ಯೂಬ್ ಅಮೆಜಾನ್ ಯಾಂಗಟ್ಸೆ ನೈಲ್ ಗಂಗಾವಕ್ಷದೊಳ್ ಸಂಸ್ಕೃತಿ ಪ್ರವಾಹಿನಿ ॥ ವಂ ॥ ಜೈ ॥

ದಕ್ಷಿಣೋತ್ತರ ಅಟ್ಲಾಂಟಿಕ್ ಹಿಂದೂ ಶಾಂತಸಾಗರಂಗಳ ಅಲೆ ಅಲೆಯೊಳ್ ಸಾಧ್ವೀ ಗೀತಾಗಾಯಿನಿ. ಸಹರಾ ಅರೇಬಿಯಾ ಗೋಬಿ ಮರಳ ಅವಿದ್ಯಾ ಗರ್ಭಧ್ವಂಸಿನೀ. ಯಹೋದೀ ಹಿಂದು ಬೌದ್ಧ ಮಹಮ್ಮದೀಯ ಕ್ರೈಸ್ತ ಮತ ಮಾನಿನೀ, ಪೂರ್ವಪಶ್ಚಿಮ ಪಾಣಿಗ್ರಹಣಂಗೈಯ್ವ ಕವಿ ಶಾಸಕರ ಗರ್ಭಧಾರಿಣಿ ॥ ವಂ ॥ ಜೈ ॥ ಹೇ ಜಗಜ್ಜನನಿ, ಹೇ ಜಗಜ್ಜನನಿ, ಹರಸು ಹರಸು ನಿನ್ನ ಮನುಕುಲವಾ ಹರಸು ಮನುಕುಲವಾ ॥

—ಎಂ. ಆರ್. ರಾಮಯ್ಯ

# ವಸ್ತು ಸಂಗ್ರಹ

## ಶತಾಬ್ದಿ ಸ್ಮರಣೆ

೧

### ಹರ್ಡೇಕರ ಮಂಜಪ್ಪನವರು

18-2-1806ರಲ್ಲಿ ಬನವಾಸಿಯಲ್ಲಿ ಜನ್ಮತಳೆದ ಹರ್ಡೇಕರ ಮಂಜಪ್ಪನವರು ಒಬ್ಬ ಶ್ರೇಷ್ಠ ಕನ್ನಡಿಗ. ಅವರದು ಸಮಾಜಕ್ಕೆ, ದೇಶಕ್ಕೆ ಅರ್ಪಿಸಿಕೊಂಡ ಬದುಕು. ಸಿರಸಿಯಲ್ಲಿ ಶಿಕ್ಷಣ ಪಡೆದ ಮಂಜಪ್ಪನವರು 1903ರಲ್ಲಿ ಶಿಕ್ಷಕರಾಗಿ ತಮ್ಮ ಔದ್ಯೋಗಿಕ ಜೀವನವನ್ನು ಆರಂಭಿಸಿದರು. ಆದರೆ ಸ್ವಾತಂತ್ರ್ಯ ಚಳವಳಿ ರಾಷ್ಟ್ರೀಯ ಆಂದೋಳನದಲ್ಲಿ ಸಕ್ರಿಯವಾಗಿ ಭಾಗವಹಿಸಬಯಸಿ ಕೆಲಸಕ್ಕೆ ರಾಜೀನಾಮೆಯಿತ್ತರು. ಗಾಂಧೀಜಿಯವರ ಪ್ರಭಾವಕ್ಕೆ ಒಳಗಾದ ಅವರು ಬ್ರಹ್ಮಚರ್ಯದ ಜೊತೆಗೆ ಖಾದೀವ್ರತವನ್ನು ತೊಟ್ಟರು. ಕನ್ನಡ ಜನತೆಯಲ್ಲಿ ಪರಿಸ್ಥಿತಿಯ ಅರಿವುಂಟುಮಾಡಬೇಕಿತ್ತು. ತಿಳಿವಳಿಕೆ ನೀಡಿ ರಾಷ್ಟ್ರಪ್ರಜ್ಞೆ ಮೂಡಿಸಬೇಕಿತ್ತು. ಇದಕ್ಕಾಗಿ ಮಂಜಪ್ಪನವರು ಹಲವಂದದ ಕಾರ್ಯಕ್ರಮಗಳನ್ನು ಕೈಗೊಂಡರು. ಸತ್ಯಾಗ್ರಹ ಧರ್ಮದ ಪ್ರಚಾರಕ್ಕಾಗಿ ಹುಬ್ಬಳ್ಳಿಯಲ್ಲಿ ಸತ್ಯಾಗ್ರಹ ಸಮಾಜವನ್ನೂ; ಹರಿಹರದಲ್ಲಿ ಸತ್ಯಾಗ್ರಹ ಆಶ್ರಮವನ್ನೂ ತೆರೆದರು.

ಹರಿಜನೋದ್ಧಾರ, ಸ್ತ್ರೀ ಸ್ವಾಭಿಮಾನಕ್ಕಾಗಿ ಹೋರಾಟ. ಜನರಲ್ಲಿ ರಾಷ್ಟ್ರಭಕ್ತಿ ಮೂಡಿಸುವುದು, ಹಿಂದೂ ಸಮಾಜದ ಸಂಘಟನೆ. ನವಸಮಾಜ ನಿರ್ಮಾಣದ ಕನಸು, ಧಾರ್ಮಿಕ ಶಿಕ್ಷಣದ ಹೊಲಬು—ಇಂಥ ಮತ್ತುಹಲವು ಕೆಲಸಗಳಲ್ಲಿ ತೊಡಗಿದ್ದ ಮಂಜಪ್ಪನವರು ಇವುಗಳ ನಡುವೆ ಬಿಡುವು ಮಾಡಿಕೊಂಡು ಸಾಹಿತ್ಯ ಕೃಷಿಯನ್ನೂ ಮಾಡಿದರು. ಅವರು ಒಳ್ಳೆಯ ಬರಹಗಾರರು. ಐವತ್ತಕ್ಕೂ ಹೆಚ್ಚಿನ ಕೃತಿಗಳನ್ನು ಅವರು ರಚಿಸಿದ್ದಾರೆ. ಅವುಗಳಲ್ಲಿ ಸ್ವಕರ್ತವ್ಯ ಸಿದ್ಧಾಂತ, ಗಾಂಧೀಚರಿತೆ. ರಾಮತೀರ್ಥರ ಚರಿತೆ, ಆರೋಗ್ಯ ಜೀವನ. ಆಧುನಿಕ ಜರ್ಮನಿ, ಪತಿತೋದ್ಧಾರ, ಬುದ್ಧ ಚರಿತ್ರೆ, ಶ್ರೀ ಬಸವ ಚರಿತ್ರೆ, ಖಾದೀಶಾಸ್ತ್ರ. ಸ್ತ್ರೀನೀತಿ ಸಂಗ್ರಹ, ಭಾರತೀಯರ ದೇಶಭಕ್ತಿ. ಎಚ್ಚತ್ತ ಹಿಂದೂಸ್ಥಾನ. ತರುಣರ ಕೈಪಿಡಿ—ಇವುಗಳನ್ನಾದರೂ ಇಲ್ಲಿ ಉಲ್ಲೇಖಿಸಬೇಕು.

ಆಗ್ಗೆ ತಿಲಕರು 'ಕೇಸರಿ' ಪತ್ರಿಕೆಯ ಮೂಲಕ ವಿಚಾರಪ್ರಚೋದಕ ಲೇಖನಗಳನ್ನು ಪ್ರಕಟಿಸಿ ಜನಜಾಗೃತಿಯನ್ನುಂಟುಮಾಡುತ್ತಿದ್ದರು. ಕನ್ನಡ ಜನತೆಗೆ ಇಂಥ ಸದ್ವಿಚಾರಗಳನ್ನು ನೀಡಬೇಕೆಂಬ ಹಂಬಲದಲ್ಲಿ ಮಂಜಪ್ಪನವರು ಪತ್ರಿಕೆಯ ಆವಶ್ಯಕತೆಯನ್ನು ಕಂಡುಕೊಂಡರು. ಅದಕ್ಕೆಂದೇ ಅವರು ಪತ್ರಿಕೋದ್ಯಮಕ್ಕೆ ಕೈಹಾಕಿದರು. ಹಲವು ಮುಖದ ಅವರ ಸಾರ್ಥಕ ಬದುಕಿನಲ್ಲಿ ಅವರ ಪತ್ರಿಕೋದ್ಯಮ ಸಾಹಸದ ಮುಖವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

ಹ. ಮಂಜಪ್ಪನವರು ಕರ್ನಾಟಕ ಪತ್ರಿಕೋದ್ಯಮದ ಬೆಳ್ಳಿಚುಕ್ಕಿ. ಅವರಿಗೆ ಈ ಉದ್ಯಮ ಹೊಟ್ಟೆಹೊರೆಯಲಿಲ್ಲ, ಪ್ರತಿಷ್ಠೆ ಬೆಳಸಿಕೊಳ್ಳಲೂ ಅಲ್ಲ; ಜನ ಜಾಗೃತಿಗಾಗಿ, ಸತ್ಯದರ್ಶನಕ್ಕಾಗಿ. ಅವರದು ನ್ಯಾಯನಿಷ್ಠುರ ಪತ್ರಿಕಾವೃತ್ತಿ. ರಾಜಕಾರಣ ಮತ್ತು ಧರ್ಮಪ್ರಸಾರ ಸಾಧನವಾಗಿ ಅವರು ಇದನ್ನು ಬಳಸಿದರು. ಇವನ್ನು ಅವರು ರಾಷ್ಟ್ರಸೇವೆಯ ಉಚ್ಚತಮ ಕಾರ್ಯವೆಂದು ಪರಿಗಣಿಸಿದ್ದರು. 'ಧನುರ್ಧಾರಿ', 'ಖಾದೀ ವಿಜಯ', 'ಉದ್ಯೋಗ', 'ಶರಣ ಸಂದೇಶ' – ಇವು ಮಂಜಪ್ಪನವರು ನಡಸಿದ ನಾಲ್ಕು ಪತ್ರಿಕೆಗಳು.

'ಧನುರ್ಧಾರಿ' ದೇಶಭಕ್ತಿಯ ಕಿಡಿಯನ್ನು ಹೊಮ್ಮಿಸಿದರೆ, 'ಖಾದೀ ವಿಜಯ' ಹಾಗೂ 'ಉದ್ಯೋಗ'ಗಳು ಖಾದಿ ಪ್ರಚಾರವನ್ನು ಪರಿಣಾಮಕಾರಿಯಾಗಿ ಮಾಡಿದವು. 'ಶರಣ ಸಂದೇಶ'ವು ಮಾನವ ಪ್ರೇಮವನ್ನು, ಉದಾರ ದೃಷ್ಟಿಯನ್ನು ಬಿಂಬಿಸಿತು. ಪಾರತಂತ್ರ್ಯದ ಸನ್ನಿವೇಶದಲ್ಲೂ ಹಣದಾಸೆಗೆ, ಅಧಿಕಾರದ ಒತ್ತಡಕ್ಕೆ ಮಣಿದು ಅವರು ಪತ್ರಿಕೆಯ ಪಾವಿತ್ರ್ಯವನ್ನು ನೀಗಲಿಲ್ಲ. ಅಂಧಾನುಕರಣೆ ಮಾಡದೆ, ಸ್ವತಂತ್ರ ವಿಚಾರಗಳನ್ನು ನಿರ್ವಿಕಾರ ಮನದಿಂದ, ಸಮತೋಲನ ವಿಮರ್ಶೆಯಿಂದ ನಿಖರವಾಗಿ ಹೇಳುವ ಸಂಪ್ರದಾಯವನ್ನು ಅವರು ಹಾಕಿದರು. ಅವರ ಪತ್ರಿಕೆಗಳು ತರುಣರಿಗೆ ಸ್ಫೂರ್ತಿಯ ಸೆಲೆಯಾದವು : ಜ್ಞಾನ ಪ್ರಸಾರದ ಕೈದೀವಿಗೆಗಳಾದವು,

ಪತ್ರಿಕೋದ್ಯಮ ಒಂದು ದೊಡ್ಡ ಸಾಹಸ. ಅದೂ ಆಗಿನ ಕಾಲದಲ್ಲಿ ಅದು ಹುಚ್ಚುಸಾಹಸವೇ! ಅದನ್ನು ಮಂಜಪ್ಪನವರು ಏಕಾಂಗಶೂರನಾಗಿ, ವೀರನಿಷ್ಠೆಯಿಂದ – ಉರಿಬರಲಿ, ಸಿರಿಬರಲಿ – ನಡಸಿದರು. ತಮ್ಮ ಉದ್ಯಮದಲ್ಲಿ ಅವರು ಲಾಭವನ್ನೆಂದೂ ಕಾಣಲಿಲ್ಲ. ಉಂಟಾದ ಲಾಭವೆಂದರೆ ಜನಜಾಗೃತಿ, ಸಮಾಜ ಸೇವೆ! ಜನಮನ ಸೆಳೆಯುವಂತೆ ಪತ್ರಿಕೆಯನ್ನು ಸುಧಾರಿಸಬೇಕೆಂಬ ಸಲಹೆಗಳು ಅವರಿಗೆ ಬಂದವು. ಅವುಗಳಲ್ಲಿ ಒಬ್ಬರು 'ವಾರಭವಿಷ್ಯ' ಸೇರಿಸಿ ಎಂದಿದ್ದರಂತೆ! ಅದಕ್ಕೆ ಮಂಜಪ್ಪನವರು ಹೇಳಿದ ಉತ್ತರ ಅವರ ದಿಟ್ಟ ನಿಲವಿಗೆ ಹಿಡಿದ ಕನ್ನಡಿ. ಅಷ್ಟೇ ಅಲ್ಲ. ಜನಮನ ತಿದ್ದಬೇಕಾದ ಪತ್ರಿಕೋದ್ಯಮಿಗಳಿಗೆ ಎಚ್ಚರಿಕೆ ಗಂಟೆ! "ನನಗೇ ನಂಬಿಕೆಯಿಲ್ಲದ ಭವಿಷ್ಯವನ್ನು ಜನಗಳಿಂದ ಹೇಗೆ ಓದಿಸಲಿ. ಭವಿಷ್ಯದ ದುಶ್ಚಟವುಳ್ಳ ವಾಚಕರ ದೊಡ್ಡ ಸಂಖ್ಯೆಗಿಂತ ಸದಭಿರುಚಿಯುಳ್ಳ ನಿಷ್ಠಾವಂತ ವಾಚಕರ ಚಿಕ್ಕ ಬಳಗವೇ ಸಾಕು."

ಅವರ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳು ಇವೊತ್ತಿಗೂ ಸಹ ಸತ್ಪ್ರೇರಣೆ ನೀಡುತ್ತವೆ. ಅವರ ಅಗ್ರಲೇಖನಗಳು ನಮ್ಮ ಪತ್ರಿಕಾ ಸಾಹಿತ್ಯಕ್ಕೆ ಅಮೂಲ್ಯ ಕೊಡಿಗೆಗಳಾಗಿವೆ.

ಹರ್ಡೇಕರ ಮಂಜಪ್ಪನವರು ಆಕಾರ, ಆಚಾರಗಳಲ್ಲಿ ಮಹಾತ್ಮ ಗಾಂಧಿಯವರನ್ನೇ ಹೋಲುತ್ತಾರೆ. ಅವರನ್ನು 'ಕರ್ನಾಟಕದ ಗಾಂಧಿ' ಎಂದು ಕರೆದು ಆದರಿಸಿದ್ದು ಉಚಿತವಾಗಿಯೇ ಇದೆ. ದೇಶದ ರಾಜಕೀಯ, ಸಾಮಾಜಿಕ, ಶೈಕ್ಷಣಿಕ

ಹಾಗೂ ಧಾರ್ಮಿಕ ರಂಗಗಳಲ್ಲಿ ಸಾರ್ಥಕ ಕೆಲಸ ಮಾಡಿ ಅವರು ರಾಷ್ಟ್ರದ ಜನನಾಯಕರಿಗೆ, ಮುತ್ಸದ್ದಿಗಳಿಗೆ ಮಾದರಿಯಾಗಿದ್ದಾರೆ.

"ನಾನು ಈ ದಾರಿ ಹಿಡಿಯದೆ (ಬ್ರಹ್ಮಚರ್ಯ, ಆಶ್ರಮವಾಸ, ಸಮರ್ಪಣ ಜೀವನ) ವಿವಾಹಿತನಾಗಿದ್ದರೆ, ಜನಸಂಖ್ಯೆಯಲ್ಲಿ 4–5 ಹೆಚ್ಚಿಸಿ, ನಾಲ್ಕೈದು ಸಾವಿರ ರೂಪಾಯಿ ಕಾದಿಟ್ಟು, ಈಗ ತಿಂಗಳಿಗೆ 15–20 ರೂ. ವಿಶ್ರಾಂತಿ ವೇತನ ಹೊಂದುವ ಮಾಸ್ತರನಾಗಿರುತ್ತಿದ್ದೆನು. ಅದಕ್ಕಿಂತ ನಾನು ಈಗ ಎಷ್ಟೋ ಜನಸೇವೆಯನ್ನು ಮಾಡಿದ್ದೇನೆಂದು ನನಗೆ ಬಹು ಸಮಾಧಾನ" (ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪ. ಪು. 80). ಆತ್ಮಚರಿತ್ರೆಯಲ್ಲಿರುವ ಅವರ ಬಿಚ್ಚುಮನಸ್ಸಿನ ಈ ಮಾತುಗಳು ಅವರ ಬಾಳಿನ ಸಫಲತೆಯನ್ನು ಮನಗಾಣಿಸುತ್ತವೆ.

3–1–1947ರಲ್ಲಿ ಇಹದ ಬದುಕಿಗೆ ವಿದಾಯ ಹೇಳಿದ ಮಂಜಪ್ಪನವರು ತಮ್ಮ ಬದುಕು, ಬರಹ, ಜನಹಿತ ಸಾಧನೆಗಳಿಂದ ಅಮರರಾಗಿದ್ದಾರೆ; ದಿವ್ಯಾದರ್ಶರಾಗಿದ್ದಾರೆ. ಆ ಮಹಾ ಚೇತನಕ್ಕೆ, ಅವರ ಜನ್ಮಶತಮಾನೋತ್ಸವದ ಸಂದರ್ಭದಲ್ಲಿ 'ಲೋಚನ'ವು ತನ್ನ ನಮನಗಳನ್ನು ಸಲ್ಲಿಸುತ್ತದೆ.

**—ಟಿ. ಆರ್. ಮಹಾದೇವಯ್ಯ**

೨

## ತಳುಕು ಪಳುಕು ಇಲ್ಲದ ತಳಕಿನ ವೆಂಕಣ್ಣಯ್ಯ*

ಪೂಜ್ಯ ಗುರುವರ್ಯ ತಳುಕುಪಳುಕು ಇಲ್ಲದ ತಳಕಿನ ವೆಂಕಣ್ಣಯ್ಯನವರ ಜನ್ಮಶತಮಾನೋತ್ಸವದ ನೆನಪಿನ ಸಮಾರಂಭದ ವಿಚಾರಗೋಷ್ಠಿಯನ್ನು ಉದ್ಘಾಟನೆ ಮಾಡುವ ಕೈಂಕರ್ಯವನ್ನು ನನಗೆ ವಹಿಸಿ, ಮೈಸೂರು ವಿಶ್ವವಿದ್ಯಾನಿಲಯ ನನ್ನನ್ನು ಗೌರವಿಸಿದೆ. ಇದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ, ಮುಖ್ಯವಾಗಿ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರಿಗೆ. ನಾನು ಕೃತಜ್ಞನಾಗಿದ್ದೇನೆ. ಪ್ರೊ॥ ವೆಂಕಣ್ಣಯ್ಯನವರ ಶಿಷ್ಯವರ್ಗದಲ್ಲಿ ನನಗಿಂತಲೂ ಹಿರಿಯರಾದವರು, ಗಣ್ಯರಾದವರು, ಈ ಗೌರವಕ್ಕೆ ಪಾತ್ರರಾಗಬಲ್ಲವರು, ಇರುವಾಗ ಕಿರಿಯರಲ್ಲಿ ಕಿರಿಯನಾದ ನನ್ನನ್ನು ಏಕೆ ಈ ಸಮಾರಂಭದ ಉದ್ಘಾಟನೆ ಮಾಡಲು ಮಾನ್ಯ ಮಿತ್ರರಾದ ಡಾ॥ ತಿಪ್ಪೇರುದ್ರಸ್ವಾಮಿಯವರು ಸೂಚಿಸಿರುವರೋ ನನಗೆ ಅರ್ಥವಾಗುವುದಿಲ್ಲ. ನನ್ನ ವಿಷಯದಲ್ಲಿ ತಿಪ್ಪೇರುದ್ರಸ್ವಾಮಿ ಅವರಿಗೆ ಒಲವರದ ಪಕ್ಷಪಾತ ಇರಬಹುದೇ ಎಂದು ನನ್ನ ಗುಮಾನಿ. ಹಾಗೆ ಭಾವಿಸುವುದು ನನ್ನ

---

* ೧-೧೨-೧೯೮೫ರಂದು ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರ ಜನ್ಮಶತಾಬ್ದಿಯ ಸಂಸ್ಮರಣಾರ್ಥ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ವ್ಯವಸ್ಥೆ ಮಾಡಿದ್ದ ವಿಚಾರಗೋಷ್ಠಿಯನ್ನು ಉದ್ಘಾಟನೆ ಮಾಡಿದ ಸಂದರ್ಭದಲ್ಲಿ ಮಾಡಿದ ಭಾಷಣ.

ಮನಸ್ಸಿಗೆ ಹಿತಕರವಾಗಿ ಕಂಡಿದೆ. ಸಂದರ್ಭ ಹೇಗಾದರೂ ಇರಲಿ, ದೀರ್ಘವಾದ
ಭಾಷಣ ಮಾಡಲು ಮುಖ್ಯ ಅತಿಥಿಗಳು–ನನ್ನ ಪೂಜ್ಯ ಗುರುಗಳಾದ ಪ್ರೊ॥ ಎ.ಎನ್.
ಮೂರ್ತಿರಾವ್ ಅವರು ಇರುವುದರಿಂದ ನನ್ನ ಕೆಲಸ ತುಂಬ ಹಗುರವಾಗಿ ಪರಿಣಮಿ
ಸಿದೆ. 'ನೀವು ಚಿಕ್ಕ ಭಾಷಣ ಮಾಡಿದರೆ ಸಾಕು' ಎಂದು ಹೇಳುವುದರ ಬದಲು
'ಉದ್ಘಾಟನೆ ಮಾಡಿ' ಎನ್ನುವುದು ಒಂದು ಪರ್ಯಾಯೋಕ್ತಿ. ಹಾಗೆಯೇ, 'ನೀವು
ಅರ್ಧಗಂಟೆಗೆ ಕಡಮೆಯಿಲ್ಲದೆ ಭಾಷಣ ಮಾಡಬೇಕು' ಎನ್ನುವ ಆದೇಶವನ್ನು
'ಮುಖ್ಯ ಅತಿಥಿ' ಎಂಬ euphemismನಲ್ಲಿ ಹುದುಗಿಸುವುದು ಈಚಿನ ದಿನಗಳಲ್ಲಿ
ಜಾರಿಗೆ ಬಂದಿರುವ ಒಂದು ಜಾಣತನ. ಮುಖ್ಯಭಾಷಣದ ಹೊರೆ ಗುರುಗಳ
ಹೆಗಲೇರಿರುವುದರಿಂದ ನನ್ನ ಕೆಲಸ ತುಂಬ ಸುಲಭವಾಗಿದೆ. 'ಆಗಮಾರ್ಥಂ ತು
ದೇವಾನಾಂ' ಎಂದು ಘಂಟಾನಾದ ಮಾಡಿ, ದೀಪಹಚ್ಚಿಬಿಟ್ಟರೆ ನನ್ನ ಕೆಲಸ ಮುಗಿ
ಯಿತು.

ದೀಪಸ್ತಂಭದಲ್ಲಿ ಹಚ್ಚಿದ ಎಣ್ಣೆಬತ್ತಿಯ ದೀಪ–ಅದು ನಂದಾದೀಪ ಆದರೂ
ಕೂಡ ನಂದಿಹೋಗಬಹುದು. ಆದರೆ ಅಕ್ಷರದೀಪ ಅಂಥದಲ್ಲ. ಇಂದಿನ ವಿಚಾರ
ಗೋಷ್ಠಿಯಲ್ಲಿ ನನ್ನ ಐವರು ಮಾನ್ಯ ಮಿತ್ರರು ಅಕ್ಷರದೀಪ ಮಾಲೆ ಒಂದನ್ನು
ಹೊತ್ತಿಸಲಿದ್ದಾರೆ. ಡಾ॥ ಕಲಬುರ್ಗಿ ಅವರೊಬ್ಬರು ಹೊರತಾಗಿ ಉಳಿದವರೆಲ್ಲ
ಪೂಜ್ಯ ವೆಂಕಣ್ಣಯ್ಯನವರ ಪ್ರಶಿಷ್ಯರು. ಹಾಗೆಂದು ನನ್ನ ತಿಳಿವಳಿಕೆ, ಪ್ರೊ॥
ಎ. ಎನ್. ಮೂರ್ತಿರಾಯರು ವೆಂಕಣ್ಣಯ್ಯನವರ ಶಿಷ್ಯರಲ್ಲದಿದ್ದರೂ ಮಹಾರಾಜ
ರವರ ಕಾಲೇಜಿನ ಕಾಮನ್ ರೂಮಿನಲ್ಲಿ ಅವರೊಂದಿಗೆ ನಕ್ಕುನಲಿದವರು. ಅವರಿಗೆ
ಅತ್ಯಂತ ಆಪ್ತರಾಗಿದ್ದವರು. ಸಂಭಾಷಣೆಯಲ್ಲಿ ಇಂಗ್ಲಿಷ್ ಮಾತು ಬಳಸದೆ 'ಕನ್ನಡ
ಮಾತನ್ನೇ ಬಳಸತಕ್ಕದ್ದು' ಎಂಬ ಸತ್‌ಸಂಕಲ್ಪವನ್ನು ಜಾರಿಯಲ್ಲಿ ತರುವುದಕ್ಕಾಗಿ
ವೆಂಕಣ್ಣಯ್ಯನವರ ಪರಮಶಿಷ್ಯರಲ್ಲಿ ಒಬ್ಬರಾದ ಪ್ರೊ॥ ತೀ. ನಂ. ಶ್ರೀಕಂಠಯ್ಯ
ನವರು ಸ್ಥಾಪಿಸಿದ 'ಕಾಸಿನ ಸಂಘ'ದ ನಿಯಮವನ್ನು ಉಲ್ಲಂಘಿಸಿ, ಚಿತ್ರಗುಪ್ತನ
ಕೆಲಸ ಮಾಡುತ್ತಿದ್ದ ನಾನು ಇವರಿಗೆ ಕಾಸಿನ ಜುಲ್ಮಾನೆ ಹಾಕಿದ್ದನ್ನು ಬರೆದುಕೊಳ್ಳ
ಲಾಗದಂತೆ ಮಾಡಿ, ವೆಂಕಣ್ಣಯ್ಯನವರ ಮುಖದಲ್ಲಿ ಸತ್ಯಸಾಕ್ಷಾತ್ಕಾರದ ಮುಗುಳನಗೆ
ಮೂಡಿಸುತ್ತಿದ್ದ ಮಹಾ ಮೇಧಾವಿ, ನನ್ನ ಪೂಜ್ಯ ಗುರುಗಳಾದ ಪ್ರೊ॥ ಮೂರ್ತಿ
ರಾಯರು. ವೆಂಕಣ್ಣಯ್ಯನವರ ಕೊಡುಗೈಯಿಂದ ಡಾ॥ ಕುವೆಂಪು ಮಾತ್ರವಲ್ಲ,
ಮೂರ್ತಿರಾಯರೂ ಸಹ ನಶ್ಯದ ಚಿಟಿಕೆಯ ಮಹಾದಾನವನ್ನು ಪರಿಗ್ರಹಿಸುತ್ತಿದ್ದರು.
ಎಂದು ನನ್ನ ನೆನಪು. ನನ್ನ ಇನ್ನೊಬ್ಬರು ಗುರುಗಳಾದ ಪ್ರೊ ಡಿ. ಎಲ್.
ನರಸಿಂಹಾಚಾರ್ಯರು—ನಾಸಿಕ, ನೋಸ್, ನಸ್ಯ(ಶ್ಯ), ಇವೆಲ್ಲ ಒಂದೇ ಬುಡಕಟ್ಟಿ
ನಿಂದ ಒಗೆದ ಪದಗಳು ಎಂದು ನನಗೆ ಬಹಳ ಕಾಲವಾದಮೇಲೆ ನನಗೆ ಬೋಧಿಸು
ತ್ತಿದ್ದ ನರಸಿಂಹಾಚಾರ್ಯರು—ನನಗೆ ಬಹು ತಡವಾಗಿ ನಸ್ಯದೀಕ್ಷೆ ಕೊಡದೆ ವಿದ್ಯಾರ್ಥಿ
ದೆಸೆಯಲ್ಲಿಯೇ ಅನುಗ್ರಹಿಸಿದ್ದರೆ, ಯಾರಿಗೂ ಕಾಣದ ಹಾಗೆ ನಾನು ಕೂಡ

ವೆಂಕಣ್ಣಯ್ಯನವರಿಂದ ಚಿಟಿಕೆ ನಶ್ಯವನ್ನು ಬೇಡಿ ಪಡೆಯುತ್ತಿದ್ದೆನೋ ಏನೋ. ವೆಂಕಣ್ಣಯ್ಯನವರು ಅಷ್ಟೊಂದು ಸಲಿಗೆ ಕೊಡುತ್ತಿದ್ದ, ಸರಳ ಸ್ವಭಾವದ ವ್ಯಕ್ತಿ. ಅವರ ಮನಸ್ಸು, ಮನೆಬಾಗಿಲು, ಎಲ್ಲರಿಗೂ ಸದಾ ತೆರೆದದ್ದು. ಬಿಗುಮಾನದ ಪ್ರೊಫೆಸರ್ ಆಗಿರಲಿಲ್ಲ ಅವರು. ತಮ್ಮ ಪ್ರೊಫೆಸರ್ಸ್ ರೂಮ್ ಬಿಟ್ಟು ಅಧ್ಯಾಪಕರ ಕಾಮನ್ ರೂಮಿನಲ್ಲಿ ಇತರ ಅಧ್ಯಾಪಕರ ಜೊತೆ ಒಬ್ಬ ಸಾಮಾನ್ಯ ಅಧ್ಯಾಪಕನಂತೆ, uncommon commoner ಆಗಿ ನಡೆದುಕೊಳ್ಳುತ್ತಿದ್ದರು. ಇತರ ಅನೇಕ ಪ್ರಾಧ್ಯಾಪಕರಂತೆ ಸೂಟು ಬೂಟುಧಾರಿ ಆಗಿರದೆ, ಮೇಲುಕೋಟೆ ಗುಂಡಂಚಿನ ಪಂಚೆ ಧರಿಸುತ್ತಿದ್ದುದು ಆಗಲಿ, ಕ್ಲೋಸ್ ಕಾಲರ್ ಕೋಟ್ ಧರಿಸುತ್ತಿದ್ದುದು ಆಗಲಿ, ಅವರ ಆ ಸಲಿಗೆಗೆ ಕಾರಣ ಆಗಿರಲಿಲ್ಲ. ಅದು ಅವರ ಸ್ವಭಾವದಲ್ಲಿಯೇ ಇದ್ದ ಗುಣ. ಆಗ, ಕನ್ನಡಕ್ಕೆ ಇಬ್ಬರು ಪ್ರಾಧ್ಯಾಪಕರು : ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿದ್ದ ಬಿ. ಎಂ. ಶ್ರೀಕಂಟಯ್ಯನವರು, ಗೌರವ ಪ್ರಾಧ್ಯಪಕರು, ಒಬ್ಬರು; ಇನ್ನೊಬ್ಬರು, ವೆಂಕಣ್ಣಯ್ಯನವರು. ಬಿ. ಎಂ. ಶ್ರೀ. ಸೂಟ್ ಧರಿಸುತ್ತಿದ್ದರು. ಬಿಂಕ ಬಿಗುಮಾನಗಳ ಮೂರ್ತಿ. ಇವರಿಬ್ಬರ ಶಿಷ್ಯರಾದ ಮೂರು ನಾಲ್ಕು ಮಂದಿ ಪ್ರಥಮ ತಂಡದ ಎಂ.ಎ. ವಿದ್ಯಾರ್ಥಿಗಳು ಕನ್ನಡ ಅಧ್ಯಾಪಕರಾದ ವೆಂಕಣ್ಣಯ್ಯನವರ ಕನ್ನಡತನದ ಉಡುಪನ್ನು ಅಂಗೀಕರಿಸಿದರು. ಬಹುಕಾಲದ ವರೆಗೆ ವೆಂಕಣ್ಣಯ್ಯನವರ ಉಡುಪುತೊಡಪು ಕನ್ನಡ ಅಧ್ಯಾಪರಿಗೆಲ್ಲ ಮಾದರಿಯಾಗಿ ಬಿಟ್ಟಿತು. ಅವರು ಯಾರೂ ಬಿ.ಎಂ.ಶ್ರೀ. ಅವರನ್ನು ಅನುಸರಿಸಲಿಲ್ಲ. ಅಂದರೆ, ವೆಂಕಣ್ಣಯ್ಯನವರು ಸೂಟು ಧರಿಸುತ್ತಲೇ ಇರಲಿಲ್ಲ ಎಂದು ತಿಳಿಯಬೇಡಿ. ಅವರು ಬೊಂಬಾಯಿಯಲ್ಲಿ ಎರಡು ವರ್ಷಕಾಲ ಎಲ್.ಎಲ್.ಬಿ. ಪರೀಕ್ಷೆಗೆಂದು ವ್ಯಾಸಂಗ ಮಾಡಿದರು. ಧಾರವಾಡದಲ್ಲಿ ಬಾಸೆಲ್ ಮಿಷನ್ ಹೈಸ್ಕೂಲಿನಲ್ಲಿ ಚರಿತ್ರೆ ಮತ್ತು ಇಂಗ್ಲಿಷ್ ಪಾಠ ಹೇಳಿದರು. ಆಗ ಅವರು ಪುಣೆ ಬೊಂಬಾಯಿ ಧಾರವಾಡಗಳಲ್ಲಿ ಅಂದಿನ ಕಾಲದಲ್ಲಿ ರೂಢಿಯಿದ್ದ ಜುಂಗುರುಮಾಲು, ಓಪನ್‌ಕಾಲರ್ ಕೋಟ್, ನೆಕ್ ಟೈ, ಷರಾಯಿ, ಜೋಡು – ಇವನ್ನೆಲ್ಲ ಧರಿಸುತ್ತಿದ್ದರು. ಒಮ್ಮೆ ಎಂ.ಎ. ತರಗತಿಯಲ್ಲಿ, ಆತ್ಮವೃತ್ತಾಂತ ಹೇಳಿಕೊಳ್ಳುತ್ತ, ತಮ್ಮ ಮೇಲೆ ಅಗಡಿ ಸಾಧುಗಳ ಪ್ರಭಾವ ಬಿದ್ದ ಬಗೆಯನ್ನು ತಿಳಿಸುತ್ತ ತಾವು ಕ್ರಾಪು ಬಿಟ್ಟಿದ್ದ, ಸಿಗರೇಟು ಸೇದುತ್ತಿದ್ದ ವಿಚಾರವನ್ನು ತಿಳಿಸಿದ್ದರು. ವೆಂಕಣ್ಣಯ್ಯನವರ ಬಗ್ಗೆ ಬರೆದಿರುವ ಯಾವ ಲೇಖನ ದಲ್ಲೂ ಈ ಸಂಗತಿ ಉಲ್ಲೇಖಗೊಂಡಿರುವುದು ನನ್ನ ಗಮನಕ್ಕೆ ಬಂದಿಲ್ಲ. ಮಹಾತ್ಮ ಗಾಂಧಿಯವರಲ್ಲಿ ಕಂಡುಬರುತ್ತಿದ್ದಂಥ ಪ್ರಾಮಾಣಿಕತೆ ಅವರದ್ದು. ಸುಳ್ಳು ಹೇಳು ವವರಲ್ಲ; ಸುಳ್ಳು ಹೇಳಿದ್ದನ್ನು ಕಂಡರೆ ಸುತರಾಂ ಆಗದು. ಅವರಿಗೆ ಎಂದೂ ಯಾವಾಗಲೂ ಯಾವುದಕ್ಕೂ ಕೆರಳದ, ಶಾಂತಚಿತ್ತರಾದ ವೆಂಕಣ್ಣಯ್ಯ ಸುಳ್ಳು ಹೇಳಿದ್ದಕ್ಕಾಗಿ ಮಗನನ್ನು ಚೆನ್ನಾಗಿ ಥಳಿಸಿದರಂತೆ. 'ಹಾಳಾದ್ದು ಕೆಟ್ಟ ಕೋಪ' ಎಂದು ಕೋಪ ಇಳಿಸಿಕೊಳ್ಳಲು ತಣ್ಣೀರು ಹೊಯ್ದುಕೊಂಡರಂತೆ ತಲೆಯಮೇಲೆ.

ನಾನು ಈಚೆಗೆ ಬರೋಡಕ್ಕೆ ಹೋಗಿದ್ದಾಗ ಅಲ್ಲಿ ನೆಲಸಿರುವ ಅಚ್ಚಮ್ಮ ತಮ್ಮ ತಂದೆಯ ಈ ನಡವಳಿಕೆಯನ್ನು ತಿಳಿಸಿದರು. ಅವರ ದಿರಸಿನ ವಿಚಾರವೂ ಅಷ್ಟೆ. ಡಿ.ವಿ.ಜಿ. ಅವರ ನೆನಪಿನ ಬರಹದಿಂದ ನಾನು ತಿಳಿದದ್ದು. ನಾನು ಸೀನಿಯರ್ ಇಂಟರ್‌ಮೀಡಿಯಟ್ ತರಗತಿಗೆ ಬಂದಾಗಲೇ ವೆಂಕಣ್ಣಯ್ಯನವರ ಪ್ರತ್ಯಕ್ಷ ದರ್ಶನ ನನಗೆ ಆದದ್ದು. ಅಲ್ಲಿಂದ ಮುಂದೆ ಅವರ ಅನೇಕ ಶಿಷ್ಯರಂತೆ ನನ್ನ ಅವರ ಗುರು-ಶಿಷ್ಯ ಸಂಬಂಧ ಬಹಳ ಆತ್ಮೀಯವಾಗಿ, ಒಂದು ಪವಿತ್ರ ವಾತಾವರಣದಲ್ಲಿ ಎಂಬಂತೆ ಬೆಳೆದುಬಂತು. ಇದರಲ್ಲಿ ಮಾತುಕತೆಗಿಂತ ಮೌನಸಂವಾದವೇ ಬಹುಪಾಲು. ಸ್ವಭಾವತಃ ಅವರು ಮೌನಿ. ಅವರಲ್ಲಿ ಸಾಧುಸಂತರ ಲಕ್ಷಣ ಅಪರೋಕ್ಷ ಗೋಚರ ವಾಗಿತ್ತು. ಗೃಹಸ್ಥರಾಗಿಯೂ ಸನ್ಯಾಸಿಯ ಧೋರಣೆ ಅವರದ್ದು, ಬದುಕಿನಲ್ಲಿ. ಬದುಕನ್ನು, ಆದರ ಸಿಹಿ ಕಹಿಗಳನ್ನು, ನಿರಾಕರಿಸಿದವರಲ್ಲ ಅವರು. ಭವಸಾಗರದಲ್ಲಿ ಇದ್ದು ಈಸಿ ಜೈಸಿದವರು. "ಪದ್ಮಪತ್ರಾಂಭಸ ಇವ" ನಿರ್ಲಿಪ್ತರಾಗಿದ್ದರು. ಭಗವದ್ಗೀತೆಯನ್ನು ಪಾರಾಯಣ ಮಾತ್ರ ಮಾಡಲಿಲ್ಲ, ಅದನ್ನು ಬಾಳಿದರು. ಹೂವಿಂದ ದೇವರ ಪೂಜೆ ಮಾಡುವಾಗ ತಾವೇ ಹೂವಾಗಿದ್ದವರು.

ಪೂಜ್ಯ ಮಾಸ್ತಿಯವರು ವೆಂಕಣ್ಣಯ್ಯನವರನ್ನೂ ಕೃಷ್ಣಶಾಸ್ತ್ರಿಗಳನ್ನೂ ಕನ್ನಡದ ಅಶ್ವಿನೀ ದೇವತೆಗಳು ಎಂದು ವರ್ಣಿಸಿದರು. ಅವರು ಅವಳಿ ಸೋದರ ರಂತೆ ಕನ್ನಡಕ್ಕಾಗಿ ಒಟ್ಟಿಗೆ ದುಡಿದರು. ಚ್ಯವನಮಹರ್ಷಿಗೆ ಅಶ್ವಿನೀದೇವತೆಗಳು ನವಯೌವನ ತಂದುಕೊಟ್ಟಂತೆ, ಪ್ರಬುದ್ಧ ಕರ್ಣಾಟಕದ ಮೂಲಕ ಯುವ ಬರಹ ಗಾರರನ್ನು ಮುಂದಕ್ಕೆ ತಂದು, ಉಡುಗಿಹೋಗಿದ್ದ ಕನ್ನಡಕ್ಕೆ ನವಚೈತನ್ಯ ತಂದರು ; ಇದು ಮಾಸ್ತಿಯವರ ಮಾತಿನ ತಾತ್ಪರ್ಯ. ಎರಡು ದೇಹ ಒಂದು ಉಸಿರು ಎಂಬಂತೆ ಕೂಡಿ ಕೆಲಸ ಮಾಡಿದರು ಅವರು. ಒಂದು ಸಲ, ಕೃಷ್ಣಶಾಸ್ತ್ರಿಗಳು ಇನ್ನೇನು ಮುಗಿಯಿತು ಎನ್ನುವಂತೆ ರುಗ್ಣಶಯ್ಯೆಯಲ್ಲಿ ಮಲಗಿದ್ದಾಗ, "ದೇವರೆ, ನನ್ನ ಕೃಷ್ಣನನ್ನು ಉಳಿಸಿಕೊಡು" ಎಂದು ವೆಂಕಣ್ಣಯ್ಯ ಪ್ರಾರ್ಥಿಸಿದರು. ವೆಂಕಣ್ಣಯ್ಯನವರ ಪ್ರಾರ್ಥನೆ ಫಲಿಸಿದ ರೀತಿಯಲ್ಲಿ ಕೃಷ್ಣಶಾಸ್ತ್ರಿಗಳು ಚೇತರಿಸಿ ಕೊಂಡರು. ವೆಂಕಣ್ಣಯ್ಯನವರು ದೈವಭಕ್ತರಾಗಿದ್ದರೂ ಸದಾ ಕಾರ್ಯತತ್ಪರರಾಗಿದ್ದ ಕರ್ಮಯೋಗಿಯೂ ಆಗಿದ್ದರು. ಪ್ರೊ॥ ವೆಂಕಣ್ಣಯ್ಯನವರನ್ನೂ ಪ್ರೊ॥ ಕೃಷ್ಣಶಾಸ್ತ್ರಿ ಗಳನ್ನೂ ಜೊತೆಗೂಡಿಸಿ ಸ್ಮರಿಸುವಾಗ ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರನ್ನು ಸ್ಮರಿಸದಿರಲು ಸಾಧ್ಯವಿಲ್ಲ. ಈ ಮೂವರೂ ಕನ್ನಡ ನವೋದಯದ ತ್ರಿಮೂರ್ತಿ ಗಳು. ಮೂವರೂ ತಂತಮ್ಮ ಪ್ರತಿಭಾಶಕ್ತಿಗೆ ಅನುಗುಣವಾಗಿ, ಪ್ರಮಾಣದೃಷ್ಟಿ ಯಿಂದ, ಗ್ರಂಥರಚನೆ ಮಾಡಲಿಲ್ಲ. ವೆಂಕಣ್ಣಯ್ಯನವರಂತೂ ಸೃಜನಶೀಲ ಕೃತಿ ಒಂದನ್ನೂ ರಚಿಸಲಿಲ್ಲ. ಸಾಹಿತ್ಯವನ್ನು ಸೃಷ್ಟಿಮಾಡುವುದು ಬಹುಶಃ ಅವರ ಜಾಯಮಾನದಲ್ಲಿ ಇದ್ದಂತೆ ಕಾಣುವುದಿಲ್ಲ. ಸಂಶೋಧನೆ, ವಿಮರ್ಶೆಗಳನ್ನು ಕೂಡ ಸಾಕಷ್ಟು ಮಾಡದಿರುವುದಕ್ಕೆ ಅವರ ಅಲ್ಪಾಯುವೇ ಕಾರಣ ಎಂದು ತೋರುತ್ತದೆ.

ಬಿ.ಎಂ.ಶ್ರೀ. ಅರುವತ್ತನ್ನು ದಾಟಿದ್ದರು. ವೆಂಕಣ್ಣಯ್ಯನವರು 53ನೆಯ ವರ್ಷದಲ್ಲೇ ಕಾಲವಾದರು. ಕೃಷ್ಣಶಾಸ್ತ್ರಿಗಳು ವಚನಭಾರತ, ಕಥಾಮೃತಗಳನ್ನು ರಚಿಸಿದ್ದು 60 ದಾಟಿದಮೇಲೆ, ಏಳೆಂಟು ವರ್ಷಗಳ ಅವಧಿಯಲ್ಲಿ. ವೆಂಕಣ್ಣಯ್ಯನವರು ಬರೆದ ಸ್ವಲ್ಪ ಬರೆವಣಿಗೆ ಕೂಡ ಬೆಂಗಳೂರಿನಲ್ಲಿ ಇದ್ದ ಏಳೆಂಟು ವರ್ಷಗಳಲ್ಲಿ, 1919ರಿಂದ 1927ರವರೆಗೆ. 1927ರಲ್ಲಿ ಕನ್ನಡದ ಮೊದಲ ಪ್ರಾಧ್ಯಾಪಕರಾದ ಮೇಲೆ, ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಏನೇನು ಮಾಡಬೇಕು ಎಂದು ಬಿ.ಎಂ.ಶ್ರೀ. ಕನಸು ಕಾಣುತ್ತಿದ್ದರೋ ಅದನ್ನೆಲ್ಲ ನನಸು ಮಾಡುವಲ್ಲಿ, ಬಿ.ಎಂ.ಶ್ರೀ. ಅವರ ಮಾತಿನಲ್ಲೇ ಹೇಳುವುದಾದರೆ, ಅವರಿಗೆ 'ಚತುರ್ಭುಜ'ವಾಗಿ ತಮ್ಮ ಶಕ್ತಿ ಸಾಮರ್ಥ್ಯವನ್ನೆಲ್ಲ ವಿನಿಯೋಗಿಸಿದರು. ಪ್ರಬುದ್ಧ ಕರ್ಣಾಟಕ, ಪರಿಷತ್ತು ಪ್ರಕಟಿಸಿದ ಪಂಪಭಾರತ, ಕುಮಾರವ್ಯಾಸ ಪ್ರಶಸ್ತಿ, ಕನ್ನಡ ಕೈಪಿಡಿ, ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ—ಇವುಗಳ ಕಾರ್ಯನಿರ್ವಹಣೆಯ ಹಿಂದೆ ವೆಂಕಣ್ಣಯ್ಯನವರ ಚೇತನ ಗುಪ್ತಗಾಮಿನಿಯಾಗಿ ಕೆಲಸ ಮಾಡಿದೆ. ಬಿ.ಎಂ.ಶ್ರೀ. ಅವರೂ ಕೃಷ್ಣಶಾಸ್ತ್ರಿಗಳೂ ಕನ್ನಡದ ಕೆಲಸದಲ್ಲಿ ಕ್ಷಾತ್ರವನ್ನು ಮೆರೆದರು ; ವೆಂಕಣ್ಣಯ್ಯ ಪರಮ ಸಾತ್ವಿಕ ಮೂರ್ತಿ.

ವೆಂಕಣ್ಣಯ್ಯನವರ ವ್ಯಕ್ತಿತ್ವ, ಬದುಕು, ಬರಹಗಳನ್ನು ಕುರಿತು ವಿಚಾರ ಗೋಷ್ಠಿ ಮುಂದೆ ನಡೆಯುವುದಿದೆ. ಮುಖ್ಯ ಅತಿಥಿಗಳ ಸೊಗಸಾದ ಭಾಷಣ ಕಾದಿದೆ. ನಾನು ಹೆಚ್ಚು ಮಾತಾಡುವುದು ಅಧಿಕಪ್ರಸಂಗವಾಗಬಹುದು. ಆದರೆ, ಒಂದು ಪ್ರಸಂಗವನ್ನು ಹೇಳಲೇಬೇಕು. ಅದನ್ನು ಹೇಳಿ, ನನ್ನ ಮಾತು ಮುಗಿಸುತ್ತೇನೆ.

ವೆಂಕಣ್ಣಯ್ಯನವರು ಚಿತ್ರಕಲೆಯಲ್ಲಿ ನನಗಿದ್ದ ಅಭಿರುಚಿ, ಪರಿಶ್ರಮ, ಇವನ್ನು ಗುರುತಿಸಿ, ನಾನು ವರ್ಣಚಿತ್ರಗಾರನಾಗಬೇಕು ಎಂದು ಅಪೇಕ್ಷೆಪಟ್ಟಿದ್ದರು. ಪದ್ಯ ರಚನೆಗೆ ಪ್ರೋತ್ಸಾಹ ಕೊಡುತ್ತಿದ್ದಂತೆ ಚಿತ್ರರಚನೆಗೂ ಪ್ರೋತ್ಸಾಹ ಕೊಡುತ್ತಿದ್ದರು. ಪ್ರಬುದ್ಧ ಕರ್ಣಾಟಕದಲ್ಲಿ ನನ್ನ ಎರಡು ಚಿತ್ರಗಳನ್ನು ಪ್ರಕಟಿಸಿದರು. ನಾನು ಎಂ.ಎ. ತರಗತಿಗೆ ಸೇರಿಕೊಳ್ಳಲೂ ಅವರೇ ಕಾರಣ. ಎಂ.ಎ. ಮುಗಿಸಿದಮೇಲೆ ನಾನು ಕಲ್ಕತ್ತೆಗೋ ಶಾಂತಿನಿಕೇತನಕ್ಕೋ ಹೋಗಿ ಚಿತ್ರಕಲೆ ಅಭ್ಯಾಸಮಾಡಬೇಕೆಂದು ಅವರ ಅಪೇಕ್ಷೆ. ಅವರ ಅಪೇಕ್ಷೆಯಂತೆ ಕಲ್ಕತ್ತೆಗೆ ಪ್ರಯಾಣ ಹೊರಟೆ. ನನ್ನ ತಂದೆ ಮತ್ತು ಗುರು ವೆಂಕಣ್ಣಯ್ಯ ಇಬ್ಬರೂ ನನ್ನನ್ನು ಬೀಳ್ಕೊಡಲು ಮೈಸೂರು ರೈಲ್ವೆ ಸ್ಟೇಷನ್ನಿಗೆ ಬಂದಿದ್ದರು. ಆ ಹೃದಯಸ್ಪರ್ಶಿ ಸನ್ನಿವೇಶ ಈಗಲೂ ಕಣ್ಣಿಗೆ ಕಟ್ಟಿದಂತಿದೆ.

ಪೂಜ್ಯ ವೆಂಕಣ್ಣಯ್ಯನವರನ್ನು ಸ್ಮರಿಸುವ ಪುಣ್ಯಕಾರ್ಯದಲ್ಲಿ ಭಾಗಿಯಾಗುವ ಅವಕಾಶ ಕಲ್ಪಿಸಿಕೊಟ್ಟ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಿಗೆ ನನ್ನ ಕೃತಜ್ಞತೆಯನ್ನು ಮತ್ತೊಮ್ಮೆ ತಿಳಿಸಿ. ಈ ವಿಚಾರಗೋಷ್ಠಿ ಪ್ರಯೋಜನಕಾರಿಯಾಗಿ ನಡೆಯಲಿ ಎಂದು ಹಾರೈಸುತ್ತೇನೆ.

—**ಎಂ. ವಿ. ಸೀತಾರಾಮಯ್ಯ**

೩

## ಪ್ರಾಧ್ಯಾಪಕ ಟಿ. ಎಸ್. ವೆಂಕಣ್ಣಯ್ಯ*

ಮೈಸೂರು ಹೈಕೋರ್ಟಿನ ಮಾಜಿ ಮುಖ್ಯ ನ್ಯಾಯಾಧೀಶರಾಗಿ, ಮೈಸೂರು ಸಂಸ್ಥಾನದ ಮಾಜಿ ಗೌವರ್ನರ್ ಆಗಿ ಇರುವುದಕ್ಕಿಂತಲೂ ಹೆಚ್ಚಾಗಿ, ನನ್ನ ಪಾಲಿಗೆ ನನ್ನ ವಿದ್ಯಾಗುರುಗಳಾಗಿ ಕಳೆದ ಅರುವತ್ತು ವರ್ಷಗಳಿಂದಲೂ ಅವಿಚ್ಛಿನ್ನವಾಗಿ ನನ್ನಲ್ಲಿ ಭ್ರಾತೃವಾತ್ಸಲ್ಯವನ್ನು ಮೆರೆದಿರುವ ಸನ್ಮಾನ್ಯ ಸಭಾಧ್ಯಕ್ಷರೇ, ನನ್ನ ಅಧ್ಯಾಪಕ ವೃತ್ತಿಯ ಸಾರ್ಥಕತೆಯೇ ಮೂರ್ತಿವೆತ್ತಂತಿರುವ, ಅದಕ್ಕೂ ಹೆಚ್ಚಾಗಿ ದಿವಂಗತ ಪ್ರೊ॥ ವೆಂಕಣ್ಣಯ್ಯನವರ ದಿವ್ಯ ಭವ್ಯವಾದ ಸ್ಮಾರಕ ಭವನವನ್ನು ನಿರ್ಮಿಸಿಕೊಟ್ಟು ನನ್ನನ್ನು ಧನ್ಯನನ್ನಾಗಿ ಮಾಡಿರುವ, ಇವೆರಡಕ್ಕೂ ಹೆಚ್ಚಾಗಿ ಕರ್ನಾಟಕದಲ್ಲಿ ಕೋಳಿ ಕೂಗುವ ಪ್ರತಿಯೊಂದು ಹಳ್ಳಿಯ ನೀರಿನ ಕೊರತೆಯನ್ನು ನೀಗಿಸಿ 'ನೀರಿನ ಸಾಬಿ' ಎಂಬ ಅನ್ವರ್ಥನಾಮವನ್ನು ಪಡೆದಿರುವ ಮಾನ್ಯ ಮಂತ್ರಿ ಶ್ರೀಮಾನ್ ನಜೀರ್ ಸಾಹೇಬರವರೇ, ಕನ್ನಡ ನಾಡು ನುಡಿಗಳ ಏಳಿಗೆಗಾಗಿ ಬಾಳನ್ನು ಮುಡಿಪಾಗಿಟ್ಟಿರುವ ಶ್ರೀಮಾನ್ ನಾರಾಯಣರವರೇ, ಚಿತ್ರದುರ್ಗದ ಜಿಲ್ಲಾಧಿಕಾರಿಗಳೇ, ಈ ಜಿಲ್ಲೆಯ ಅಧಿಕಾರಿವರ್ಗದವರೇ, ವೆಂಕಣ್ಣಯ್ಯ ಸ್ಮಾರಕ ಭವನದ ನಿರ್ಮಾಣಕಾರ್ಯವನ್ನು ತಮ್ಮ ಅಮೃತಹಸ್ತದಿಂದ ಆರಂಭಿಸಿದ ನನ್ನ ಮಾನ್ಯ ಮಿತ್ರರಾದ ಶ್ರೀ ನಾಗಣ್ಣಾಚಾರಿಯವರೇ, ಬಿ.ಎಂ.ಶ್ರೀ. ಪ್ರತಿಷ್ಠಾನದ ಸಂಸ್ಥಾಪಕ ಮಾನ್ಯಮಿತ್ರ ಶ್ರೀ ಸೀತಾರಾಮಯ್ಯನವರೇ, ಮೈಸೂರು ವಿಶ್ವವಿದ್ಯಾ ನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಶ್ರೀ ತಿಪ್ಪೇರುದ್ರಸ್ವಾಮಿ ಯವರೇ, ವೆಂಕಣ್ಣಯ್ಯ ಸ್ಮಾರಕ ಸಮಿತಿಯ ಕಾರ್ಯನಿರ್ವಾಹಕರೇ, ನನ್ನ ಸೋದರಸಮಾನರಾದ ತಿಪ್ಪೇಸ್ವಾಮಿದ್ವಯರೇ, ವೆಂಕಣ್ಣಯ್ಯನವರ ಬಂಧು ಬಾಂಧವರೆ, ನನ್ನೂರಿನ, ನನ್ನ ಜಿಲ್ಲೆಯ ಸೋದರ ಸೋದರಿಯರೇ, ನಿಮ್ಮೆಲ್ಲರ ಮಧ್ಯದಲ್ಲಿರುವ ನನಗೆ ಈ ದಿನವೇ ಸುದಿನ. ಹಾಗೆಂದು ಹಾಡಿ ನರ್ತಿಸಬೇಕೆನ್ನು ವಷ್ಟು ಸಂತೋಷವಾಗಿದೆ, ನನಗೆ ಇಂದು.

ಮಹನೀಯರೇ, ನಾವೆಲ್ಲರೂ ಇಂದು ಯಾವ ಮಹಾಪುರುಷನ ಶತಮಾನೋತ್ಸವದ ಅಂಗವಾಗಿ ಆತನ ಸ್ಮಾರಕ ಪುಸ್ತಕ ಭಂಡಾರದ ಉದ್ಘಾಟನಾ ಸಮಾರಂಭವನ್ನು ನೆರವೇರಿಸಹೊರಟಿರುವೆವೊ ಆ ಸತ್ಪುರುಷನು ನನ್ನ ಸೋದರ. ಆದ್ದರಿಂದ ಈ ಸನ್ನಿವೇಶದಲ್ಲಿ ಆತನನ್ನು ಕುರಿತು ಎರಡು ಮಾತನಾಡುವುದು ಎಷ್ಟು ಸಂತೋಷಕರವೋ ಅದಕ್ಕೂ ಹೆಚ್ಚಾಗಿ ಸಂಕೋಚಕರವೂ ಆಗಿದೆ. ಶ್ರೀಮಾನ್ ಸೀತಾರಾಮಯ್ಯನವರು ವೆಂಕಣ್ಣಯ್ಯನವರು ಮತ್ತು ಅವರ ಕೃತಿಗಳನ್ನು ಕುರಿತು

* ಚಳ್ಳಕೆರೆ ತಾಲೂಕಿನಲ್ಲಿ ದಿ॥ ವೆಂಕಣ್ಣಯ್ಯನವರ ಹುಟ್ಟೂರಾದ ತಳಕಿನಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ನಡಸಿದ ವೆಂಕಣ್ಣಯ್ಯ ಜನ್ಮಶತಾಬ್ದಿ ಉತ್ಸವದಲ್ಲಿ ಪ್ರೊ॥ ತ. ಸು. ಶಾಮರಾವ್ ಅವರು ಮಾಡಿದ ಭಾಷಣ.

ಭಾಷಣಗಳ ಅಮೃತವೃಷ್ಟಿಯನ್ನು ಮೂರುದಿನಗಳ ಕಾಲ ಸುರಿಸಲು ಏರ್ಪಾಡು ಮಾಡಿದ್ದಾರೆ. ಆದ್ದರಿಂದ ನಾನು ಅವರನ್ನು ಕುರಿತು ಭಾಷಣ ಮಾಡಬೇಕಾದ ಅಗತ್ಯವು ಇಲ್ಲ. ಕೇವಲ ಸ್ಮಾರಕ ಭವನ ನಿರ್ಮಾಣದ ಪುಟ್ಟ ವರದಿಯೊಂದನ್ನು ತಮ್ಮ ಮುಂದೆ ಇಡಲು ಪ್ರಯತ್ನಿಸುತ್ತಿದ್ದೇನೆ. ನಮ್ಮೆಲ್ಲರ ಬಹುದಿನಗಳ ಕನಸು ಇಂದು ನನಸಾಗಿರುವುದರಿಂದ ನಮಗಾಗಿರುವ ಆನಂದವನ್ನು ಹೊರಸೂಸುವುದಕ್ಕೂ ಮತ್ತು ಅದನ್ನು ನೆರವೇರಿಸಿಕೊಟ್ಟ ಮಹಾನುಭಾವರನ್ನು ಸ್ಮರಿಸಿ ಕೃತಜ್ಞತೆಯನ್ನು ಸೂಚಿಸುವುದಕ್ಕೂ ಎರಡು ಮಾತು ಅಗತ್ಯವೆಂದು ನಾನು ಭಾವಿಸಿದ್ದೇನೆ.

'ಜೀವನ್ ಭದ್ರಾಣಿ ಪಶ್ಯತಿ'—ಬದುಕಿದ್ದರೆ ಒಂದಲ್ಲ ಒಂದು ದಿನ ಮಂಗಳ ವನ್ನು ಕಾಣಬಹುದು ಎಂಬ ಸೂಕ್ತಿ ನಮಗಿಂದು ಅನುಭವವೇದ್ಯವಾಗಿದೆ. ಆದರೆ ಆ ಮಂಗಳವನ್ನು ಪ್ರತ್ಯಕ್ಷವಾಗಿ ಕಾಣುವ ಮುನ್ನ ನಮಗೆ ಅದೆಷ್ಟು ಅಡ್ಡಿ ಆತಂಕಗಳು, ಎಷ್ಟು ಕಷ್ಟಕಾರ್ಪಣ್ಯಗಳು ಎದುರಾದವು? ಭಗೀರಥನು ಗಂಗೆಯನ್ನು ತರುವ ಮುನ್ನ ಹೇಗೆ ಹೆಣಗಿದನೋ ಅದಕ್ಕೂ ಹೆಚ್ಚಾಗಿ ಕಳೆದ ನಲವತ್ತೈದು ವರ್ಷಗಳಷ್ಟು ದೀರ್ಘಕಾಲ ಇದಕ್ಕಾಗಿ ನಾವು ತಪಸ್ಸನ್ನೇ ಆಚರಿಸಬೇಕಾಯಿತು.

ವೆಂಕಣ್ಣಯ್ಯನವರು ದಿವಂಗತರಾಗಿ ಒಂದು, ಒಂದೂವರೆ ವರ್ಷವಾಗಿತ್ತೆಂದು ಕಾಣುತ್ತದೆ. ನಾನು ಆಗ ಶಿವಮೊಗ್ಗೆಯ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದೆ. ಈಗ ದಿವಂಗತವಾಗಿರುವ, ಆದರೆ ಆಗಿನ್ನೂ ಜೀವಂತರಾಗಿದ್ದ ಪ್ರೊ॥ ಬಿ.ಎಂ.ಶ್ರೀ.ಯವರ ಅಭಿಮಾನಿಗಳು ಅವರಿಗೆ ಸಂಭಾವನಾ ಗ್ರಂಥವೊಂದನ್ನು ಅರ್ಪಿಸುವ ಸಡಗರದಲ್ಲಿ ಇದ್ದರು. ಅದನ್ನು ಕಂಡು ನನ್ನ ತಲೆಯಲ್ಲಿ ಎದ್ದ ಒಂದು ಅಲೆ ಆ ವೇಳೆಗೆ ದಿವಂಗತ ರಾಗಿದ್ದ ವೆಂಕಣ್ಣಯ್ಯನವರ ಸಂಸ್ಮರಣ ಗ್ರಂಥವೊಂದರ ಚಿತ್ರವನ್ನು ನನ್ನೆದುರಿಗೆ ತಂದು ನಿಲ್ಲಿಸಿತು. ಆದರೆ ನಾನವರ ತಮ್ಮ, ನಾನು ಆ ಕಾರ್ಯಕ್ಕೆ ಕೈಹಾಕುವುದು ಸರಿಯೆ ಎಂಬ ಅಳುಕು ನನ್ನನ್ನು ಕಾರ್ಯೋನ್ಮುಖನಾಗದಂತೆ ತಡೆದು ನಿಲ್ಲಿಸಿತು. ನನ್ನ ಕೆಲವು ಜೀವದ ಗೆಳೆಯರನ್ನು ಆ ಕಾರ್ಯಕ್ಕೆ ಕಂಕಣಕಟ್ಟಿ ನಾಂದಿ ಹಾಡಿಸಿದೆ. ಸ್ವಲ್ಪಕಾಲ ಕಾವೇರುವಷ್ಟರಲ್ಲಿ ಉತ್ಸಾಹದ ಗಾಳಿ ನಿಂತಿತು, ಕಾರ್ಯದ ಕಾವು ಆರಿತು, ಮರವೆಯ ಬೂದಿ ಮೇಲೆ ಮುಸುಕಿತು. ನಾನಾಗ ಯೋಚಿಸಿದೆ: ನನ್ನ ಮತ್ತು ವೆಂಕಣ್ಣಯ್ಯನವರದು ಕೇವಲ ಸೋದರ ಬಾಂಧವ್ಯವಷ್ಟೆಯೇ? ಉದಾರ ಚೇತನರಾಗಿ ವಿಶ್ವಕುಟುಂಬಿಯಂತಿದ್ದ ಶ್ರೀ ವೆಂಕಣ್ಣಯ್ಯನವರಿಗೆ ಇವನು ತಮ್ಮ, ಇವನು ಮಗ, ಇವನು ಬಂಧು, ಇವನು ಹೊರಗಿನವ–ಎಂಬ ಬೇಧ ಎಳ್ಳಷ್ಟೂ ಇರಲಿಲ್ಲ – ಸಹಾಯ ಮಾಡುವುದರಲ್ಲಿ – ಎಂಬುದು ಅವರ ನಿಕಟವರ್ತಿಗಳಿಗೆಲ್ಲ ಸೂರ್ಯಪ್ರಕಾಶದಷ್ಟು ಸುಸ್ಪಷ್ಟ. ಬರಿಯ ಲೌಕಿಕ ಪ್ರಯೋಜನದ ದೃಷ್ಟಿಯಿಂದ ಮಾತ್ರವೇ ನೋಡಿದಾಗ ಅನೇಕ ವೇಳೆ ಅವರ ಬಂಧುವರ್ಗಕ್ಕೆ ಸೇರದವರಾಗದಿದ್ದರೆ ಎಷ್ಟೋ ಸುಖವಾಗಿರಬಹುದಿತ್ತು. ಒಮ್ಮೊಮ್ಮೆ ಅವರ ಔದಾರ್ಯ 'ಮನೆಗೆ ಮಾರಿ ಪರರಿಗುಪಕಾರಿ' ಎಂಬ ಕಟುನುಡಿಯನ್ನು ಅವರ ಬಂಧು ವರ್ಗದವರ

ಬಾಯಿಂದ ತರಿಸಿದ್ದುಂಟು. ಮಗ ಅಂಗಿಯಿಲ್ಲ ಎಂದು ಗೋಣಗುತ್ತಿದ್ದರೆ, ಬೊಂಬಾಯಿಯಲ್ಲಿ ಬಿ.ಎಲ್. ಓದುತ್ತಿರುವ ಬಡ ಹುಡುಗನೊಬ್ಬನಿಗೆ ಕಾಲೇಜು ಫೀಜನ್ನು ಹೇಗೆ ಕೂಡಿಸಿ ಕಳುಹಿಸುವುದು ಎಂಬ ಸಂಭ್ರಮ ವೆಂಕಣ್ಣಯ್ಯನವರಿಗೆ. ಇಂತಹ ಹತ್ತಾರು ಸನ್ನಿವೇಶಗಳನ್ನು ಪ್ರತ್ಯಕ್ಷವಾಗಿ ಕಂಡಿದ್ದ ನಾನು ಅವರನ್ನು ನನ್ನ ಅಣ್ಣನೆಂದು ಕರೆದುಕೊಳ್ಳುವುದು ಮಹದ್ಭಾಗ್ಯವೆಂದು ಭಾವಿಸಿರುವೆನಾದರೂ ನನಗೆ ಅವರು ಅಣ್ಣನಾಗಿರುವುದಕ್ಕೂ ಹೆಚ್ಚಾಗಿ ಗುರು. ಅದರ ಸಂಪೂರ್ಣಾರ್ಥದಲ್ಲಿ ಗುರು. ಇಂದಿನ ನನ್ನ ಬಾಳಿನಲ್ಲಿ ನಾನು ಏನನ್ನಾದರೂ ಒಳ್ಳೆಯದನ್ನು ಯತ್ ಕಿಂಚಿತ್ ಸಾಧನೆ ಮಾಡಿದ್ದರೆ, ಅದು ನನ್ನ ಮೇಲೆ ಅವರು ಮಾಡಿರುವ ಪ್ರಭಾವ, ಆಶೀರ್ವಾದ. ಇಂತಹ ವ್ಯಕ್ತಿಗೆ ಸಂಸ್ಮರಣ ಗ್ರಂಥ ತರುವುದರಲ್ಲಿ ನನ್ನ ಭ್ರಾತೃತ್ವ ಏಕೆ ಅಡ್ಡಿಯಾಗಬೇಕು ? ಹೀಗೆಂದುಕೊಂಡು ನಾನೇ ಅದಕ್ಕೆ ಕೈಹಾಕಿದೆ. ಭಗೀರಥ ಪ್ರಯತ್ನವನ್ನೇ ಮಾಡಿದೆ. ವೆಂಕಣ್ಣಯ್ಯನವರಲ್ಲಿ ಅಪಾರವಾದ ಪ್ರೀತಿ ಗೌರವ ಗಳನ್ನಿಟ್ಟಿದ್ದ ಶ್ರೀ ಶಂಕರೇಗೌಡರು ವಿದ್ಯಾಮಂತ್ರಿಗಳಾಗಿದ್ದಾಗ ನನ್ನ ತಪಸ್ಸು ಸಿದ್ಧಿ ಗೊಂಡು ಅವರ ಕೃಪೆಯಿಂದ ಭಾಗೀರಥಿ ಪ್ರತ್ಯಕ್ಷಳಾದಳು. ನಾನು ಅವರ ನೆರವಿ ನಿಂದ 'ಸವಿನೆನಪು' ಎಂಬ ಸಂಸ್ಮರಣ ಗ್ರಂಥವೊಂದನ್ನು ಹೊರತಂದೆ. ಅದರ ಮಾರಿಕೆ ಯಿಂದ ಬಂದ ನಲವತ್ತು ಸಹಸ್ರ ರೂಪಾಯಿಗಳಲ್ಲಿ ಮೂವತ್ತು ಸಹಸ್ರವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಕೊಟ್ಟು ಕನ್ನಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನಗಳ ವ್ಯವಸ್ಥೆಯನ್ನೂ, ಹತ್ತು ಸಹಸ್ರ ರೂಪಾಯಿಗಳನ್ನು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಕೊಟ್ಟು ಅಲ್ಲಿ ಪ್ರತಿವರ್ಷವೂ ವೆಂಕಣ್ಣಯ್ಯ ಸ್ಮಾರಕ ಉಪನ್ಯಾಸಗಳ ವ್ಯವಸ್ಥೆ ಮತ್ತು ಆ ಉಪನ್ಯಾಸಗಳ ಪ್ರಕಟನೆಯನ್ನೂ ಏರ್ಪಡಿಸಿ ಧನ್ಯನಾದೆ.

ಅತ್ತ ಸಂಸ್ಮರಣಗ್ರಂಥಕ್ಕೆ ಸಿದ್ಧತೆಗಳಾಗುತ್ತಿದ್ದಾಗ, ಇತ್ತ ವೆಂಕಣ್ಣಯ್ಯನವರ ಖಾಸಾ ಶಿಷ್ಯರೂ ನನ್ನ ಅಚ್ಚುಮೆಚ್ಚಿನ ಗುರುಗಳೂ ಆದ ಶ್ರೀಮಾನ್ ನಿಟ್ಟೂರು ಶ್ರೀನಿವಾಸರಾಯರು ತಳುಕಿನಲ್ಲಿ ವೆಂಕಣ್ಣಯ್ಯನವರ ಸ್ಮಾರಕ ನಿರ್ಮಾಣಕ್ಕೆ ಅಂದಾಜು ಹಾಕುತ್ತಿದ್ದರು. ಗುರುಗಳು ದಿವಂಗತರಾದ ವರ್ಷಾಂತ್ಯದಲ್ಲಿ ಶ್ರೀಮಾನ್ ನಿಟ್ಟೂರರು ತಳುಕಿನಲ್ಲಿ 'ವೆಂಕಣ್ಣಯ್ಯ ಸ್ಮಾರಕ ಸಾಹಿತ್ಯ ಸಮ್ಮೇಳನ'ವೊಂದನ್ನು ಒಂದು ವಾರ ಕಾಲ ಅದ್ದೂರಿಯಾಗಿ ನಡಸಿದರು. ಅದು 'ನಿಟ್ಟೂರರ ಸರ್ಕಸ್' ಎಂದು ಈ ಸುತ್ತಮುತ್ತ ಅನ್ವರ್ಥನಾಮವಾಗಿತ್ತು. ಕನ್ನಡದ ದಿಗ್ಗಜಗಳೆಲ್ಲವೂ ಅವರ ಸರ್ಕಸ್ಸಿನಲ್ಲಿ ತಮ್ಮ ಚಮತ್ಕಾರಗಳನ್ನು ತೋರಿಸಿದವು. ದಿನದಿನವೂ ವೆಂಕಣ್ಣಯ್ಯನವರ ಭಾವಚಿತ್ರದ ಮೆರವಣಿಗೆ, ಅವರನ್ನು ಕುರಿತ ಭಾಷಣಗಳು, ಸಂಜೆ ಮೀಟಿಂಗುಗಳ ಮೇಲೆ ಮೀಟಿಂಗುಗಳು : ಠರಾವುಗಳ ಮೇಲೆ ಠರಾವುಗಳು ! ಅಂದು 'ವೆಂಕಣ್ಣಯ್ಯ ಸ್ಮಾರಕ ಪುಸ್ತಕ ಭಂಡಾರ'ದ ನಿರ್ಮಾಣಕ್ಕೆ ನಾಂದಿ ಹಾಡಲಾ ಯಿತು. ಅದಕ್ಕಾಗಿ ಒಂದು ಕಮಿಟಿಯನ್ನು ಹುಟ್ಟುಹಾಕಲಾಯಿತು. ವೆಂಕಣ್ಣಯ್ಯ

ನವರು ಹುಟ್ಟಿ ಬೆಳೆದ ಮನೆಯನ್ನು ಸ್ಮಾರಕಕ್ಕಾಗಿ ಬಿಟ್ಟುಕೊಡಲು ಅವರ ವಂಶದವರು ಒಪ್ಪಿದರು. ಇನ್ನೇನು 'ವೆಂಕಣ್ಣಯ್ಯನವರ ಸ್ಮಾರಕ' ನಿರ್ಮಾಣವಾಗಿ ಹೋಯಿತು – ಎನ್ನುವಷ್ಟು ಹುರುಪಿನಿಂದ ಚಟುವಟಿಕೆಗಳು ನಡೆದುಹೋದವು. ಆದರೆ ಅಷ್ಟೇ ವೇಗವಾಗಿ ನೀರಮೇಲೆದ್ದ ಗುಳ್ಳೆ ಒಡೆದುಹೋಯಿತು.

ಮುಂದೆ ಕೆಲವರ್ಷಗಳಲ್ಲಿ ಹೈಕೋರ್ಟಿನ ಮುಖ್ಯ ನ್ಯಾಯಾಧಿಪತಿಗಳಾಗಿದ್ದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಮೈಸೂರು ಸಂಸ್ಥಾನದ ಹಂಗಾಮಿ ಗವರ್ನರ್ ಆಗಿ ನೇಮಕವಾದರು. ವೆಂಕಣ್ಣಯ್ಯನವರಲ್ಲಿ ಅವರಿಗಿದ್ದ ಪ್ರೇಮಾದರ ಗೌರವಗಳು ಅವರನ್ನು ಮತ್ತೆ ತಳುಕಿಗೆ ಸೆಳೆದು ತಂದವು. ಈ ಬಾರಿ ಚಳ್ಳಕೆರೆಯಲ್ಲಿ ವೆಂಕಣ್ಣಯ್ಯ ಸ್ಮಾರಕ ಕರ್ನಾಟಕ ಸಂಘ ಸ್ಥಾಪನೆಯಾಯಿತು. ಮತ್ತೊಮ್ಮೆ ಭಾಷಣಗಳ ಸುರಿಮಳೆ, ಠರಾವುಗಳ ಗುಡುಗು, ಚಮತ್ಕಾರವಾದ ಮಾತಿನ ಮಿಂಚು. ನಾನೂ ಆಗೊಂದು ಭಾಷಣ ಬಿಗಿದಿದ್ದೆ. ವೆಂಕಣ್ಣಯ್ಯನವರ ಸ್ಮಾರಕ ಪುಸ್ತಕ ಭಂಡಾರವೊಂದನ್ನು ತಳುಕಿನಲ್ಲಿ ತೆರೆಯಬೇಕು, ಅವರ ಸ್ಮಾರಕದಲ್ಲಿ ವೆಂಕಣ್ಣಯ್ಯನವರ ಅಮೃತ ಶಿಲಾ ವಿಗ್ರಹವನ್ನು ಸ್ಥಾಪಿಸಬೇಕು – ಎಂದು ತೀರ್ಮಾನವಾಯಿತು. ಆಮೇಲೆ ಶ್ರೀಮಾನ್ ನಿಟ್ಟೂರರು ಬೆಂಗಳೂರಿಗೆ ಹೋದರು, ನಾನು ಮೈಸೂರಿಗೆ ಹೋದೆ ; ಉಳಿದವರು ತಮ್ಮ ತಮ್ಮ ಮನೆಗಳಿಗೆ ಹೋದರು. ಎಲ್ಲರೂ ಉಂಡು ಮಲಗಿದರು. ಕರ್ನಾಟಕ ಸಂಘ ಊಟವಿಲ್ಲದೆಯೇ ಮಲಗಿತು. ಆಗ ಮಲಗಿದುದು ಮಗ್ಗುಲು ಬದಲಾಯಿಸುತ್ತಾ ಇನ್ನೂ ಮಲಗಿಯೇ ಇದೆ. ನಮ್ಮ ಮಹಾಕವಿ ಪಂಪ ತನ್ನನ್ನು 'ಕದಳೀಗರ್ಭಶ್ಯಾಮಂ' ಎಂದು ಕರೆದುಕೊಂಡಿದ್ದಾನೆ. ಪಂಪನೊಬ್ಬನೇ ಏಕೆ? ಕನ್ನಡಿಗರಾದ ನಾವೆಲ್ಲರೂ ಕದಳೀಗರ್ಭಶ್ಯಾಮರೇ. ಕದಳೀಗರ್ಭವು ಹೇಗೆ ತಂಪೋ ನಾವು ಹಾಗೆಯೇ ತಂಪು. ಎಚ್ಚತ್ತರೆ ಮಾತು : ಬಾಯಿ ಮುಚ್ಚಿದರೆ ನಿದ್ರೆ. ಇದು ಕನ್ನಡಿಗರಾದ ನಮ್ಮ ಸ್ವರೂಪ.

ವೆಂಕಣ್ಣಯ್ಯನವರ ಸ್ಮಾರಕದ ಸೃಷ್ಟಿಗೆ ಮತ್ತೇ ಸಹಾಯಕರಾಗಿ ದೊರೆತವರು ಕನ್ನಡದ ಕಟ್ಟಭಿಮಾನಿಯಾದ ನನ್ನ ಪ್ರಿಯಮಿತ್ರ ಶ್ರೀಮಾನ್ ರಾಜಪುರೋಹಿತರು. ಅವರು ಈ ಜಿಲ್ಲೆಯ ಡೆಪ್ಯುಟಿ ಕಮೀಷನರಾಗಿದ್ದಾಗ ನಾನೊಮ್ಮೆ ಅವರೊಡನೆ ತಳುಕಿಗೆ ಪ್ರಯಾಣ ಮಾಡುತ್ತಾ ವೆಂಕಣ್ಣಯ್ಯನವರ ಸ್ಮಾರಕದ ವಿಚಾರವೆತ್ತಿದೆ. ಅವರು ಅದರಲ್ಲಿ ಅಪಾರವಾದ ಆಸಕ್ತಿ ವಹಿಸಿದರು. ಚಳ್ಳಕೆರೆಯ ತಾಲ್ಲೋಕು ಬೋರ್ಡಿನವರು ಇದಕ್ಕಾಗಿ ಸಾಕಷ್ಟು ಹಣವನ್ನು ನೀಡುವಂತೆ ಅವರನ್ನು ಹುರಿದುಂಬಿಸಿದರು. ಬೆಳಗೆರೆಯ ಕೃಷ್ಣಶಾಸ್ತ್ರಿಯಂತಹವರು ಸ್ವತಃ ಹಣ ನೀಡಿದುದಲ್ಲದೆ ಇತರರಿಂದಲೂ ಮಂತಿಗೆಯನ್ನು ಕೂಡಿಸಿದರು. ಚತುರರಾದ ಶ್ರೀ ರಾಜಪುರೋಹಿತರು ಸ್ಮಾರಕ ಪುಸ್ತಕ ಭಂಡಾರಕ್ಕೆ ಹತ್ತುಸಹಸ್ರ ರೂಪಾಯಿಗಳ ಪುಸ್ತಕಗಳನ್ನು ದಾನವಾಗಿ ಕೊಡುವೆನೆಂದು ನನ್ನಿಂದ ಬರೆಯಿಸಿಕೊಂಡು, ತಾಲ್ಲೋಕ್ ಬೋರ್ಡಿನ ಹಣದೊಡನೆ ನನ್ನ ಪತ್ರವನ್ನು ಸೇರಿಸಿ, ಈ ಧರ್ಮಕಾರ್ಯಕ್ಕೆ ಸಾಕಷ್ಟು

ಸಹಾಯ ಮಾಡುವಂತೆ ಸರಕಾರಕ್ಕೆ ಶಿಫಾರಸ್ಸು ಮಾಡಿದರು. ಅಂದಿನ ಮಂತ್ರಿ ಮಂಡಲದಲ್ಲಿ ನನ್ನ ಹಲವರು ಗೆಳೆಯರಿದ್ದರು. ಅವರಲ್ಲಿ ಶ್ರೀ ರಂಗನಾಥರು ಮುಖ್ಯರಾದವರು. ಅವರು ನನ್ನನ್ನು ಆಗ ಮುಖ್ಯಮಂತ್ರಿಯಾಗಿದ್ದ ಶ್ರೀ ದೇವರಾಜ ಅರಸರ ಬಳಿಗೆ ಕರೆದೊಯ್ದು ನನ್ನ ಪ್ರಾರ್ಥನೆಯನ್ನು ಸಲ್ಲಿಸುವಂತೆ ಶಿಫಾರಸ್ಸು ಮಾಡಿದರು. ಇಷ್ಟೇ ಅಲ್ಲ, ಅವರನ್ನು ಒಪ್ಪಿಸಿ, ಅವರನ್ನು ತಳುಕಿಗೆ ಕರೆತಂದು, ಅವರಿಂದ ವೆಂಕಣ್ಣಯ್ಯ ಸ್ಮಾರಕಕ್ಕೆ ಶಂಕುಸ್ಥಾಪನೆಯನ್ನು ಮಾಡಿಸಿದರು. ಅಂದು ಶ್ರೀ ಅರಸರವರು ತುಂಬಿದ ಸಭೆಯಲ್ಲಿಯೇ ನನ್ನನ್ನು ಕುರಿತು "ಸರ್ಕಾರದಿಂದ ಎಷ್ಟು ಬೇಕೊ ಅಷ್ಟನ್ನು ಕೊಡುತ್ತೇನೆ, ಅಗತ್ಯಬಿದ್ದರೆ ನನ್ನ ಕೈಯಿಂದಲೂ ನೀವು ಕೇಳಿದಷ್ಟನ್ನು ಕೊಡುತ್ತೇನೆ. ಆದರೆ ನೀವು ಯೋಚಿಸಿರುವ ಸ್ಮಾರಕ ವೆಂಕಣ್ಣಯ್ಯ ನವರಂತೆ ಭವ್ಯವಾಗಿರಲಿ" ಎಂದರು. ನನ್ನ ಭಗೀರಥಯತ್ನ ಕೈಗೂಡಿತೆಂದೇ ನಾನು ಭಾವಿಸಿದೆ. ಆದರೆ ಭೂಮಿಗಿಳಿದು ಬರುತ್ತಿದ್ದ ಭಾಗೀರಥಿಯನ್ನು ರಾಜಕೀಯದ ರುದ್ರ ತನ್ನ ಜಟಿಲವಾದ ಜಟೆಯಲ್ಲಿ ಕಟ್ಟಿಹಾಕಿದ. ಕೆಲಕಾಲ ನಾನು ದಿಕ್ಕುತೋಚದೆ ಮೂಢನಾಗಿ ಕುಳಿತೆ. ಕಾಲಚಕ್ರ ಉರುಳಿತು. ವೆಂಕಣ್ಣಯ್ಯನವರ ಸ್ಮಾರಕ ಸೃಷ್ಟಿಯಾಗಬೇಕೆಂಬುದು ಭಗವತ್ ಸಂಕಲ್ಪವಾಗಿತ್ತು ಎಂದು ತೋರುತ್ತದೆ. ತಪಸ್ಸಿಗೆ ಕುಳಿತ ನನಗೆ ದೈವಸಾಕ್ಷಾತ್ಕಾರವಾಯಿತು. ಆ ದೈವವೇ ಇಲ್ಲಿ ಕುಳಿತಿರುವ ನಜೀರ್ ಸಾಹೇಬರು. ಅವರು ಮಂತ್ರಿಗಳಾದಮೇಲೆ ಒಮ್ಮೆ ಅವರನ್ನು ಆತ್ಮೀಯ ವಾಗಿ ಕಾಣುವ ಸುಯೋಗ ದೊರೆತಾಗ ಅವರ ಮುಂದೆ ನನ್ನ ಹೃದಯದ ಆಶೆ ಯನ್ನು ಹೊರಹಾಕಿದೆ. "ಇಷ್ಟು ಕಾಲ ನೀವು ಏಕೆ ಸುಮ್ಮನಿದ್ದಿರಿ?" ಎಂದು ನನ್ನನ್ನು ಲಘುವಾಗಿ ಆಕ್ಷೇಪಿಸಿ ಅಲ್ಲಿಯೇ, ಆಗಲೇ ಚಿತ್ರದುರ್ಗದ ಜಿಲ್ಲಾಧಿಕಾರಿ ಗಳಾಗಿದ್ದ ಶ್ರೀಮಾನ್ ನಾಗಣ್ಣಾಚಾರಿಯವರನ್ನು ದೂರವಾಣಿಯ ಮೂಲಕ ಸಂಪರ್ಕಿಸಿ, ಆರು ತಿಂಗಳೊಳಗಾಗಿ ಸ್ಮಾರಕ ನಿರ್ಮಾಣವಾಗಬೇಕೆಂದು ತಿಳಿಸಿದರು. ಅವರಂತೆ ಶ್ರೀ ವೆಂಕಣ್ಣಯ್ಯನವರ ನೂರನೆ ಹುಟ್ಟುಹಬ್ಬದ ದಿನ – ಎಂದರೆ ಅಕ್ಟೋಬರ್ ೧ರಂದು ಸ್ಮಾರಕ ಮಂದಿರವು ಉದ್ಘಾಟನೆಗೆ ಸಿದ್ಧವಾಯಿತು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾದ ಶ್ರೀಮಾನ್ ತಿಪ್ಪೇ ರುದ್ರಸ್ವಾಮಿಗಳು ಅಕ್ಟೋಬರ್ ೧ರಂದೇ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ ಶತಮಾನೋತ್ಸವ ನಡೆಯಬೇಕೆಂದು ಕೃತಸಂಕಲ್ಪರಾಗಿದ್ದುದರಿಂದ ಕಟ್ಟಡದ ಉದ್ಘಾಟನೆ ಸ್ವಲ್ಪ ಮುಂದೆ ಹೋಗಬೇಕಾಯಿತು. ಶ್ರೀಮಾನ್ ನಜೀರ್ ಸಾಹೇಬರವರು ತಳುಕಿನ ಬದಲಾಗಿ ಮೈಸೂರಲ್ಲಿ ವೆಂಕಣ್ಣಯ್ಯನವರ ಹುಟ್ಟುಹಬ್ಬ ದಲ್ಲಿ ಭಾಗಿಗಳಾದರು.

ತಳುಕಿನ ಸ್ಮಾರಕ ಮಂದಿರವನ್ನು ನಮ್ಮ ಮುಖ್ಯಮಂತ್ರಿಯವರೇ ಉದ್ಘಾಟಿಸ ಬೇಕೆಂಬುದು ನಜೀರ್ ಸಾಹೇಬರವರ ಅಪೇಕ್ಷೆಯಾಗಿತ್ತು. ಆದರೆ ಆ ಕಾರ್ಯಕ್ರಮ ದಲ್ಲಿ ಶ್ರೀ ನಜೀರ್ ಸಾಹೇಬರವರು ಇದ್ದೇ ಇರಬೇಕೆಂಬುದು ನಮ್ಮ ಉತ್ಕಟೇಚ್ಛೆ

ಯಾಗಿತ್ತು. ನಮ್ಮ ಇಚ್ಛೆ ನೆರವೇರಲಿಲ್ಲ. ಅನಿವಾರ್ಯವಾದ ರಾಜಕಾರಣದಿಂದ ಅವರು ಅಂದು ಅಸ್ಸಾಮಿನಲ್ಲಿರಬೇಕಾಗಿತ್ತು. ಆದ್ದರಿಂದ ಪಟ್ಟದ ಕತ್ತಿಯನ್ನಿಟ್ಟು ವಿವಾಹವನ್ನು ನೆರವೇರಿಸಬೇಕಾಯಿತು. ಶ್ರೀ ನಜೀರ್ ಸಾಹೇಬರು ಇಲ್ಲದೆಯೇ ಸ್ಮಾರಕ ಭವನದ ಉದ್ಘಾಟನಾಸಮಾರಂಭ ವಿಜೃಂಭಣೆಯಿಂದ ಮಾನ್ಯ ಮುಖ್ಯಮಂತ್ರಿಗಳಿಂದ ನೆರವೇರಿತು. ಈಗ ನಜೀರ್‌ಸಾಹೇಬರೇ ಬಂದಿದ್ದಾರೆ ಪುಸ್ತಕ ಭಂಡಾರದ ಉದ್ಘಾಟನೆಗಾಗಿ. ಈ ಉದ್ಘಾಟನೆಯನ್ನು ಸೂಚಿಸುವ ಒಂದು ಶಿಲಾಫಲಕ ಈ ಮಂದಿರದ ಆವರಣದಲ್ಲಿರಬೇಕೆಂಬುದು ನಮ್ಮೆಲ್ಲರ ಬಯಕೆ. ಆ ಬಯಕೆಯನ್ನು ಈಡೇರಿಸಬೇಕೆಂದು ನಾವೆಲ್ಲರೂ ಅವರನ್ನು ಪ್ರಾರ್ಥಿಸುತ್ತೇವೆ.

ಶ್ರೀಮಾನ್ ರಾಜಪುರೋಹಿತರ ಮೂಲಕ ನಾನು ಸರ್ಕಾರಕ್ಕೆ ಹತ್ತುಸಹಸ್ರ ರೂಪಾಯಿ ಬೆಲೆಗಳ ಪುಸ್ತಕಗಳನ್ನು ಕೊಡುವುದಾಗಿ ಸರ್ಕಾರಕ್ಕೆ ಮಾತು ಕೊಟ್ಟಿದ್ದೆನಷ್ಟೆ. ಮುಖ್ಯಮಂತ್ರಿಗಳು ಈ ಸ್ಮಾರಕ ಭವನವನ್ನು ಉದ್ಘಾಟಿಸಿದಾಗ ಇಪ್ಪತ್ತೈದು ಸಹಸ್ರ ಬೆಲೆಯ ಪುಸ್ತಕಗಳನ್ನು ನೀಡುವುದಾಗಿ ಮಾತು ಕೊಟ್ಟಿದ್ದೆ. ಈಗ ಶ್ರೀಮಾನ್ ನಜೀರ್ ಸಾಹೇಬರ ಇದಿರಿನಲ್ಲಿ ಹೇಳುತ್ತಿದ್ದೇನೆ, ಇನ್ನೂ ಹತ್ತುಸಹಸ್ರ ರೂಪಾಯಿಗಳ ಪುಸ್ತಕಗಳನ್ನು ನೀಡಲು ಸಿದ್ಧನಿದ್ದೇನೆ. ದಿವಂಗತ ವೆಂಕಣ್ಣಯ್ಯನವರ ಶಿಷ್ಯರೂ, ನನ್ನ ಮೂಲಕ ಅವರ ಪ್ರಶಿಷ್ಯರೂ, ನನ್ನ ಗೆಳೆಯರೂ ನಾಮುಂದು ತಾಮುಂದು ಎಂದು ಪುಸ್ತಕಗಳನ್ನು ನೀಡಲು ಮುಂದೆ ಬರುತ್ತಿದ್ದಾರೆ. ಶ್ರೀಯುತರುಗಳಾದ ಕುವೆಂಪು, ಎಸ್. ವಿ. ಪರಮೇಶ್ವರಭಟ್ಟ, ಹೆಚ್. ಎಂ. ಶಂಕರನಾರಾಯಣರಾವ್, ಸಿ.ಪಿ.ಕೆ., ಆರ್. ವಿ. ಶ್ರೀನಿವಾಸಮೂರ್ತಿ, ಡಿ. ವಿ. ಕೆ. ಮೂರ್ತಿ, ಅನಂತರಾಮು, ತಿಪ್ಪೇರುದ್ರಸ್ವಾಮಿ ಇತ್ಯಾದಿ ಇತ್ಯಾದಿ ಮಹನೀಯರು ಮುಕ್ತಹಸ್ತದಿಂದ ಪುಸ್ತಕಗಳನ್ನು ನೀಡಿ ಸಹಕರಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯ ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಉದಾರವಾಗಿ ಸಹಾಯ ನೀಡಿವೆ. ಇನ್ನೂ ಹಲವಾರು ಸಂಸ್ಥೆಗಳು ಸಜ್ಜನರು ಪುಸ್ತಕಗಳನ್ನು ನೀಡುವುದಾಗಿ ಮಾತುಕೊಟ್ಟಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳು ಪುಸ್ತಕಗಳನ್ನು ಕೊಳ್ಳುವುದಕ್ಕಾಗಿ ಐದು ಸಹಸ್ರ ರೂಪಾಯಿಗಳನ್ನು ದಾನವಾಗಿ ಕೊಟ್ಟಿದ್ದಾರೆ. ಆದ್ದರಿಂದ ಪುಸ್ತಕ ಭಂಡಾರಕ್ಕೆ ಪುಸ್ತಕಗಳ ಕೊರತೆ ಏನೂ ಆಗುವುದಿಲ್ಲ. ಆದರೆ ಮಾನ್ಯ ಮಂತ್ರಿಗಳಾದ ನಜೀರ್ ಸಾಹೇಬರವರು ಈ ಪುಸ್ತಕಭಂಡಾರ ಸಾರೋದ್ಧಾರವಾಗಿ ನಡೆಯುವಂತೆ ಪುಸ್ತಕ ಭಂಡಾರದ ಅಧಿಕಾರಿ ವರ್ಗದವರನ್ನು ನೇಮಿಸಿ ಈ ಸಂಸ್ಥೆ ಒಡನೆಯೇ ಕಾರ್ಯಾರಂಭ ಮಾಡುವಂತೆ ಅನುಗ್ರಹಿಸಬೇಕೆಂದು ಇಲ್ಲಿ ನೆರೆದಿರುವವರೆಲ್ಲರ ಪರವಾಗಿ ಅವರನ್ನು ಪ್ರಾರ್ಥಿಸುತ್ತೇನೆ.

—**ತ. ಸು. ಶಾಮರಾವ್**

## ಸ್ಮಾರಕ ಭವನಗಳು

**ವೆಂಕಣ್ಣಯ್ಯ ಸ್ಮಾರಕ ಭವನ :** ಗ್ರಾಮಾಭಿವೃದ್ಧಿ ಸಚಿವರಾದ ಮಾನ್ಯಶ್ರೀ ನಜೀರ್ ಸಾಹೇಬರು ಗ್ರಾಮಗಳ ಸರ್ವಾಂಗೀಣ ಅಭಿವೃದ್ಧಿ ಯೋಜನೆಯಲ್ಲಿ ಗ್ರಂಥಾಲಯ – ವಾಚನಾಲಯಗಳ ಮಹತ್ವವನ್ನು ಮನವರಿಕೆ ಮಾಡಿಕೊಂಡು, ದಿವಂಗತ ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರ ಹುಟ್ಟೂರಾದ ತಳಕು ಗ್ರಾಮ (ಚಳ್ಳಕೆರೆ ತಾಲೂಕು) ದಲ್ಲಿ ಸ್ಮಾರಕ ಭವನವನ್ನು ಕಟ್ಟಿಸಿಕೊಟ್ಟಿದ್ದಾರೆ. ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಮಾನ್ಯ ಶ್ರೀ ರಾಮಕೃಷ್ಣ ಹೆಗಡೆ ಅವರು ಹೋದ ವರ್ಷ ಅಕ್ಟೋಬರ್ ಒಂದರಂದು ಉದ್ಘಾಟನೆ ಮಾಡಿದರು. ಸ್ಥಳೀಯರ ಸಹಕಾರದಿಂದ ಬಿ.ಎಂ.ಶ್ರೀ. ಪ್ರತಿಷ್ಠಾನ ಅದೇ ಭವನದಲ್ಲಿ ಈ ವರ್ಷ ಜನವರಿ ತಿಂಗಳಲ್ಲಿ, ದಿನಾಂಕ 12ರಂದು ವೆಂಕಣ್ಣಯ್ಯ ಜನ್ಮಶತಮಾನೋತ್ಸವವನ್ನು ನೆರವೇರಿಸಿತು. ಅವರ ತಮ್ಮಂದಿರಾದ ಶ್ರೀ ತ. ಸು. ಶಾಮರಾಯರು ಸುಮಾರು 35 ಸಹಸ್ರ ರೂಪಾಯಿ ಬೆಲೆಬಾಳುವ ಪುಸ್ತಕಗಳನ್ನು ಸಂಗ್ರಹಿಸಿ ನೀಡಲು ವಾಗ್ದಾನಮಾಡಿದರು. ಶ್ರೀ ನಜೀರ್ ಸಾಹೇಬರು ಗ್ರಂಥಾಲಯ ವನ್ನು ಉದ್ಘಾಟನೆ ಮಾಡಿದರು.

**ಬಿ. ಎಂ. ಶ್ರೀ. ಸ್ಮಾರಕ ಭವನ :** 1984ನೇ ಇಸವಿ ಜನವರಿ 3ರಂದು ಬಿ.ಎಂ.ಶ್ರೀ. ಅವರ ಸ್ವಸ್ಥಳವಾದ (ನಾಗಮಂಗಲ ತಾಲೂಕು) ಬೆಳ್ಳೂರಿನಲ್ಲಿ ಅವರ ಜನ್ಮಶತಮಾನೋತ್ಸವ ವಿಜೃಂಭಣೆಯಿಂದ ನಡೆಯಿತಷ್ಟೆ. ಆ ಸಂದರ್ಭದಲ್ಲಿ ಉತ್ಸವವನ್ನು ನೆರವೇರಿಸಿಕೊಟ್ಟ ಸ್ಥಳೀಯ ಸ್ವಾಗತ ಸಮಿತಿ ಬಿ.ಎಂ.ಶ್ರೀ. ಅವರ ವಂಶಜರಿಗೆ ಸೇರಿದ ನಿವೇಶನವನ್ನು ಕೊಂಡುಕೊಂಡು ಅದರ ಒಡೆತನವನ್ನು ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ನೀಡಿರುತ್ತಾರೆ. ಈ ಮಹೋಪಕಾರಕ್ಕಾಗಿ ಪ್ರತಿಷ್ಠಾನ ಬೆಳ್ಳೂರಿನ ಸ್ವಾಗತ ಸಮಿತಿಯ ಸದಸ್ಯರಿಗೂ, ಅದರ ಅಧ್ಯಕ್ಷರಾಗಿದ್ದ ಶ್ರೀ ಸಿಂಗಾರಿ ಗೌಡರಿಗೂ, ಈ ಎಲ್ಲ ಕಾರ್ಯಕ್ಕೂ ಅನುಗ್ರಹಶಕ್ತಿಯಾಗಿದ್ದ ಶ್ರೀ ಆದಿಚುಂಚನಗಿರಿ ಪೀಠಾಧ್ಯಕ್ಷರಾದ ಶ್ರೀ ಶ್ರೀ ಗಂಗಾಧರನಾಥ ಸ್ವಾಮಿಗಳವರಿಗೂ ಕೃತಜ್ಞವಾಗಿದೆ. ತಳಕಿನಲ್ಲಿ ವೆಂಕಣ್ಣಯ್ಯನವರ ಹೆಸರಿನಲ್ಲಿ ಭವ್ಯವಾದ ಕಟ್ಟಡ ಕಟ್ಟಿಸಿಕೊಟ್ಟಿರು ವಂತೆ ಅವರ ಗುರುಗಳಾದ ಬಿ.ಎಂ.ಶ್ರೀ. ಅವರ ಹೆಸರಿನಲ್ಲೂ ಬೆಳ್ಳೂರಿನಲ್ಲಿ ಈಗ ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ದೊರೆತಿರುವ ನಿವೇಶನದಲ್ಲಿ ಗ್ರಂಥಾಲಯ– ವಾಚನಾಲಯಗಳನ್ನು ಸ್ಥಾಪಿಸಿ ಸಾಂಸ್ಕೃತಿಕ ಮತ್ತು ಸಾಹಿತ್ಯಕ ಕಾರ್ಯಕ್ರಮಗಳನ್ನು ನಡಸಲು ಒಂದು ಭವನವನ್ನು ಕಟ್ಟಿಸಿಕೊಡಬೇಕೆಂದು ಶ್ರೀ ನಜೀರ್ ಸಾಹೇಬರಿಗೆ ಪ್ರತಿಷ್ಠಾನ ಮನವಿಯನ್ನು ಸಲ್ಲಿಸಿದೆ. ಅವರು ಕಟ್ಟಡವನ್ನು ಕಟ್ಟಿಸಿಕೊಡುವುದಾಗಿ ಆಶ್ವಾಸನೆ ನೀಡಿರುತ್ತಾರೆ. ಇದಕ್ಕಾಗಿ ಪ್ರತಿಷ್ಠಾನ ಅವರಿಗೆ ಆಭಾರಿಯಾಗಿದೆ.

ಬೆಂಗಳೂರಿನಲ್ಲೂ ಬಿ.ಎಂ.ಶ್ರೀ. ಪ್ರತಿಷ್ಠಾನ ತನ್ನ ಸ್ವಂತ ಕಟ್ಟಡವನ್ನು

ಹೊಂದಲು ಸಂಕಲ್ಪಮಾಡಿ, ಒಂದು ನಿವೇಶನವನ್ನು ನೀಡಬೇಕೆಂದು 'ಶ್ರೀ' ಶತಮಾನೋತ್ಸವ ವರ್ಷದಲ್ಲಿಯೇ ಬೆಂಗಳೂರು ಮಹಾನಗರಪಾಲಿಕೆಯನ್ನು ಪ್ರಾರ್ಥಿಸಿಕೊಂಡಿತ್ತು. ನಗರಪಾಲಿಕೆ ಉದಾರವಾಗಿ ಒಂದು ನಿವೇಶನವನ್ನು ಸಂಸ್ಥೆಗೆ ನೀಡಿದೆ. ಈ ಮಹೋಪಕಾರಕ್ಕಾಗಿ ಪ್ರತಿಷ್ಠಾನ ನಗರಪಾಲಿಕೆಯ ಮೇಯರ್, ಕಮಿಷನರ್ ಹಾಗೂ ಕಾರ್ಪೊರೇಟರುಗಳಿಗೆ ಕೃತಜ್ಞವಾಗಿದೆ. ಸದ್ಯ ದಲ್ಲಿಯೇ ನಿವೇಶನ ಪ್ರತಿಷ್ಠಾನದ ವಶಕ್ಕೆ ಬರುವ ನಿರೀಕ್ಷೆಯಿದೆ. ನಮ್ಮ ವಶಕ್ಕೆ ಬಂದ ಕೂಡಲೆ ಬೆಂಗಳೂರಿನ 'ಶ್ರೀ ಸ್ಮಾರಕ ಭವನ' ನಿರ್ಮಾಣಕಾರ್ಯ ವನ್ನು ಪ್ರಾರಂಭಿಸುವ ಉದ್ದೇಶವಿದೆ. ಈಗಾಗಲೇ 30,000 ರೂಪಾಯಿ ಕಟ್ಟಡ ನಿಧಿ ಸಂಗ್ರಹವಾಗಿದೆ. ಭವ್ಯವಾದ ಭವನ ನಿರ್ಮಾಣಕ್ಕೆ ಹತ್ತುಲಕ್ಷ ರೂಪಾಯಿನ ಅಂದಾಜು ಇಟ್ಟುಕೊಂಡಿದೆ. ಈ ಕಾರ್ಯಕ್ಕೆ ರಾಜ್ಯಸರ್ಕಾರವೂ ಕೇಂದ್ರಸರ್ಕಾರವೂ ನಗರಪಾಲಿಕೆಯೂ ಇತರ ಸೇವಾ ಸಂಘ ಸಂಸ್ಥೆಗಳೂ ಉದಾರವಾಗಿ ಧನಸಹಾಯ ಮಾಡಬೇಕೆಂದು ಪ್ರತಿಷ್ಠಾನ ಮನವಿ ಮಾಡಿಕೊಳ್ಳುತ್ತದೆ. ಪ್ರತಿಷ್ಠಾನದ ಸದಸ್ಯರೂ ಕೂಡ ಕಟ್ಟಡ ನಿರ್ಮಾಣ ನಿಧಿಗೆ ತಮ್ಮ ಶಕ್ತ್ಯನುಸಾರ ದ್ರವ್ಯಸಹಾಯ ಮಾಡ ಬೇಕೆಂದು ಪ್ರತಿಷ್ಠಾನ ಪ್ರಾರ್ಥಿಸುತ್ತದೆ.

**ಎ.ಆರ್.ಕೃ. ಸ್ಮಾರಕ ಭವನ :** ಬಿ.ಎಂ.ಶ್ರೀ. ಅವರ ಹಿರಿಯ ಶಿಷ್ಯರಲ್ಲಿ ಒಬ್ಬರಾದ, ಡಾ॥ ಎ. ಆರ್. ಕೃಷ್ಣಶಾಸ್ತ್ರಿಗಳ ಮಗಳು ಶ್ರೀಮತಿ ಕೆ. ಶಾಂತಾ ಅವರ ತಮ್ಮ ತೀರ್ಥರೂಪರವರ ಹೆಸರಿನಲ್ಲಿ ಈಗಾಗಲೆ ಎ.ಆರ್.ಕೃ. ಸಂಸ್ಕೃತಿ ಪೀಠ ವನ್ನು ಸ್ಥಾಪಿಸಿ ಅದನ್ನು ನಡಸಿಕೊಂಡು ಬರುತ್ತಿದ್ದಾರೆ. ಚಿಕ್ಕಮಗಳೂರು ಜಿಲ್ಲೆ ಯಲ್ಲಿ ಎ.ಆರ್.ಕೃ. ಅವರ ಹುಟ್ಟೂರಾದ ಅಂಬಳೆ ಗ್ರಾಮದಲ್ಲಿ ತಮ್ಮ ತಂದೆಯ ಹೆಸರಿನಲ್ಲಿ ಒಂದು ಸ್ಮಾರಕ ಆಗಬೇಕೆಂದಿದ್ದ ಅವರ ಕನಸು ಇಂದು ನನಸಾಗಿರುವುದು ಸಂತೋಷದ ಸಂಗತಿ. ಗ್ರಾಮದಲ್ಲಿ ಇದಕ್ಕಾಗಿ ಅವರು ಒಂದು ನಿವೇಶನವನ್ನೂ ದಾನಮಾಡಿದ್ದರಿಂದ ಇದು ಸಾಧ್ಯವಾಯಿತು. ಮೊನ್ನೆ ನವೆಂಬರ್ ತಿಂಗಳ ರಾಜ್ಯೋತ್ಸವ ದಿನದಂದು (1-11-1986) ಕಟ್ಟಡದ ಶಂಕುಸ್ಥಾಪನೆಯೂ ನೆರವೇರಿತು.

**ಮುದ್ದಣ ಕವಿಯ ಸ್ಮಾರಕ :** ಕವಿ ಮುದ್ದಣನ ಹುಟ್ಟೂರಾದ ನಂದಳಿಕೆಯಲ್ಲಿ ಸ್ಮಾರಕ ಭವನವನ್ನು ನಿರ್ಮಾಣ ಮಾಡಬೇಕೆಂಬ ಸಂಕಲ್ಪವನ್ನು ಆ ಊರಿನ 'ಕವಿ ಮುದ್ದಣ ಸ್ಮಾರಕ ಮಿತ್ರ ಮಂಡಳಿ' 1958 ರಲ್ಲಿಯೇ ಅಸ್ತಿತ್ವಕ್ಕೆ ಬಂದು, ಸಾರ್ವಜನಿಕ ಪ್ರಯತ್ನ, ಪರಿಶ್ರಮಗಳಿಂದಲೇ ಭವನ ನಿರ್ಮಾಣ ಮಾಡಬೇಕೆಂಬ ಛಲ ತೊಟ್ಟು 1979ರಲ್ಲಿ ಕಾರ್ಯಪ್ರವೃತ್ತವಾಯಿತು. ನಂದಳಿಕೆ ಚಾವಡಿಯ ದಿ॥ ಸೀತಮ್ಮ ಹೆಗ್ಗಡಿತಿಯವರು ಸ್ಮಾರಕ ಕೇಂದ್ರಕ್ಕಾಗಿ ಒಂದು ನಿವೇಶನವನ್ನೂ ನೀಡಿದ್ದರು. ಈಚೆಗೆ ಸರ್ಕಾರ ಸ್ಮಾರಕ ಯೋಜನೆಗೆ ಒಂದು ಲಕ್ಷ ರೂಪಾಯಿ ನೀಡಿದೆ. ಸುಸಜ್ಜಿತ ಗ್ರಂಥಾಲಯಕ್ಕಾಗಿ ಎರಡು ಲಕ್ಷ ರೂಪಾಯಿಯ ಅಂದಾಜಿನಲ್ಲಿ

ಕಟ್ಟಡ ನಿರ್ಮಾಣ ಪ್ರಾರಂಭವಾಗಿರುವುದು ಸಂತೋಷದ ಸಂಗತಿ. ಇದು ಮುಗಿಯುವ ಹಂತದಲ್ಲಿದೆ ಎಂದು ತಿಳಿದುಬಂದಿದೆ.

**ಡಿ.ವಿ.ಜಿ. ಸ್ಮಾರಕ ಭವನ:** 1987ರ ಮಾರ್ಚಿ ತಿಂಗಳಲ್ಲಿ ಕನ್ನಡದ ಉದ್ದಾಮ ಸಾಹಿತಿ ಡಾ॥ ಡಿ. ವಿ. ಗುಂಡಪ್ಪನವರ ಜನ್ಮಶತಮಾನೋತ್ಸವ ವರ್ಷ ಪ್ರಾರಂಭವಾಗಲಿದೆ. ದಿವಂಗತರ ಹುಟ್ಟೂರಾದ ಮುಳಬಾಗಿಲಿನಲ್ಲಿ 'ಡಿ. ವಿ. ಗುಂಡಪ್ಪ ಪ್ರತಿಷ್ಠಾನ' ಸ್ಥಾಪನೆಯಾಗಿದ್ದು, ಡಿ.ವಿ.ಜಿ. ಸ್ಥಾಪಿಸಿದ ಬೆಂಗಳೂರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಹಕಾರದಿಂದ ಶತಮಾನೋತ್ಸವವನ್ನು ಆಚರಿಸಲು ಸಿದ್ಧತೆಯಲ್ಲಿ ತೊಡಗಿದೆ. ಈ ಸಂದರ್ಭದಲ್ಲಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯೂ ಡಿ.ವಿ.ಜಿ. ಪ್ರತಿಷ್ಠಾನವೂ ಕೂಡಿ ಮುಳಬಾಗಿಲಿನಲ್ಲಿ ಡಿ.ವಿ.ಜಿ. ಸ್ಮಾರಕ ಭವನ ನಿರ್ಮಾಣ ಕಾರ್ಯ ಪ್ರಯತ್ನ ಮಾಡಿದರೆ, ಅದು ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

## 'ಮುಂಬಯಿ' – ಕನ್ನಡದ ಹೆಸರು

ಬೊಂಬಾಯಿ ನಗರದ ಹೆಸರನ್ನು 'ಮುಂಬಯಿ' ಎಂದು ಮಹಾರಾಷ್ಟ್ರ ಸರ್ಕಾರ ಕೆಲಕಾಲದ ಹಿಂದೆ ಮಾರ್ಪಡಿಸಿಕೊಂಡಿರುವುದು ಸರಿಯಷ್ಟೆ. ಈ ಕುರಿತು ಪಂಡಿತ ಶ್ರೀ ಎರೆಸೀಮೆ ಚೆನ್ನಪ್ಪನವರು 17–4–1986ರ ಪ್ರಜಾವಾಣಿ ಪತ್ರಿಕೆಯ "ವಾಚಕರ ವಾಣಿ" ವಿಭಾಗಕ್ಕೆ ಬರೆದ ಪತ್ರ ಗಮನಾರ್ಹ. ಅದನ್ನು ಇಲ್ಲಿ ಎತ್ತಿಕೊಡಬಯಸುತ್ತೇವೆ:

"ಶ್ರೀ ಪಾಟೀಲ ಪುಟ್ಟಪ್ಪನವರು ಬರೆದ "ಒಂದೇ ಇತಿಹಾಸದ ರಾಜ್ಯಗಳು" (ಪ್ರಜಾವಾಣಿ 9–4–86) ಎಂಬ ಲೇಖನ ಓದಿದ ಮೇಲೆ 'ಬೊಂಬಾಯಿ'ಗೆ ಈ ಹೆಸರು ಬಂದ ಸ್ವಾರಸ್ಯಕರ ವಿಷಯವನ್ನೂ ಸಾರ್ವಜನಿಕರ ಗಮನಕ್ಕೆ ತರಲು ಒಂದು ಚಿಕ್ಕ ಪ್ರಯತ್ನ.

"ಈಗ ಬೊಂಬಾಯಿ, ಬೊಂಬೈ, ಮುಂಬೈ, ಬೋಂಬೆ – ಇತ್ಯಾದಿಯಾಗಿ ಕರೆಯುತ್ತಿರುವ ಹೆಸರುಗಳೆಲ್ಲ 'ಮುಂಬಾಯಿ' ಎಂಬ ಕನ್ನಡ ಮೂಲರೂಪದ ಸವೆದ ಅಥವಾ ವಿಕೃತಗೊಂಡ ರೂಪಗಳು. ಇಲ್ಲಿ ಭೂಮಿಯು ಮುಖ ಸಮುದ್ರದಲ್ಲಿ ಬಹುದೂರದವರೆಗೆ ಚಾಚಿಕೊಂಡು ಭಾರತದಲ್ಲಿಯೇ ಅತ್ಯುತ್ತಮ ನೈಸರ್ಗಿಕ ಬಂದರನ್ನಾಗಿಸಿದೆ. ಭೂಮಿಯ ಬಾಯಿ ಮುಂದಕ್ಕೆ ವಿಶಾಲವಾಗಿ ಚಾಚಿಕೊಂಡ ಕಾರಣವೇ 'ಮುಂಬಾಯಿ' ಎಂದು, ಅಲ್ಲಿ ನೆಲೆಸಿದ್ದ 'ಕೋ' ಎಂಬ ಕನ್ನಡ ಮಾತನಾಡುವ ಬೆಸ್ತರು ಕರೆಯುತ್ತಿದ್ದರು. 'ಮುಂಬಾಯಿ' ಶಬ್ದ ಅಚ್ಚಗನ್ನಡ ಸಮಸ್ತ ಪದ. ಬಾಯಿಯ + ಮುಂದು = 'ಮುಂಬಾಯಿ' ಎಂಬ ಅಂಶಿ ಸಮಾಸ ರೂಪ. ಪೋರ್ಚುಗೀಸರು ಭಾರತಕ್ಕೆ ಬರುವ ಪೂರ್ವದಲ್ಲಿ ಕೇವಲ ಕೆಲವು ಕನ್ನಡ ಮಾತನಾಡುವ ಬೆಸ್ತರು ಮತ್ತು ಗೋವೆಯಿಂದ ಬಂದ ಸಾರಸ್ವತ ಬ್ರಾಹ್ಮಣ

ಕುಟುಂಬಗಳ ಹೊರತು ಅಲ್ಲಿ ಹೆಚ್ಚಿನ ಜನರಿರಲಿಲ್ಲ. ಸಾರಸ್ವತ ಬ್ರಾಹ್ಮಣರ ಮನೆ ಮಾತು ಕೊಂಕಣಿಯಾಗಿದ್ದರೂ ವ್ಯಾವಹಾರಿಕ ಭಾಷೆ ಕನ್ನಡವೇ ಆಗಿತ್ತು. ಕ್ರಿ.ಶ. 1530ರಲ್ಲಿ ಪೋರ್ಚುಗೀಸರು ಈ ದ್ವೀಪವನ್ನು ಇದು ಉತ್ತಮ ನೈಸರ್ಗಿಕ ಬಂದರು ಎಂದು ಯೋಚಿಸಿ ಹಿಡಿದುಕೊಂಡರು. ಅಂದಿನಿಂದ ಕ್ರಮೇಣ ಈ ದ್ವೀಪದ ಜನಸಂಖ್ಯೆ ಬೆಳೆಯುತ್ತ ಬಂದು ಇದರ ಮೇಲೆ ಆಗತಾನೆ ಭಾರತಕ್ಕೆ ಬಂದ ಬ್ರಿಟಿಷರ ಕಣ್ಣು ಬಿತ್ತು. ಬ್ರಿಟನ್ನಿನ 2ನೇ ಚಾರ್ಲ್ಸ್ ದೊರೆ ಪೋರ್ಚುಗಲ್ಲಿನ ದೊರೆಯ ಸಹೋದರಿಯನ್ನು ಮದುವೆಯಾಗಿ ಈ ದ್ವೀಪವನ್ನು ಬಳುವಳಿಯಾಗಿ ಪಡೆದ (1662). ಅಂದಿನಿಂದ ಬ್ರಿಟಿಷರು ಬೊಂಬಾಯಿಯನ್ನು ತಮ್ಮ ವ್ಯಾಪಾರ ಕೇಂದ್ರವನ್ನಾಗಿಸಿದರು. ಬಂದರನ್ನು ಅಭಿವೃದ್ಧಿಪಡಿಸಿದರು. 1673ರ ಹೊತ್ತಿಗೆ 60 ಸಾವಿರ ಜನಸಂಖ್ಯೆಯ ದೊಡ್ಡ ಊರಾಯಿತು. ಇಂದು ವಿಶ್ವವಿಖ್ಯಾತ ನಗರವಾಗಿ 60 ಲಕ್ಷಕ್ಕೂ ಮಿಕ್ಕಿ ಜನಸಂಖ್ಯೆಯನ್ನೊಳಗೊಂಡ ಈ ಊರು ಮೂಲತಃ ಕನ್ನಡ ಸಂಸ್ಕೃತಿಯದು."

ಬೊಂಬಾಯಿಯಲ್ಲಿ ಮುಂಬಾದೇವಿಯ ದೇವಾಲಯ ಇದೆಯೆಂದೂ, ಆ ದೇವಿಯಿಂದ ಸ್ಥಳಕ್ಕೆ ಹೆಸರು ಬಂದಿದೆ ಎಂದೂ ಅಭಿಪ್ರಾಯ ಇದೆ. ಒಂದು ಸ್ಥಳದ ದೇವತೆಯ ಹೆಸರು ಸ್ಥಳಕ್ಕೆ ಬರುವಂತೆ ಸ್ಥಳದ ಹೆಸರು ದೇವತೆಗೆ ಬರುವ ಸಾಧ್ಯತೆಯೂ ಇದೆ. (ಉದಾ.: ಕೋಲಾರಮ್ಮ, ಕಾಶೀನಾಥ). ಮುಂಬಯಿಯಲ್ಲಿ ನೆಲಸಿದ ದೇವಿ ಮುಂಬಾಯ್‌ದೇವಿ > ಮುಂಬಾದೇವಿ ಆಗಿರಬಹುದಲ್ಲವೆ ?

## ಕನ್ನಡ ವಿಶ್ವವಿದ್ಯಾನಿಲಯ

**19–4–86ರಂದು ಮಿಥಿಕ್ ಸೊಸೈಟಿಯಲ್ಲಿ ನಡೆದ ಕನ್ನಡ ವಿಶ್ವವಿದ್ಯಾನಿಲಯ ಸಮಾಲೋಚನಾ ಸಭೆಯಲ್ಲಿ ಏಕಸದಸ್ಯ ಆಯೋಗದ ಅಧ್ಯಕ್ಷರಾದ ಪ್ರೊ॥ ಎಸ್. ಎಸ್. ಒಡೆಯರ್ ಅವರಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಪರವಾಗಿ ಒಪ್ಪಿಸಿದ ಸಲಹೆ ಸೂಚನೆಗಳು.**

ಕನ್ನಡ ವಿಶ್ವವಿದ್ಯಾನಿಲಯ ಸ್ಥಾಪನೆಯ ಸಂಬಂಧದಲ್ಲಿ ಸರ್ಕಾರ ನೇಮಿಸಿರುವ ಏಕಸದಸ್ಯ ಆಯೋಗದ ಅಧ್ಯಕ್ಷರು 12–4–1986ರಂದು ಪತ್ರಿಕಾ ಪ್ರತಿನಿಧಿಗಳೊಂದಿಗೆ ನಡೆಸಿದ ಸಮಾಲೋಚನೆಯ ಕೆಲವು ವಿವರಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ತಮಿಳು, ತೆಲುಗು. ವಿಶ್ವವಿದ್ಯಾನಿಲಯಗಳು ಮತ್ತು ಇತರ ಸಂಸ್ಥೆಗಳಿಗೆ ಆಯೋಗದ ಅಧ್ಯಕ್ಷರು ಭೇಟಿಕೊಟ್ಟು ಸಂಗ್ರಹಿಸಿರುವ ಮಾಹಿತಿ ಏನೆಂಬುದು ನಮಗೆ ತಿಳಿಯದು. ತಿಳಿದುಬಂದಷ್ಟು ವಿವರಗಳ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ. ಸ್ಮಾರಕ ಸಂಸ್ಥೆಯ ಪರವಾಗಿ ಈ ಕೆಳಗಿನ ಪೂರಕ ಸಲಹೆ ಸೂಚನೆಗಳನ್ನು ಆಯೋಗದ ಪರ್ಯಾಲೋಚನೆಗಾಗಿ ಒಪ್ಪಿಸಬಯಸುತ್ತೇವೆ.

1. ಕನ್ನಡ ವಿಶ್ವವಿದ್ಯಾನಿಲಯ ಸಂಶೋಧನೆ ಮತ್ತು ಸಂಶೋಧನಫಲದ ಪ್ರಕಟನೆಗಳಿಗೆ ಮಾತ್ರ ಮೀಸಲಾಗಿರುತ್ತ, ಬೋಧನೆಯನ್ನು ತನ್ನ ಕಾರ್ಯವ್ಯಾಪ್ತಿಯಲ್ಲಿ ಅಳವಡಿಸಿಕೊಳ್ಳದಿರುವುದು ಸ್ವಾಗತಾರ್ಹ. ಅದೇ ರೀತಿ, ಇತರ ವಿಶ್ವವಿದ್ಯಾನಿಲಯಗಳ ಕೆಲಸಕ್ಕೆ ಅಡ್ಡಿಬರುವಂತೆ ಕೆಲಸ ಮಾಡುವುದಿಲ್ಲ ಎಂಬ ಉದ್ದೇಶವೂ ಸ್ವಾಗತಾರ್ಹ. ಅದೇ ರೀತಿ, ಕರ್ನಾಟಕದಲ್ಲಿ ಸಂಶೋಧನೆಯನ್ನೆ ಪ್ರಧಾನ ಉದ್ದೇಶವಾಗಿ ಹೊಂದಿರುವ ಇತರ ಸ್ವಾಯತ್ತ ಸಂಸ್ಥೆಗಳ ಕೆಲಸಕ್ಕೆ ಅಡ್ಡಿಬರದಂತೆ ಮಾತ್ರವಲ್ಲದೆ ಅವಕ್ಕೆ ನೆರವಾಗುವಂತೆ ತನ್ನ ಕಾರ್ಯವ್ಯಾಪ್ತಿಯನ್ನು ಕನ್ನಡ ವಿಶ್ವವಿದ್ಯಾನಿಲಯ ರೂಪಿಸಿಕೊಳ್ಳಬೇಕು. ಅಂಥ ಸಂಸ್ಥೆಗಳಿಗೆ ಮನ್ನಣೆ ನೀಡಿ, ಅವುಗಳನ್ನು ಕೆಲವು ನಿಯಮಗಳಿಗೆ ಒಳಪಟ್ಟು ಅಂಗಸಂಸ್ಥೆಗಳಾಗಿ ಸೇರಿಸಿಕೊಳ್ಳಬಹುದು.

(ಟಿಪ್ಪಣಿ : ಆಯೋಗದ ತಿಳಿವಳಿಕೆಗಾಗಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕಾರ್ಯೋದ್ದೇಶಗಳನ್ನು ಒಳಗೊಂಡ ನಿಯಮಾವಳಿಯನ್ನೂ ಇತರ ಸಂಬಂಧಪಟ್ಟ ವರದಿಗಳನ್ನೂ ಪರಿಶೀಲನೆಗಾಗಿ ಇದರೊಂದಿಗೆ ಇರಿಸಿದೆ.)

2. ಕನ್ನಡ ವಿಶ್ವವಿದ್ಯಾನಿಲಯಕ್ಕೆ ನೇಮಿಸಿಕೊಳ್ಳುವ ಪ್ರಾಧ್ಯಾಪಕರು, ಉಪಪ್ರಾಧ್ಯಾಪಕರು, ರೀಡರುಗಳು ತಂತಮ್ಮ ಅಧ್ಯಯನ ಶಾಖೆಗಳಲ್ಲಿ ಕನಿಷ್ಠಪಕ್ಷ ಹತ್ತುವರ್ಷಗಳ ಸಂಶೋಧನೆಯ ಅನುಭವ ಹೊಂದಿರಬೇಕಲ್ಲದೆ, ಮೌಲಿಕ ಪ್ರಕಟನೆಗಳನ್ನು ಪ್ರಕಟಿಸಿರಬೇಕು. ಇವರುಗಳನ್ನು 3 ಇಲ್ಲವೆ 5 ವರ್ಷಗಳ ಅವಧಿಗೆ ಮಾತ್ರ ನಿಯಮಿಸಿಕೊಳ್ಳಬೇಕು. 40–60ರ ವಯೋಮಾನದವರಾಗಿರಬೇಕು. ತಮ್ಮ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಯಾವುದಾದರೂ ವಿಶ್ವವಿದ್ಯಾನಿಲಯದ ಪಿಹೆಚ್‌ಡಿ/ಡಿ.ಲಿಟ್ ಪದವಿ ಪಡೆದವರಾಗಿರಬೇಕು.

3. ವಿಶ್ವದ ಸಕಲ ಜ್ಞಾನಭಂಡಾರವು ಕನ್ನಡದಲ್ಲಿ ಸಮಗ್ರವಾಗಿ ಲಭ್ಯವಾಗುವಂತೆಯೂ ಕರ್ನಾಟಕದ ಸಾಂಸ್ಕೃತಿಕ ಸಂಪತ್ತು ಕರ್ನಾಟಕೇತರ ಭಾರತೀಯರಿಗೂ ಪರದೇಶದವರಿಗೂ ಲಭ್ಯವಾಗುವಂತೆಯೂ ವ್ಯವಸ್ಥೆ ಮಾಡಬೇಕು. ಇದಕ್ಕಾಗಿ ಭಾಷಾಂತರಕ್ಕೆ ಪ್ರಾಧಾನ್ಯ ಕೊಡಬೇಕೆಂಬ ಉದ್ದೇಶ ಸ್ವಾಗತಾರ್ಹ. ಈ ಉದ್ದೇಶ ಕಾಲಕ್ರಮದಲ್ಲಿ ನೆರವೇರಬೇಕಾದರೆ, ದಕ್ಷಿಣ ಭಾರತದ ಎಲ್ಲ ದ್ರಾವಿಡ ಭಾಷೆಗಳು, ಯೂರೋಪಿನ ಪ್ರಮುಖ ಭಾಷೆಗಳು, ಏಷ್ಯದ ಪ್ರಮುಖ ಭಾಷೆಗಳು–ಇವನ್ನು ಚೆನ್ನಾಗಿ ಕಲಿಸುವ ವ್ಯವಸ್ಥೆ ಮಾಡಬೇಕು.

4. ಕರ್ನಾಟಕದ ಎಲ್ಲ ವಿಶ್ವವಿದ್ಯಾನಿಲಯಗಳ ಎಲ್ಲ ಜ್ಞಾನಶಾಖೆಗಳು ಮತ್ತು ಸಂಶೋಧನ ಸಂಸ್ಥೆಗಳ ವಿದ್ವಾಂಸ ಪ್ರತಿನಿಧಿಗಳು, ಕನ್ನಡ ವಿಶ್ವವಿದ್ಯಾನಿಲಯದ ವಿವಿಧ ಜ್ಞಾನಶಾಖೆಗಳ ಮುಖ್ಯರು ಹಾಗೂ ಸರ್ಕಾರ ನಾಮಕರಣ ಮಾಡುವ ಇಬ್ಬರು ಅಥವಾ ಮೂವರು ವಿದ್ವಾಂಸರು ಇವರನ್ನೊಳಗೊಂಡ ಒಂದು ವಿದ್ವತ್ ಸಮನ್ವಯ ಸಭೆ (Co-ordinating Council of Scholars)

ಇರತಕ್ಕದ್ದು. ಉಪಕುಲಪತಿ ಮತ್ತು ಕುಲಸಚಿವರು ಅಧಿಕಾರ ನಿಮಿತ್ತ ಈ ಸಭೆಯ ಸದಸ್ಯರಾಗಿರತಕ್ಕದ್ದು. ಕನ್ನಡ ವಿಶ್ವವಿದ್ಯಾನಿಲಯ, ಬೇರೆ ಬೇರೆ ವಿಶ್ವವಿದ್ಯಾನಿಲಯಗಳು ಮತ್ತು ಸಂಶೋಧನ ಸಂಸ್ಥೆಗಳು ನಡಸುವ ಸಂಶೋಧನ ಕಾರ್ಯಗಳು, ಪ್ರಕಟನೆಗಳು, ಪರಸ್ಪರ ಪೂರಕವಾಗಿರುವಂತೆ ಹಾಗೂ ಪುನರಾವೃತ್ತಿಯಾಗದಂತೆ ಈ ಸಭೆ ನೋಡಿಕೊಳ್ಳತಕ್ಕದ್ದು.

ಆಡಳಿತ ನಿರ್ವಹಣೆಗೆ ಪ್ರತ್ಯೇಕ ಸೆನೆಟ್, ಇತ್ಯಾದಿ ಕಾರ್ಯಾಂಗ ಸಭೆಗಳು ಇರತಕ್ಕದ್ದು.

5. ಉಪಕುಲಪತಿಯೂ ಸೇರಿದಂತೆ ವಿಶ್ವವಿದ್ಯಾನಿಲಯದ ಎಲ್ಲ ಅಧಿಕಾರಿ ವರ್ಗವೂ ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳ ಯಾವುದಾದರೂ ನಿರ್ದಿಷ್ಟ ವಿಭಾಗದಲ್ಲಿ ಸಂಶೋಧನೆ ನಡಸಿ, ಪ್ರಸಿದ್ಧ ವಿದ್ವಾಂಸರೆಂದು ಖ್ಯಾತನಾಮರಾಗಿರಬೇಕು.

6. ಕನ್ನಡ ವಿಶ್ವವಿದ್ಯಾನಿಲಯದ ಆಡಳಿತ, ಸಂಶೋಧನೆ, ಇತ್ಯಾದಿ ಎಲ್ಲ ಆಂತರಿಕ ದಿನನಿತ್ಯದ ವ್ಯವಹಾರಗಳೂ ಕನ್ನಡ ಭಾಷೆಯ ಮೂಲಕವೇ ನಡೆಯಬೇಕು.

7. ಕನ್ನಡ ವಿಶ್ವವಿದ್ಯಾನಿಲಯದ ಸಂಶೋಧನ ಫಲಗಳು ಹೊರಜಗತ್ತಿಗೆ ತಿಳಿಯುವ ಸಲುವಾಗಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ತ್ರೈಮಾಸಿಕ ವಿದ್ವತ್ ಪತ್ರಿಕೆ ಪ್ರಕಟವಾಗಬೇಕು.

8. ಈಗ ಬೇರೆ ಬೇರೆ ಕಡೆ ನಡೆಯುತ್ತಿರುವ ಕನ್ನಡ ನಿಘಂಟು, ಕನ್ನಡ ವಿಶ್ವಕೋಶ, ಕನ್ನಡ–ಇಂಗ್ಲಿಷ್ ನಿಘಂಟು, ಗೆಜೆಟಿಯರ್, ಆರ್ಖೈವ್ಸ್, ಎಪಿಗ್ರಾಫಿಯಾ ಕರ್ನಾಟಕ—ಈ ಯೋಜನೆಗಳನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆ ಮಾಡುವ ವ್ಯವಸ್ಥೆಯನ್ನು ಕೈಗೊಳ್ಳಬೇಕು.

9. ವಿಶ್ವವಿದ್ಯಾನಿಲಯಗಳೂ ಬೇರೆ ಬೇರೆ ಸಂಶೋಧನ ಸಂಸ್ಥೆಗಳೂ ಕೈಗೆತ್ತಿಕೊಳ್ಳುವ ಸಂಶೋಧನ, ಪ್ರಕಟನ, ಇತ್ಯಾದಿ ಪ್ರಾಯೋಜನೆಗಳು (Projects) ವಿಶೇಷ ಅನುದಾನಕ್ಕಾಗಿ ಕನ್ನಡ ವಿಶ್ವವಿದ್ಯಾನಿಲಯದ ಮೂಲಕ ಸರ್ಕಾರಕ್ಕೆ ಸಾಗಬೇಕು. ಕನ್ನಡ ವಿಶ್ವವಿದ್ಯಾನಿಲಯದ ಸಮನ್ವಯ ಸಭೆ ಶಿಫಾರಸು ಮಾಡಿದ ಪ್ರಾಯೋಜನೆಗೆ ಸರ್ಕಾರ ಪ್ರಾಯೋಜನಾ ಅನುದಾನವನ್ನು ಒಂದು ನಿರ್ದಿಷ್ಟ ಅವಧಿಯೊಳಗೆ ಕಡ್ಡಾಯವಾಗಿ ಮಂಜೂರು ಮಾಡಬೇಕು.

10. ಕನ್ನಡ ವಿಶ್ವವಿದ್ಯಾನಿಲಯ ಮನ್ನಣೆ ನೀಡಿದ ಸಂಸ್ಥೆಗಳಿಗೆ ಅವರವರ ಅಗತ್ಯಗಳಿಗೆ ತಕ್ಕಂತೆ ಸರ್ಕಾರ ವಾರ್ಷಿಕ ಅನುದಾನ ನೀಡಬೇಕು.

11. ಭಾರತದ ಎಲ್ಲ ಭಾಷೆಗಳ ಹಾಗೂ ಯುರೋಪಿನ ಪ್ರಮುಖ ಭಾಷೆಗಳಿಗೆ ಸಂಬಂಧಪಟ್ಟಂತೆ ಭಾಷಾಂತರಕಾರರಿಗೆ ಸಹಕಾರಿಯಾಗುವಂಥ ದ್ವಿಭಾಷಾ ನಿಘಂಟುಗಳನ್ನು ನಿರ್ಮಾಣ ಮಾಡಬೇಕು: ಇಲ್ಲವೆ ಅಂಥ ನಿಘಂಟುಗಳನ್ನು

ನಿರ್ಮಾಣ ಮಾಡುವ ಸಂಸ್ಥೆಗಳಿಗೆ ಧನಸಹಾಯ ದೊರಕುವಂತೆ ವ್ಯವಸ್ಥೆ ಮಾಡಬೇಕು.

12. ಎಲ್ಲ ಭಾಷೆಗಳ ಶ್ರೇಷ್ಠ ಸಾಹಿತ್ಯಕೃತಿಗಳು ಕನ್ನಡಕ್ಕೂ ಕನ್ನಡದ ಶ್ರೇಷ್ಠ ಕೃತಿಗಳು ಇಂಗ್ಲಿಷಿಗೂ ಭಾಷಾಂತರಗೊಳ್ಳಲು ಸಾಧ್ಯವಾಗುವಂತೆ ವ್ಯವಸ್ಥೆ ಮಾಡಬೇಕು.

## "ಶ್ರೀವಾಣಿ" ಕ್ಯಾಸೆಟ್ ಬಿಡುಗಡೆ ಸಮಾರಂಭ

1-11-86, ರಾಜ್ಯೋತ್ಸವದ ಶುಭದಿನ ಬೆಂಗಳೂರಿನಲ್ಲಿ, ಭಾರತೀಯ ವಿದ್ಯಾಭವನದ ಸಭಾಂಗಣದಲ್ಲಿ "ಶ್ರೀವಾಣಿ" ಧ್ವನಿಸುರುಳಿಯ ಕ್ಯಾಸೆಟ್ ಬಿಡುಗಡೆಯ ಸಮಾರಂಭ ನಡೆಯಿತು. ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರ ಜೀವನ-ದರ್ಶನಗಳ ಪರಿಚಯ ಮಾಡಿಸುವ ಈ ಧ್ವನಿಸುರುಳಿ (ಕ್ಯಾಸೆಟ್) ಯನ್ನು ಸ್ಥಿರಪಡಿಸಿರುವುದು ಕರ್ನಾಟಕ ನವೋದಯ ಸಂಸ್ಥೆ.

"ಆಚಾರ್ಯ ಶ್ರೀ ಅವರು ಕನ್ನಡಕ್ಕೆ ಶ್ರೀಕಾರ ಹಾಕಿದವರು. ಅವರೇ ಕನ್ನಡದ ಏಳಿಗೆಗಾಗಿ ಟೊಂಕಕಟ್ಟಿನಿಂತ ಒಬ್ಬ "ಮಿಷನರಿ", ಪ್ರಪ್ರಥಮ ಮಿಷನರಿ-ಪ್ರವರ್ತಕ. ಶ್ರೀ ಅವರ ಜೀವನದ ನೆನಪು ಎಲ್ಲರಿಗೂ ಆಗಬೇಕು. ಶ್ರೀ ಅವರು ಹೇಗಿದ್ದರು, ಅವರ ಮುಖ್ಯ ದರ್ಶನದ ವಿಷಯ ಯಾವುದು, ಅವರಿಗೆ ಜೀವನದಲ್ಲಿ ಶಾಂತಿಯನ್ನು ತಂದುಕೊಟ್ಟದ್ದು ಯಾವ ವಿಷಯ— ಇದನ್ನೆಲ್ಲ ತಿಳಿಯಬೇಕಾದರೆ ಈ ಸಣ್ಣ ಕ್ಯಾಸೆಟ್ ನೆರವಾಗುತ್ತದೆ."

"ಶ್ರೀ ಅವರ ಜೀವನದ ಸಾರ, ಅವರ ಸಂದೇಶ ಅಂದರೆ ಕನ್ನಡವನ್ನು ಎಷ್ಟು ದಿಕ್ಕಿಗೆ, ಎಷ್ಟು ರೀತಿಯಲ್ಲಿ ಶುದ್ಧವಾಗಿ ನಾವು ನಡೆಸುತ್ತೀವಿ—ಹಬ್ಬಿಸುತ್ತೀವಿ, ಅವರಲ್ಲಿ ನಮ್ಮ ಉನ್ನತಿ ಇದೆ, ನಮ್ಮ ಸಫಲತೆ ಇದೆ—ಅನ್ನುವುದು. ಅದಕ್ಕಾಗಿಯೇ ಅವರು ಕನ್ನಡಕ್ಕೆ ಶ್ರೀಕಾರವನ್ನು ಹಾಕಿದರು. ಅವರ ನೆನಪು ನಮಗೆ ಆಗಬೇಕು" ಎಂದು ಆಚಾರ್ಯ ಶ್ರೀರವರ ಜೀವನ-ಸಾಧನ-ದರ್ಶನಗಳ ಒಂದು ಸನಿಹದ, ಆತ್ಮೀಯ ಚಿತ್ರವನ್ನು ಡಾ॥ ವಿ. ಕೃ. ಗೋಕಾಕ್‌ರು "ಶ್ರೀವಾಣಿ" ಧ್ವನಿ ಸುರುಳಿಯ ಬಿಡುಗಡೆ ಮಾಡಿ ತಮ್ಮ ಸರಳಸುಂದರ ಶೈಲಿಯಲ್ಲಿ ಮಾತನಾಡಿದರು. ಮುಂದುವರಿಸಿ,

"ಆದರ್ಶವಾದಿಗಳಿಂದಲೇ ನಾಡಿನಲ್ಲಿ ಒಳ್ಳೆಯ ಕೆಲಸ ಆಗಬಲ್ಲುದು. ನಿರಪೇಕ್ಷೆ ಮತ್ತು ನಿರಹಂಕಾರಿ ಜೀವಿತವನ್ನು ಸಮರ್ಪಣ ಮಾಡಿಕೊಂಡಂತಹ ತರುಣರು— ಅವರಿಗೆ ಮಾರ್ಗದರ್ಶನ ನೀಡುವಂತಹ ತಿರುಮಲೆ ಶ್ರೀ ರಂಗಾಚಾರ್ಯರಂತಹ ಹಿರಿಯರು ಇವರನ್ನೊಳಗೊಂಡ 'ಕರ್ನಾಟಕ ನವೋದಯ' ದಂತಹ ಸಂಸ್ಥೆಗಳು ನಾಡಿನಲ್ಲೆಲ್ಲ ಬೆಳೆಯಬೇಕು". ಎಂದರು.

"ಶ್ರೀವಾಣಿ" ಧ್ವನಿಸುರುಳಿಯ ರೂಪಣಕ್ಕೆ ಕಾರಣರೂ ಕರ್ನಾಟಕ ನವೋದಯದ ಅಧ್ಯಕ್ಷರೂ ಆದ ತಿರುಮಲೆ ಶ್ರೀರಂಗಾಚಾರ್ಯರನ್ನು ಕನ್ನಡ ಅಭಿಮಾನಿಗಳ, ನವೋದಯದ ಕಾರ್ಯಕರ್ತರ ಅಪೇಕ್ಷೆಯಂತೆ ಈ ಸಂದರ್ಭ ದಲ್ಲಿ ಡಾ॥ ಗೋಕಾಕರು ಶಾಲು ಹೊದಿಸಿ ಸನ್ಮಾನಿಸಿದರು.

"ಕನ್ನಡಕ್ಕಾಗಿ ಹೋರಾಡಿದ ಆಚಾರ್ಯ ಬಿ.ಎಂ.ಶ್ರೀ. ಅವರು ವಿಶ್ವಭಾರತಿ ಯನ್ನು ಮರೆತಿಲ್ಲ. 'ವಿಶ್ವಭಾರತಿ ಶರಣು ಕಿರುತೀರ್ಥವುಲ್ಲು' ಎಂದು ನುಡಿದಿದ್ದಾರೆ. ಕನ್ನಡದ ಬೆಳಕನ್ನು ವಿಶ್ವದ ಎಲ್ಲೆಡೆ ಏನೇನು ಒಳ್ಳೆಯದಿದೆ, ಅವೆಲ್ಲ ಸೇರಿ ಬೆಳೆಯಲಿ ಎಂದು ಅಪೇಕ್ಷಿಸಿದರು. ತಮ್ಮ ಶಿಷ್ಯರಿಗೆ ಗ್ರೀಕ್–ಪಾಳಿ ಭಾಷೆಗಳನ್ನು ಕಲಿಯಿರಿ ಎಂದು ಹೇಳಿದರು–ಅವರ ಶಿಷ್ಯಸಂಪತ್ತು ಅದ್ಭುತ. 'ಹೀರಿ ಹೀರಿ ಹೊಮ್ಮುವುದು' ಇದು ಶ್ರೀ ಅವರ ಮಾತು. ಯಾವ ಯಾವ ಕುಸುಮದಲ್ಲಿ ಯಾವ ಯಾವ ಮಧು ಇದೆಯೋ ಅದನ್ನೆಲ್ಲಾ ಹೀರಿ ಕನ್ನಡದ ಜೇಂಗೊಡ ಆಗಬೇಕು—ಏನನ್ನಾದರೂ ಬರೆಯಿರಿ, ಕನ್ನಡ ದಲ್ಲಿ ಬರೆಯಿರಿ ಎಂಬ ಮಾತನ್ನು ಕಲಿಸಿದವರು ಶ್ರೀಕಂಠಯ್ಯನವರು–ಈ ಮಾತನ್ನವರು ಕಲಿಸದೆಹೋಗಿದ್ದರೆ–ಕನ್ನಡ ಸಾಹಿತ್ಯ ಇಷ್ಟು ಸಮೃದ್ಧ ವಾಗಿ ಬೆಳೆಯುತ್ತಿತ್ತೊ ಎಂಬ ಅನುಮಾನ ಆಗುತ್ತದೆ. ಆಚಾರ್ಯ 'ಶ್ರೀ' ಅವರ ಪ್ರಭಾವ ಇಲ್ಲದೆಹೋಗಿದ್ದಲ್ಲಿ ನಾನು 'ಉರ್ದು ಕವಿಯಾಗಿ ಹೋಗು ತ್ತಿದ್ದೆ'" ಎಂದು ತಮ್ಮ ಮೇಲಾದ ಶ್ರೀ ಅವರ ಪ್ರಭಾವವನ್ನು ಶ್ರೀ ಸಿದ್ದಯ್ಯ ಪುರಾಣಿಕರು ನೆನಸಿಕೊಂಡರು.

"ಭಾರತದ ಸಾಹಿತ್ಯದ ಭೂಪಟದಲ್ಲಿ ಕನ್ನಡದ ಸ್ಥಾನ ಹಿರಿದಾಗಿದೆ. ಇದಕ್ಕೆ ಕಾರಣರಾದವರು ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು. ಕನ್ನಡ ಸಾಹಿತ್ಯದ ಅತ್ಯುತ್ತಮ ಕೃತಿಗಳನ್ನು ಆಯ್ದು ಸಂಗ್ರಹಿಸಿ ಜನ ಓದಲಿ ಎಂದು ಅವನ್ನು ಪ್ರಕಟಿಸಿದರು. ಆಚಾರ್ಯ ಶ್ರೀ ಅವರ ಬಗೆಗೆ ನನಗೊಂದು ವ್ಯಥೆ. ಅವರು ಪ್ರಾರಂಭಿಸಿದ "ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವರು ಮುಗಿಸಲಿಲ್ಲ—ಇದ್ದಷ್ಟು ಭಾಗವನ್ನು ಓದಿದರೆ ಅವರ ದೂರದರ್ಶಿತ್ವ–ವಿಮರ್ಶೆಯ ದೃಷ್ಟಿ ಇವು ಸ್ಪಷ್ಟವಾಗುತ್ತದೆ. ಸಾಹಿತ್ಯ–ಸಂಶೋಧನೆ–ಲಿಪಿ ಇವಿಷ್ಟೇ ಅಲ್ಲ, ನಾಡಿನ ಜನಜೀವನವನ್ನು ಕುರಿತು ಅವರು ವಿಚಾರ ಮಾಡುತ್ತಿದ್ದರು. ಜನಗಣತಿಯ 1941ರ ವರದಿ ಬಂದಾಗ ಅದನ್ನು ಶ್ರೀಕಂಠಯ್ಯನವರು ಓದಿ, ಈ ರಾಜ್ಯದಲ್ಲಿ ಕನ್ನಡಿಗರ ಸಂಖ್ಯೆ ಶೇಕಡ 73 ರಿಂದ ಒಮ್ಮೆಲೇ 67ಕ್ಕೆ ಇಳಿದಿರುವುದನ್ನು ಗಮನಿಸಿದರು. ಇದಕ್ಕೆ ಕಾರಣ ವನ್ನು ಹುಡುಕಿದರು. ಸಂಚಾರಿ–ಅಲೆಮಾರಿ ಕನ್ನಡಿಗರನ್ನು ಲೆಕ್ಕಕ್ಕೆ ತೆಗೆದು ಕೊಂಡಿಲ್ಲ ಎಂಬುದನ್ನು ಹೇಳಿದರು. ಇದು ಅವರ ಕನ್ನಡ ನಾಡ ಕಾಯುವ

ಪ್ರಜ್ಞೆ. ವಯಸ್ಕರ ಶಿಕ್ಷಣದ ಕಡೆಗೂ ಅವರು ಗಮನ ಹರಿಸಿದರು. ಅವರ ದೂರದರ್ಶಿತ್ವ ಅಪೂರ್ವವಾದದ್ದು.

"ಈ ಧ್ವನಿಸುರುಳಿಯಿಂದ ನಾಡಿನಲ್ಲೆಲ್ಲ ಶ್ರೀ ಅವರ ಸಂದೇಶ ಎಲ್ಲರಿಗೂ ತಿಳಿಯುವಂತಾಗಿ, ಕನ್ನಡದಿಂದಲೇ ಕನ್ನಡಿಗರ ಉದ್ಧಾರ–ಕನ್ನಡದಿಂದ ದೂರ ಸರಿದಷ್ಟೂ ಕನ್ನಡಿಗರ ಅವನತಿ–ಅನ್ನುವ ಸತ್ಯ ಎಲ್ಲ ಜನಕ್ಕೂ ತಿಳಿಯುವಂತಾಗಲಿ. ಕರ್ನಾಟಕ ನವೋದಯದ ಈ "ಶ್ರೀವಾಣಿ"ಯು ಸಾರ್ಥಕವಾಗಲಿ" ಎಂದು ಹಾರೈಸಿದರು – ಅಧ್ಯಕ್ಷಪೀಠದಿಂದ ಕವಿ ಶ್ರೀ ಸಿದ್ದಯ್ಯ ಪುರಾಣಿಕರು.

o o o

**ಕರ್ನಾಟಕ ಇತಿಹಾಸ ಅಕಾಡೆಮಿ :** ಕರ್ನಾಟಕ ವಿಶ್ವವಿದ್ಯಾನಿಲಯದ ನಿವೃತ್ತ ಇತಿಹಾಸ ಪ್ರಾಧ್ಯಾಪಕರಾದ ಡಾ॥ ಜಿ. ಎಸ್. ದೀಕ್ಷಿತ್ ಅವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಇತಿಹಾಸ ಪರಿಷತ್ತು ಸ್ಥಾಪಿತವಾಗಿರುವುದು ಸ್ವಾಗತಾರ್ಹವಾಗಿದೆ. ಶ್ರೀ ಎಂ. ಸಿ. ನಾಗರಾಜ ಅವರು ಉಪಾಧ್ಯಕ್ಷರು. ಡಾ॥ ಲಕ್ಷಣ ತೆಲಗಾವಿ ಅವರು ಇದರ ಕಾರ್ಯದರ್ಶಿ. ಶ್ರೀ ಕೆ. ಆರ್. ಗಣೇಶ ಕೋಶಾಧಿಕಾರಿಗಳು. (ಡಾ॥ ದೀಕ್ಷಿತ್ ಮತ್ತು ಶ್ರೀ ಗಣೇಶ ಪ್ರತಿಷ್ಠಾನದ ಸದಸ್ಯರೂ ಆಗಿರುವರು.) ನಾಡಿನ ಐತಿಹಾಸಿಕ ಪ್ರಾಮುಖ್ಯ ಉಳ್ಳ ಸ್ಮಾರಕಗಳನ್ನು ಅನ್ವೇಷಣ ಮಾಡಿ ಸಂರಕ್ಷಣೆ ಮಾಡುವುದು, ಕರ್ನಾಟಕ ಇತಿಹಾಸದ ಅಧ್ಯಯನ ಮತ್ತು ಸಂಶೋಧನೆಗಳನ್ನು ನಡಸುವುದು, ಈ ವಿಷಯವನ್ನು ಜನಪ್ರಿಯ ಮಾಡುವುದು, ಅಧ್ಯಯನಗೋಷ್ಠಿ ಮತ್ತು ವಾರ್ಷಿಕ ಸಮ್ಮೇಳನಗಳನ್ನು ನಡಸುವುದು, ಹಸ್ತಪ್ರತಿಗಳು ಇರುವ ಸ್ಥಳವನ್ನು ಗುರುತಿಸಿ ಅವುಗಳ ಸಂರಕ್ಷಣೆಗೆ ವ್ಯವಸ್ಥೆ ಮಾಡುವುದು, 'ಕರ್ನಾಟಕ ಇತಿಹಾಸ ದರ್ಶನ' ಎಂಬ ಪತ್ರಿಕೆಯನ್ನು ಪ್ರಕಟಿಸಿರುವುದು—ಇವು ಅಕಾಡೆಮಿಯ ಮುಖ್ಯ ಧ್ಯೇಯಗಳು.

ಈ ಸಂಸ್ಥೆಗೆ ಸ್ವಾಗತ ಬಯಸುತ್ತ, ಅಕಾಡೆಮಿಯೂ ಪ್ರತಿಷ್ಠಾನವೂ ಉಭಯಸಾಮಾನ್ಯ ವಿಷಯಗಳಲ್ಲಿ ಪರಸ್ಪರ ಸಹಕರಿಸಿ ಕಾರ್ಯನಿರ್ವಹಣೆ ಮಾಡಬಹುದೆಂದು ಸೂಚಿಸಬಯಸುತ್ತೇವೆ.

---

## ಪತ್ರ ವ್ಯವಹಾರ

### 'ಸಂಬಂಧ'ದ ವಿವರಣೆ

೯-೧೨-೧೯೭೭ರ 'ಪ್ರಜಾವಾಣಿ'ಯ 'ವಾಚಕವಾಣಿ' ವಿಭಾಗದಲ್ಲಿ ಉಜಿರೆಯ 'ಸಂದೇಹಿ' ಎಂಬವರು ಕುಮಾರವ್ಯಾಸಭಾರತದ ಪೀಠಿಕಾಸಂಧಿಯಲ್ಲಿಯ, "ವೇದ ಪುರುಷನ ಸುತನ ಸುತನ..." ಎಂದು ಮೊದಲಾಗುವ ಪದ್ಯದ ಒಂದು ಶಬ್ದದ ಪಾಠದ ಬಗೆಗೆ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ. ಕುವೆಂಪು ಮತ್ತು ಮಾಸ್ತಿ ಯವರು ಜೊತೆಗೂಡಿ ಸಂಪಾದಿಸಿರುವ ಮುದ್ರಣದಲ್ಲಿ ಪ್ರಸಕ್ತ ಶಬ್ದವು ಕಾಣಿಸಿ ಕೊಳ್ಳುವ ಗ್ರಂಥಪಾಠ ಹೀಗಿದೆ :

"ವೇದಪುರುಷನ ಸುತನ ಸುತನ ಸಹೋದರನ ಹೆಮ್ಮಗನ ಮಗನ ತಳೋ ದರಿಯ ಮಾತುಳನ ರೂಪನನತುಳ ಭುಜಬಲದಿ" ಇತ್ಯಾದಿ.

ಗಮಕ ಕಲಾ ಪ್ರವೀಣರಾಗಿದ್ದ ದಿವಂಗತ ಸಂ. ಗೋ. ಬಿಂದೂರಾಯರ 'ಭಾರತ ಸಾರೋದ್ಧಾರ' ಗ್ರಂಥದಲ್ಲಿ 'ಹೆಮ್ಮಗನ' ಶಬ್ದಕ್ಕೆ ಬದಲಾಗಿ 'ಮೊಮ್ಮಗನ' ಎಂದಿದೆ ಎಂದೂ, ಇವೆರಡರಲ್ಲಿ ಯಾವುದು ಸರಿ ಎಂದೂ 'ಸಂಬಂಧ'ದ ವಿವರಣೆ ಯನ್ನು ಬಯಸಿದ್ದಾರೆ 'ಸಂದೇಹಿ'.

ಕುವೆಂಪು – ಮಾಸ್ತಿ ಮುದ್ರಣದಲ್ಲಿಯ 'ಮಾತುಳನ ರೂಪನನ' ಎಂಬ ಪ್ರಯೋಗವನ್ನೂ ಇಲ್ಲಿ ಗಮನಿಸಬಹುದು. ಬಿಂದೂರಾಯರ ಗ್ರಂಥದ ಪ್ರಕಾರ 'ಮಾತುಳನ ಮಾವನ' ಎಂಬುದು ಒಂದು ಪಾಠ.

ಇಲ್ಲಿ, ಕವಿಪಾಠ ಯಾವುದು ಎಂಬುದನ್ನು ಉಪಲಬ್ಧವಿರುವ ಸಂಗ್ರಾಹ್ಯ ಪಾಠಾಂತರಗಳೆಲ್ಲವನ್ನೂ ಶಾಸ್ತ್ರೀಯವಾಗಿ ಪರಿಶೀಲಿಸಿದಲ್ಲದೆ ನಿರ್ಣಯಿಸುವುದು ಸುಲಭವೂ ಅಲ್ಲ ಸಾಧುವೂ ಅಲ್ಲ. ಇಂಥ ಸನ್ನಿವೇಶಗಳಲ್ಲಿ ಅರ್ಥಸಾಮಂಜಸ್ಯ ದೃಷ್ಟಿಯಿಂದ ತಾತ್ಕಾಲಿಕವಾಗಿ (tentatively) ಅಪಪಾಠಗಳನ್ನು ಪರಿಷ್ಕರಿಸಿ ಕೊಳ್ಳುವುದು ಶಾಸ್ತ್ರಮರ್ಯಾದೆಗೆ ಒಪ್ಪಿತ.

ಬಿಂದೂರಾಯರು ವಾಚನ ಮಾಡುವಾಗಲೆಲ್ಲ 'ಹೆಮ್ಮಗನ' ಎಂದು ಹೇಳು ತ್ತಿದ್ದಂತೆಯೆ ನಾನು ಕೇಳಿದ ನೆನಪು. ಈ ಮಾತನ್ನು ಅರ್ಥಸಾಮಂಜಸ್ಯ ದೃಷ್ಟಿ ಯಿಂದ ಅವರು ತಮ್ಮ ಗ್ರಂಥರಚನಾಕಾಲದಲ್ಲಿ ತಿದ್ದಿಕೊಂಡಂತೆ ಕಾಣುತ್ತದೆ. ಅವರು ಒಂದು ಕಾಲದಲ್ಲಿ ಹೇಳುತ್ತಿದ್ದಂತೆ ಪದ್ಯವನ್ನು ಬರೆದಿಟ್ಟುಕೊಂಡಿದ್ದೇನೆ. ಇದರಲ್ಲಿ 'ಹೆಮ್ಮಗನ' ಎಂದೇ ಇದೆ. 'ಮಾತುಳನ ರೂಪನನ' ಎಂದಿರದೆ 'ಮಾತುಳನ ಮಾವನ' ಎಂದಿದೆ. 'ಮಾತುಳನ ರೂಪನನ' ಎಂಬುದಕ್ಕೆ ಅರ್ಥ ಹೇಳುವುದೇ ಕಷ್ಟ. ನಾನು ಪರಿಶೀಲಿಸಿ ನೋಡಿದ್ದರಲ್ಲಿ ಬಿಂದೂರಾಯರ ಗ್ರಂಥದ ಪಾಠ ವ್ಯಕ್ತಿಗಳ ಸಂಬಂಧ ವಿವರಣೆಯ ದೃಷ್ಟಿಯಿಂದ ಸರಿ ಎಂದು ಹೇಳಬಹುದು. ಸಂಬಂಧವಿವರಣೆ ಹೀಗೆ :

ವೇದಪುರುಷನ – ನಾರಾಯಣನ, ಸುತನ – ಬ್ರಹ್ಮನ, ಸುತನ – ನಾರದನ, ಸಹೋದರನ – ಕಶ್ಯಪನ, ಮೊಮ್ಮಗನ – ಇಂದ್ರನ. ಮಗನ – ಅರ್ಜುನನ, ತಳೋದರಿಯ–ಹೆಂಡತಿಯ, ಮಾತುಳನ – (ಸೋದರ)ಮಾವನ (ಎಂದರೆ ಕಂಸನ), ಮಾವನ – ಜರಾಸಂಧನ, ಅತುಳ ಭುಜಬಲದಿ ಕಾದಿ ಗೆಲಿದನ–ಭೀಮನ, ಅಣ್ಣನ–ಧರ್ಮರಾಯನ, ಅವ್ವೆಯ – ಕುಂತಿಯ, ನಾದಿನಿಯ – ದೇವಕಿಯ, ಜಠರದಲಿ ಜನಿಸಿದನಾದಿಮೂರುತಿ–ಶ್ರೀಕೃಷ್ಣ, ಸಲಹೊ ಗದುಗಿನ ವೀರನಾರಯಣ.*



* 'ಶರಿದೇಹಿ'ಯವರ ಪತ್ರವ್ಯವಹಾರಕ್ಕೆ ಉತ್ತರವಾಗಿ ನನ್ನ ಮೇಲ್ಕಂಡ ಉತ್ತರವನ್ನು 10-12-1979ರಲ್ಲಿ ಪ್ರಜಾವಾಣಿಯ ಸಂಪಾದಕರಿಗೆ ಪ್ರಕಟನೆಗಾಗಿ ಕಳಿಸಿಕೊಟ್ಟೆನು. ನನ್ನ ಪತ್ರವನ್ನು ಪ್ರಜಾವಾಣಿಯ ಸಂಪಾದಕರು ಪ್ರಕಟಿಸಿದ್ದು ನನ್ನ ಗಮನಕ್ಕೆ ಬಂದಿಲ್ಲ. ಈ ಪತ್ರ ವ್ಯವಹಾರ ವಿದ್ವಾಂಸರ ಗಮನಕ್ಕೆ ಬರತಕ್ಕದ್ದು ಎಂಬ ಎಣಿಕೆಯಿಂದ ಇಲ್ಲಿ ಪ್ರಕಟಿಸುವ ಅವಕಾಶವನ್ನು ಈಗ ಪಡೆದುಕೊಂಡಿದ್ದೇನೆ. —ಎಂ.ವಿ.ಸೀ.

# ಅಭಿನಂದನೆ

**ಕಬೀರ್ ಸಮ್ಮಾನ :** ಮಧ್ಯಪ್ರದೇಶದ ಸರ್ಕಾರದವರು ಭಾರತೀಯ ಕಾವ್ಯ ಪುರಸ್ಕಾರಕ್ಕಾಗಿ ರಾಷ್ಟ್ರಮಟ್ಟದಲ್ಲಿ ಹೊಸದಾಗಿ ವ್ಯವಸ್ಥೆಮಾಡಿರುವ "ಕಬೀರ್ ಸಮ್ಮಾನ"ವನ್ನು 1986-87ರ ಸಾಲಿಗಾಗಿ ಪ್ರಖ್ಯಾತ ಕನ್ನಡ ಕವಿ ಶ್ರೀ ಗೋಪಾಲ ಕೃಷ್ಣ ಅಡಿಗರಿಗೆ ನೀಡಿರುತ್ತಾರೆ. ಈ ಸಮ್ಮಾನವು ಪ್ರಪ್ರಥಮವಾಗಿ ಕನ್ನಡ ಕವಿಗೆ ಸಂದಿರುವುದು ಕನ್ನಡ ಕಾವ್ಯಕ್ಕೇ ಸಂದ ಗೌರವ.

**ರಾಜಾಜಿ ಸಾಹಿತ್ಯ ಪುರಸ್ಕಾರ :** 1986ನೆಯ ವರ್ಷದ ರಾಜಾಜಿ ಸಾಹಿತ್ಯ ಪುರಸ್ಕಾರವು ಪರ್ಯಾಯ ಕ್ರಮದಲ್ಲಿ ಕನ್ನಡ ಸಾಹಿತ್ಯಕ್ಕೆ ಮೀಸಲಾಗಿದ್ದು, ಡಾ॥ ವಿ. ಕೃ. ಗೋಕಾಕ್ ಅವರಿಗೆ ಈ ಪುರಸ್ಕಾರ ಸಂದಿದೆ. (ಶ್ರೀಯುತರು ಪ್ರತಿಷ್ಠಾನದ ಗೌರವ ಸದಸ್ಯರು.)

**ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ :** 1983ರಿಂದ 1985ರ ಮೂರು ವರ್ಷಗಳ ಅವಧಿಯಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳಲ್ಲಿ ಉತ್ತಮವಾದದ್ದೆಂದು ತೀರ್ಪುಗಾರರ ಮಂಡಲಿಯಿಂದ ಆಯ್ಕೆಯಾದ ಕೃತಿಗೆ ಸಲ್ಲುವ ಬಹುಮಾನ ಈ ಸಲ ಶ್ರೀ ವ್ಯಾಸರಾಯ ಬಲ್ಲಾಳರ 'ಬಂಡಾಯ' ಎಂಬ ಕಾದಂಬರಿಗೆ ಸಂದಿದೆ.

## ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದವರು

1985 :—ಸರ್ವಶ್ರೀ ಡಾ॥ ಎಚ್. ತಿಪ್ಪೇರುದ್ರಸ್ವಾಮಿ ; ಡಾ॥ ಹಾ. ಮಾ. ನಾಯಕ ; ಡಾ॥ ಎಸ್. ಎಲ್. ಭೈರಪ್ಪ ; ಡಾ॥ ರಾಮಚಂದ್ರಶರ್ಮ (ಪ್ರತಿಷ್ಠಾನದ ಆಜೀವ ಸದಸ್ಯರು) ; ಶಾಂತರಸ ; ಶ್ರೀಮತಿ ಕಮಲಾ ಹಂಪನಾ (ವಿಶೇಷ ಪ್ರಶಸ್ತಿ: ಪ್ರತಿಷ್ಠಾನದ ಸದಸ್ಯರು).

1986 :—ಸರ್ವಶ್ರೀ ಪ್ರೊ॥ ಕೆ. ವೆಂಕಟರಾಮಪ್ಪ (ಪ್ರತಿಷ್ಠಾನದ ಗೌರವ ಸದಸ್ಯರು) ; ಪಿ. ಲಂಕೇಶ್ ; ಡಾ॥ ಪ್ರಭುಶಂಕರ ; ಡಾ॥ ಶಂಕರ ಮೊಕಾಶಿ ಪುಣೇಕರ್ ; ಶ್ರೀ ಎಸ್. ನಾಗೇಶರಾವ್ (ಗಮಕ ಕಲೆ).

## ರಾಜ್ಯೋತ್ಸವ ಪ್ರಶಸ್ತಿ (1986)

**ಸಾಹಿತ್ಯ :** ಸರ್ವಶ್ರೀ ಡಾ॥ ಶಿವರಾಮ ಕಾರಂತ ; ಪ್ರೊ॥ ವಿ. ಕೃ. ಗೋಕಾಕ (ಪ್ರತಿಷ್ಠಾನದ ಗೌರವ ಸದಸ್ಯರು) ; ಸಿದ್ದಲಿಂಗಯ್ಯ.

**ಸಂಶೋಧನೆ :** ಡಾ॥ ಶಂ. ಬಾ. ಜೋಶಿ ; ಪ್ರೊ॥ ಎಸ್. ಕೆ. ರಾಮಚಂದ್ರರಾವ್.

ಮೇಲೆ ಹೆಸರಿಸಿರುವ ಎಲ್ಲ ಪ್ರಶಸ್ತಿವಿಜೇತರಿಗೂ ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ಪರವಾಗಿ 'ಲೋಚನ'ದ ಹೃತ್ಪೂರ್ವಕ ಅಭಿನಂದನೆಗಳು.

---

# ಶ್ರದ್ಧಾಂಜಲಿ

## ಕನ್ನಡದ ಆಸ್ತಿ ಮಾಸ್ತಿ

ದಿವಂಗತ ಪೂಜ್ಯ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಹುಟ್ಟಿದ್ದು ಜೂನ್ 6, 1891. ಈ ವರ್ಷ (1986) ನಿಧನರಾದದ್ದೂ ಅಂದೇ. ಆಶ್ಚರ್ಯ ಕರವಾದ ಆಕಸ್ಮಿಕ. ಅತಿ ವಿರಳ ಯೋಗ.

ಬಿ.ಎಂ.ಶ್ರೀ. ಅವರ ಅಚ್ಚುಮೆಚ್ಚಿನ ಶಿಷ್ಯರು. ಗುರುವಿನಂತೆಯೇ ಇಂಗ್ಲಿಷ್ ಭಾಷೆ, ಸಾಹಿತ್ಯಗಳ ಎಂ.ಎ. ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಆದರು. ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆ ಮಾಡಿ ಅಸಿಸ್ಟೆಂಟ್ ಕಮಿಷನರ್ ಆಗಿ ನೇಮಕಗೊಂಡರು. ಎಲ್ಲ ಪರೀಕ್ಷೆಗಳಲ್ಲೂ ಪ್ರಥಮ ದರ್ಜೆಯಲ್ಲಿ ಪ್ರಥಮ. ಛಲವಂತರು ಎಂದೇ ಹೇಳ ಬೇಕು. ಜೋಡಿಕುದುರೆ ಮೇಲೆ ನಿಂತು ಸವಾರಿ ಮಾಡುವ ಹಾಗೆ, ಸರ್ಕಾರಿ ಸೇವೆಯ ರಥವನ್ನೂ ಸಾಹಿತ್ಯರಥವನ್ನೂ ದಕ್ಷತೆಯಿಂದ ನಡಸಿದರು.

ತಮಿಳಂತೂ ಸರಿಯೆ ಸರಿ, ತಾಯ್ನುಡಿ. ಆದರೂ ಕನ್ನಡವನ್ನು ಕಲಿತು, ಕನ್ನಡದಲ್ಲಿ ಬರೆದು, ಕನ್ನಡದೊಲವು ಅವರ ಉಸಿರಾಗಿತ್ತು. ತಾವು ತಮಿಳು-ಕನ್ನಡಿಗ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು. ಗೋವಿಂದ ಪೈ ಅಂತೆ, ಕನ್ನಡ ತನ್ನ ಸಾಕುತಾಯಿ ಎಂದು ಅವರ ನಿಲವು. ಕನ್ನಡಕ್ಕಾಗಿ ಬದುಕಿದರು, ಬಾಳಿದರು.

ಅಸಿಸ್ಟೆಂಟ್ ಕಮಿಷನರ್ ಆಗಿದ್ದ ಕಾಲದಲ್ಲಿ, ಕನ್ನಡ ನಾಡನ್ನು–ಮುಖ್ಯವಾಗಿ ಮಲೆನಾಡು ಪ್ರಾಂತದ ಹಳ್ಳಿಗಾಡನ್ನು ಸುತ್ತಾಡುವ ಅವಕಾಶ ಅವರಿಗೆ ಲಭಿಸಿತು. ಕನ್ನಡ ಜನತೆಯ ಸಂಸ್ಕೃತಿಯ ಅರಿವು ಅವರ ಅನುಭವಸಂಪತ್ತಿನ ಒಂದು ಭಾಗ ವಾಯಿತು. ರಾಮಾಯಣ, ಭಾರತ, ಭಗವದ್ಗೀತೆಗಳ ಆಳವಾದ ವ್ಯಾಸಂಗ; ಷೇಕ್ಸ್‌ಪಿಯರ್, ಕಾಳಿದಾಸ, ತಮಿಳಿನ ಆಳ್ವಾರರು, ಬಸವೇಶ್ವರರು, ಪುರಂದರ ದಾಸರು, ರವೀಂದ್ರನಾಥ ಠಾಕೂರರು—ಇವರ ಬರಹಗಳು ಮಾಸ್ತಿಯವರ ಧರ್ಮ ಶ್ರದ್ಧೆಯನ್ನು, ಜೀವನದರ್ಶನವನ್ನು, ನಂಬಿಕೆ–ನಿಲವುಗಳನ್ನು ರೂಪಿಸಿದವು. ಈ ಎಲ್ಲ ಪೂರ್ವಾರ್ಜಿತ ಆಸ್ತಿಯನ್ನು ತಮ್ಮದನ್ನಾಗಿ ಮಾಡಿಕೊಂಡು ಅದನ್ನು ಕನ್ನಡದ, ಕನ್ನಡಿಗರ ಆಸ್ತಿಯಾಗಿ ಪರಿವರ್ತನೆ ಮಾಡಿದರು—ತಮ್ಮ ಕಾವ್ಯ, ಕತೆ, ಕಾದಂಬರಿ, ವಿಮರ್ಶೆ, ಮುಂತಾದ ವೈವಿಧ್ಯಮಯ, ಉನ್ನತಮಟ್ಟದ ಕೃತಿ ರಾಶಿಯ ಮೂಲಕ. ಮೈಸೂರು ರಾಜ್ಯದ ನಿಷ್ಠಾವಂತ ಸೇವಕರಾಗಿ ರಾಜಸೇವಾಸಕ್ತ ಎಂಬ ಬಿರುದನ್ನು ಪಡೆದರೆ, ಸಾಹಿತ್ಯ ಸೇವೆಯ ನಿಮಿತ್ತ ಕರ್ನಾಟಕ ವಿಶ್ವವಿದ್ಯಾನಿಲಯ ಹಾಗು ಮೈಸೂರು ವಿಶ್ವವಿದ್ಯಾಲಯಗಳ ಡಾಕ್ಟೊರೇಟ್ ಪದವಿಗಳನ್ನು ಪಡೆದರು; ತಡವಾಗಿಯಾದರೂ ಸಣ್ಣಕತೆಗಳ ಸಂಕಲನ ಒಂದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ

ಪ್ರಶಸ್ತಿಯನ್ನೂ 'ಚಿಕವೀರರಾಜ' ಕಾದಂಬರಿಯ ನಿಮಿತ್ತ ಜ್ಞಾನಪೀಠ ಪ್ರಶಸ್ತಿಯನ್ನು ಪಡೆದುಕೊಂಡರು. ಈ ವಿಷಯದಲ್ಲಿ ಅವರು ಅಸಮಾಧಾನ ಪಡದಿದ್ದರೂ ಸೇವಾ ಹಿರಿತನ, ವಯಸ್ಸಿನ ಹಿರಿತನ, ಎರಡನ್ನೂ ಗಮನದಲ್ಲಿ ಇರಿಸಿಕೊಂಡು ಯಾವುದೇ ಪ್ರಶಸ್ತಿಯ ನೀಡಿಕೆಯನ್ನು ನಿಶ್ಚಯಿಸಬೇಕು ಎನ್ನುವುದು ಅವರ ನಿಲವಾಗಿತ್ತು,

ಸ್ವತಃ ಸಾಹಿತಿಯಾಗಿದ್ದುದಲ್ಲದೆ, ಅವರು ಸಾಹಿತಿಗಳಿಗೆ ನೀಡುತ್ತಿದ್ದ ಉತ್ತೇಜನ ಆಧುನಿಕ ಸಾಹಿತ್ಯ ಕ್ಷೇತ್ರದ ಶ್ರೇಷ್ಠರನ್ನು ಬೆಳಕಿಗೆ ತರಲು ಸಹಾಯವಾಯಿತು. ಕೆ. ವಿ. ಪುಟ್ಟಪ್ಪನವರ (ಈಗ ಕುವೆಂಪು) 'ಕೊಳಲು', ದ. ರಾ. ಬೇಂದ್ರೆ ಅವರ 'ಗರಿ', ರಾಜರತ್ನಂ ಅವರ 'ಚೀನಾ ದೇಶದ ಬೌದ್ಧ ಯಾತ್ರಿಕರು'—ಪ್ರಥಿತ ಯಶಸ್ಕರ ಈ ಪ್ರಥಮ ಮುಖ್ಯ ಕೃತಿಗಳಿಗೆ ಮಾಸ್ತಿ ಅವರು ಕೆಲವು ಆಪ್ತಮಿತ್ರರ ಸಹಕಾರ ಪಡೆದು ಧನಸಹಾಯ ಮಾಡಿದ್ದಾರೆ. ಧಾರವಾಡದ ಮಿತ್ರರು ನಿಲ್ಲಿಸಬೇಕಾಗಿ ಬಂದ 'ಜೀವನ'ವನ್ನು ಕೈಗೆತ್ತಿಕೊಂಡು, ಅದನ್ನು 25 ವರ್ಷ ಕಾಲ ಯಶಸ್ವಿಯಾಗಿ ನಡಸಿದ್ದಲ್ಲದೆ ಅದರ ಮೂಲಕ ಅನೇಕ ಅಂದಿನ ಉದಯೋನ್ಮುಖ ಲೇಖಕರನ್ನು ಬೆಳಕಿಗೆ ತಂದಿದ್ದಾರೆ; 'ಜೀವನ'ದ ಸಂಪಾದಕೀಯಗಳ ಮೂಲಕ ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯವಿಷಯಕ ವಿದ್ಯಮಾನಗಳನ್ನು ಕುರಿತು ನಿರ್ದಾಕ್ಷಿಣ್ಯವಾಗಿ, ಆದರೆ ಘನತೆ ಗಾಂಭೀರ್ಯಗಳನ್ನು ಕಾಪಾಡಿಕೊಂಡು, ತಮ್ಮ ಬೆಲೆಯುಳ್ಳ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇಂಥ ಉನ್ನತಮಟ್ಟದ 'ಜೀವನ' ಪತ್ರಿಕೆಯನ್ನು ಕೊನೆಯ ಘಟ್ಟದಲ್ಲಿ ತಮ್ಮ ಕೈಗೆ ತೆಗೆದುಕೊಂಡವರು ಮುಂದುವರಿಸಲಾಗದೆಹೋದದ್ದು, ಸಾಹಿತ್ಯದೃಷ್ಟಿಯ ಪತ್ರಿಕಾಕ್ಷೇತ್ರದ ದುರ್ದೈವ.

ಮಾಸ್ತಿಯವರು ತಮ್ಮ ಗುರುವರ್ಯ ಬಿ.ಎಂ.ಶ್ರೀ. ಹಾಕಿಕೊಟ್ಟ ಹೆದ್ದಾರಿಯಲ್ಲಿ ನಡೆದು, ಕೆಲವು ವಿಷಯಗಳಲ್ಲಿ ಅವರ ಆದರ್ಶವನ್ನು ಬಿಡದೆ ಅನುಸರಿಸಿದರು. ಅವರಂತೆಯೇ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷದಾರರು; ಆ ಕಾಲದಲ್ಲಿ, ಅವರಂತೆಯೇ ಸ್ವಂತವೆಚ್ಚದಿಂದ ಕರ್ನಾಟಕವನ್ನೆಲ್ಲ ಸಂಚರಿಸಿ, ಪರಿಷತ್ತಿನ ಸದಸ್ಯ ಸಂಪತ್ತನ್ನು ವೃದ್ಧಿಪಡಿಸಿ, ಕರ್ನಾಟಕ ಏಕೀಕರಣಕ್ಕಾಗಿ ದುಡಿದರು: ಬಿ.ಎಂ.ಶ್ರೀ. ಅವರು ತೀರಿಕೊಂಡಾಗ ಅವರಿಗಾಗಿ ಒಂದು ಸ್ಮಾರಕವನ್ನು ಏರ್ಪಡಿಸಬೇಕೆಂಬುದು ಅವರ ಸಂಕಲ್ಪವಾಗಿತ್ತು. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸ್ಥಾಪನೆ ಆದಾಗ ಅವರ ಸಂತೋಷಕ್ಕೆ ಪಾರವೇ ಇಲ್ಲ. ಸಂಸ್ಥೆಯ ಆಜೀವ ಪೋಷಕರಾಗಿರಲು ಸಂತೋಷದಿಂದ ಸಮ್ಮತಿಸಿದರು. ಒಂದು ಸಾವಿರ ರೂಪಾಯಿ ಕಾಣಿಕೆ ನೀಡಿದರು. ಬೆಳ್ಳೂರಿನಲ್ಲಿ ನಡೆದ ಶ್ರೀ ಶತಾಬ್ದಿ ಉತ್ಸವ ಸಮಾರಂಭದ ಅಧ್ಯಕ್ಷತೆ ವಹಿಸಿ, ಅನನ್ಯವಾದ ರೀತಿಯಲ್ಲಿ ಗುರುಭಕ್ತಿಯನ್ನು ವ್ಯಕ್ತಪಡಿಸಿದರು. ಮಾಸ್ತಿ ಅವರ ನಿಧನದಿಂದ ನಾಡು–ನುಡಿಗೆ ಅವರ ಇಲ್ಲಮೆ ದೊಡ್ಡ ನಷ್ಟವಾದರೂ ಚಿರಸಾಹಿತ್ಯದ ಆಸ್ತಿಯನ್ನು

ಬಿಟ್ಟುಹೋಗಿದ್ದಾರೆ. ಪ್ರತಿಷ್ಠಾನಕ್ಕೆ ಅವರ ಚಿರಸ್ಮರಣೆ ಕೂಡ ಆಸ್ತಿಯೇ. ಅದು ಪ್ರತಿಷ್ಠಾನದ ಕಾರ್ಯಕರ್ತರಿಗೆ ಸರ್ವದಾ ಸ್ಫೂರ್ತಿಯ ಸೆಲೆಯಾಗಿ ಉಳಿದಿರುತ್ತದೆ.

## ಕನ್ನಡ–ತಮಿಳು ವಿದ್ವಾಂಸ ಎಲ್. ಗುಂಡಪ್ಪನವರು

ಬಿ.ಎಂ.ಶ್ರೀ. ಅವರ ಶಿಷ್ಯವಾತ್ಸಲ್ಯದ ಪಕ್ವಫಲಗಳಲ್ಲಿ ಎಲ್. ಗುಂಡಪ್ಪನವರು ಒಬ್ಬರು. ಕನ್ನಡ, ಸಂಸ್ಕೃತ, ಇಂಗ್ಲಿಷು, ತಮಿಳು ಭಾಷೆಗಳಲ್ಲಿ ನಿರ್ದುಷ್ಟ ಪಾಂಡಿತ್ಯ ಪಡೆದಿದ್ದ ಇವರು ತಮ್ಮ ಗುರುಗಳಾದ ಬಿ.ಎಂ.ಶ್ರೀ. ಅವರ ಇಚ್ಛೆಯಂತೆ ಕನ್ನಡ ಎಂ.ಎ. ಪರೀಕ್ಷೆಗೆ ತಮಿಳನ್ನು ಐಚ್ಛಿಕ ಭಾಷೆಯಾಗಿ ವ್ಯಾಸಂಗ ಮಾಡಿ, ದಿವಂಗತ ಪಿ. ಎಂ. ಸೋಮಸುಂದರಂ (ಮೈಸೂರು ಸರ್ಕಾರದ ವಿದ್ಯಾಧಿಕಾರಿಗಳು) ಅವರ ಮಾರ್ಗದರ್ಶನದಲ್ಲಿ ತಮಿಳು ಭಾಷೆಯಲ್ಲಿ ಹೆಚ್ಚಿನ ಪಾಂಡಿತ್ಯವನ್ನು ಪಡೆದು, ಸ್ವಂತ ವ್ಯಾಸಂಗದಿಂದ ಅದನ್ನು ಅಭಿವೃದ್ಧಿಪಡಿಸಿಕೊಂಡು ಕುಱಳ್, ಮಣಿಮೇಖಲೈ, ಶಿಲಪ್ಪದಿಗಾರಂ, ಮುಂತಾದ ಪ್ರಾಚೀನ ತಮಿಳು ಕೃತಿಗಳನ್ನು ಮೂಲದಲ್ಲಿಯೇ ಓದಿ, ಕುರಳಿನ 300 ಪದ್ಯಗಳನ್ನು ಮೂಲಕ್ಕೆ ಬಹಳ ಸಮೀಪವರ್ತಿಯಾಗಿ ಭಾಷಾಂತರ ಮಾಡಿದ್ದರು. ನಾಲ್ಮಣಿಕಡುಕು, ಕನ್ನಗಿಯ ಕತೆ–ಇವು ತಮಿಳಿನಿಂದ ಅವರು ಅನುವಾದಿಸಿದ ಇತರ ಕೃತಿಗಳು.

ಬಿ.ಎಂ.ಶ್ರೀ. ಅವರ ಇಂಗ್ಲಿಷ್ ಗೀತಗಳಿಂದ ಸ್ಫೂರ್ತಿಪಡೆದ ಇವರು ಒಬ್ಬ ತರುಣಕವಿಯಾಗಿ ಗುರುಗಳಾದ ವೆಂಕಣ್ಣಯ್ಯನವರ ಗಮನ ಸೆಳೆದರು. ವೆಂಕಣ್ಣಯ್ಯನವರು ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘದ ಮೂಲಕ ತಮ್ಮ ವಿದ್ಯಾರ್ಥಿಗಳು ರಚಿಸಿ ಮೆಚ್ಚುಗೆ ಪಡೆದ ಕವನಗಳ ಎರಡು ಕವನ ಸಂಕಲನಗಳನ್ನು—'ಕಿರಿಯ ಕಾಣಿಕೆ' ಮತ್ತು 'ತಳಿರು'—ಪ್ರಕಟಿಸಿದರು. ತಳಿರು ಸಂಕಲನದಲ್ಲಿ ಮೊತ್ತಮೊದಲಿಗೆ ಬೆಳಕು ಕಂಡ ಗುಂಡಪ್ಪನವರ 'ಚಟಾಕಿ' ಅನಂತರ ಬಿ.ಎಂ.ಶ್ರೀ. ಅವರೇ ಪ್ರಧಾನ ಸಂಪಾದಕರಾಗಿ ವಿದ್ಯಾ ಇಲಾಖೆಗೆ ಸಿದ್ಧಪಡಿಸಿಕೊಟ್ಟ ಕ್ರಮಿಕ ಪಠ್ಯಪುಸ್ತಕದಲ್ಲಿ ಸೇರ್ಪಡೆಯಾಗಿ, "ಅಪ್ಪನ ಜೇಬಿನ ದುಡ್ಡುಗಳೆಲ್ಲ ಚಟಪಟಗುಟ್ಟುತ ಸಿಡಿಯುವುವು। ಒಪ್ಪದ ನೀತಿಯ ಮಾತುಗಳೆಲ್ಲ ತಟ್ಟನೆ ದಾರಿಯ ಹಿಡಿಯುವುವು" ಎಂದು ಮೊದಲಾಗುವ ಪದ್ಯಪಂಕ್ತಿಗಳು ಮೈಸೂರು ಮಕ್ಕಳ ನಾಲಗೆಯ ಮೇಲೆ ಕುಣಿದುವು. ಚಟಾಕಿ ಬಹುಕಾಲ ನಾಡಿನಲ್ಲೆಲ್ಲ ಚಟಪಟಗುಟ್ಟಿತು. ಅನಂತರ ಗುಂಡಪ್ಪನವರ ಕವಿತಾ ಸಾಮರ್ಥ್ಯ ಬೆಳಕಿಗೆ ಬಂದದ್ದು, ಮ್ಯಾಥ್ಯೂ ಅರ್ನಲ್ಡನ 'ಸೊಹ್ರಾಬ್ ಮತ್ತು ರುಸ್ತುಮ್' ಕಥನ ಕವನದ ಅನುವಾದದ ಮೂಲಕ; ಈ ಕವನ ಅವರಿಗೆ ಬಿ.ಎಂ.ಶ್ರೀ. ಅವರ 'ರಜತಮಹೋತ್ಸವ' ಸ್ವರ್ಣಪದಕವನ್ನು ಗಳಿಸಿಕೊಟ್ಟಿತು. ಒಂದು ಸಂಕಲನಕ್ಕಾಗುವಷ್ಟು ಕವನಗಳನ್ನು ಬರೆದು ಗಮನಾರ್ಹವಾದ ಕವಿ ಆಗಿದ್ದರೂ ಗುಂಡಪ್ಪನವರು ಒಬ್ಬ ಕವಿ ಎನಿಸಿ ಪ್ರಸಿದ್ಧಿಗೆ

ಬರಲಿಲ್ಲ. ಗುಂಡಪ್ಪನವರ ಹಳಗನ್ನಡ – ತಮಿಳು ಭಾಷಾ ಪಾಂಡಿತ್ಯ, ಕವಿತಾ ಸಾಮರ್ಥ್ಯ ಇವು ಪ್ರಾಚೀನ ತಮಿಳು ಗದ್ಯಪದ್ಯಕಾವ್ಯಗಳು ಹಲವಾರನ್ನು ಸಮರ್ಥವಾಗಿ ಅನುವಾದಿಸಲು ಅವರಿಗೆ ನೆರವಾದವು. ಇವರ ಅನುವಾದಿತ ತಮಿಳು ಪದ್ಯಕಾವ್ಯಗಳ ಪೈಕಿ, (ಈ ಹಿಂದೆ ಹೇಳಿದವಲ್ಲದೆ) ಅವ್ವೈಯಾರ್ ಕೃತಿಗಳು. ಉಲಗನೀತಿ, ಭಾರತಿಯವರ ಕವಿತೆಗಳು—ಇವನ್ನು ಹೆಸರಿಸಹಬುದು. ಶೇಕ್ಕಿರಾರ್ ಅವರ ಅರುವತ್ತುಮೂವರು ಪುರಾತನರ ಚರಿತ್ರೆಯನ್ನು ಒಳಗೊಂಡ 'ಪೆರಿಯ ಪುರಾಣ'ವನ್ನೂ ರಾಜಾಜಿಯವರ ತಮಿಳು ಭಾರತವನ್ನೂ ಇವರು ಕನ್ನಡಕ್ಕೆ ತಂದಿದ್ದಾರೆ. ಇಂಗ್ಲಿಷಿನಿಂದ ಟಾಲ್‌ಸ್ಟಾಯ್ ಅವರ ಕತೆಗಳನ್ನೂ 'ಕುಟುಂಬ ಸೌಖ್ಯ' ಎಂಬ ಕಾದಂಬರಿಯನ್ನೂ ಅನುವಾದ ಮಾಡಿದ್ದಾರೆ.

1933ರಿಂದ 5 ವರ್ಷಕಾಲ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟು ನಿರ್ಮಾಣ ಕಾಲದಲ್ಲಿ ದಿ॥ ಕ. ವೆಂ. ರಾಘವಾಚಾರ್, ಎಂ. ವಿ. ಸೀತಾರಾಮಯ್ಯ ಇವರ ಸಹೋದ್ಯೋಗಿ ಆಗಿ, ಸಹಾಯಕ ಸಂಪಾದಕರಾಗಿ ಕೆಲಸ ಮಾಡಿ, 1953ರಿಂದ ನಿವೃತ್ತಿ ಹೊಂದುವವರೆಗೆ ಹಾಸನ ಮತ್ತು ಬೆಂಗಳೂರು ಇಂಟರ್‌ಮೀಡಿಯಟ್ ಕಾಲೇಜುಗಳಲ್ಲಿ ಗೌರವಾನ್ವಿತ ಅಧ್ಯಾಪಕರಾಗಿ ಕೆಲಸ ಮಾಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುವಿನ ಸಂಪಾದಕರಾಗಿಯೂ ಕೆಲವು ವರ್ಷ ದುಡಿದಿದ್ದಾರೆ.

ಇವರ ತಮಿಳು ಪಾಂಡಿತ್ಯವನ್ನು ಮೆಚ್ಚಿ ತಮಿಳು ಸಂಘ ಇವರನ್ನು ಸನ್ಮಾನ ಮಾಡಿದೆ. 1975ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಇವರಿಗೆ ಸಂದಿದೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಇವರನ್ನು ಗೌರವಸದಸ್ಯರನ್ನಾಗಿ ಪರಿಗಣಿಸಿ ಗೌರವಿಸಿದ್ದಿತು.

ಗಾಂಧಿವಾದಿಯೂ ಖಾದಿಧಾರಿಯೂ ಆಗಿದ್ದ ಗುಂಡಪ್ಪನವರ ಸ್ಫಟಿಕ ಶುಭ್ರ ವ್ಯಕ್ತಿತ್ವ ಕಣ್ಮರೆಯಾಗಿ, ಪಾಂಡಿತ್ಯ ಪ್ರಪಂಚಕ್ಕೆ ಅಪಾರ ನಷ್ಟವುಂಟಾಗಿದೆ.

## ಡಾ॥ ಎನ್. ಅನಂತರಂಗಾಚಾರ್

ಬಿ. ಎಂ. ಶ್ರೀ. ಅವರ ಮೊಮ್ಮೊದಲಿನ ಶಿಷ್ಯರಲ್ಲಿ ಒಬ್ಬರೂ. ಉತ್ತಮ ಕನ್ನಡ ಪ್ರಾಧ್ಯಾಪಕರೂ, ಗಣ್ಯ ಗ್ರಂಥಸಂಪಾದಕರೂ ಆಗಿದ್ದ ಡಾ॥ ಎನ್. ಅನಂತರಂಗಾಚಾರ್ ಅವರು ಈಚೆಗೆ ನಿಧನರಾದದ್ದು (ಜನನ : 23–5–1906 : ನಿಧನ: 7–8–1986) ವಿದ್ವತ್‌ಪ್ರಪಂಚಕ್ಕೆ ಅಪಾರವಾದ ನಷ್ಟ. ಇಂಗ್ಲಿಷ್, ಸಂಸ್ಕೃತ, ಕನ್ನಡ, ತಮಿಳು, ಮುಂತಾಗಿ ಹಲವು ಭಾಷೆಗಳ ಉದ್ದಾಮ ಪಂಡಿತರು ಅವರು. ಧರ್ಮಶ್ರದ್ಧೆ ಉಳ್ಳವರು, ದೈವಭಕ್ತರು, ಆಚಾರಶೀಲರು ಆಗಿದ್ದರೂ ಆಧುನಿಕ ದೃಷ್ಟಿಯುಳ್ಳವರಾಗಿದ್ದರು. ಓರಿಯಂಟಲ್ ಲೈಬ್ರರಿಯಲ್ಲಿ

ಪಂಡಿತರಾಗಿ ಸೇರಿ ಸೇವೆ ಮಾಡುತ್ತಿದ್ದ ಕಾಲದಲ್ಲಿ ನಾಡಿನ ಮೂಲೆಮೂಲೆಗಳನ್ನು ಸಂಚರಿಸಿ ಓಲೆಗರಿಯ ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಆಗ ಅವರು ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ', 'ಕುಮಾರವ್ಯಾಸ ಭಾರತ', ಮುಂತಾದ ಕೃತಿಗಳನ್ನು ಸಂಪಾದನೆ ಮಾಡಿದರು. ಅನಂತರ ಮೈಸೂರು ಮಹಾರಾಜರವರ ಕಾಲೇಜು, ಮಹಾರಾಣಿ ಅವರ ಕಾಲೇಜುಗಳಲ್ಲಿ ಉಪಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ವಿದ್ಯಾರ್ಥಿದೆಸೆಯಲ್ಲಿ ಗುರುವರ್ಗಕ್ಕೆ ಅಚ್ಚುಮೆಚ್ಚಿನ ಶಿಷ್ಯರಾಗಿದ್ದು, ಕನ್ನಡ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತ ಮುಂದಾಳು ಆಗಿದ್ದರು. ಗರಡಿ ಸಾಧನೆ ಮಾಡಿ ಶರೀರದಾರ್ಢ್ಯವನ್ನು ಹೊಂದಿದ್ದ ಇವರು ಇಳಿವಯಸ್ಸಿನಲ್ಲಿ ಮಧುಮೂತ್ರರೋಗಕ್ಕೆ ಪಕ್ಕಾಗಿ, ಒಂದು ಕಾಲನ್ನು ಕಳೆದುಕೊಂಡಿದ್ದರೂ ಅದಮ್ಯ ಚೇತನರಾಗಿ ಅವಿಶ್ರಾಂತ ಸಂಶೋಧನೆ, ಬರವಣಿಗೆ ಕಾರ್ಯಗಳಲ್ಲಿ ಬದುಕನ್ನು ಸವೆಸುತ್ತ ಸಾರ್ಥಕಮಾಡಿಕೊಂಡಿದ್ದರು. ಇದಕ್ಕೂ ಮುನ್ನ, 1970ರ ಸುಮಾರಿನಲ್ಲಿ, ಇವರು ರಚಿಸಿದ **ಭಾರತ ಭಾರತಿ** ಎಂಬ ಮೌಲಿಕ ಆಕರಗ್ರಂಥ ಇವರಿಗೆ ಮೈಸೂರು ವಿಶ್ವವಿದ್ಯಾನಿಲಯದ ಡಿ. ಲಿಟ್ ಪದವಿಯನ್ನು ಗಳಿಸಿಕೊಟ್ಟಿತು. ಇದರ ಚಂಪೂ ಕಾವ್ಯ ಪದ್ಯಗಳ ಅಕಾರಾದಿ ಸೂಚಿ ಸಾಹಿತ್ಯ ವಿದ್ಯಾರ್ಥಿಗಳಿಗೆ ಅಮೂಲ್ಯ ಆಕರ ಗ್ರಂಥ. ಈಚೆಗೆ ಪ್ರಕಟವಾದ ಇವರ 'ಭಾರತೀಯ ತೀರ್ಥಕಲಾಕ್ಷೇತ್ರ ಸಂದರ್ಶಿನೀ' (1984) ಹಾಗು 'ಭಾರತಭಾರತಿ' (1970) ಆಚಾರ್ಯರ ರಾಷ್ಟ್ರಪ್ರೇಮಕ್ಕೆ ಸಾಕ್ಷಿಗಳು. ಆದರೆ ಅದಕ್ಕೆ ಆಧಾರಭೂತವಾದದ್ದು ಅವರ ಉಜ್ವಲ ಸಾತ್ವಿಕ ಕನ್ನಡ ದೊಲವು. 1975ನೇ ವರ್ಷದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಆಚಾರ್ಯರಿಗೆ ಸಂದಿತ್ತು.

ಪ್ರತಿಷ್ಠಾನದ ಮೇಲೆ ಅವರ ಮಮತೆ ಅಪಾರ. ಗುರುದಕ್ಷಿಣೆ ಎಂದು ತಮ್ಮಲ್ಲಿದ್ದ ಅನೇಕ ಅಮೂಲ್ಯ ಮುದ್ರಿತ ಗ್ರಂಥಗಳನ್ನೂ ಪ್ರಬುದ್ಧ ಕರ್ನಾಟಕ, ಕನ್ನಡ ನುಡಿ, ಪ್ರಬೋಧಕ, ಮುಂತಾದ ಕನ್ನಡ ಪತ್ರಿಕೆಗಳ ಬಿಡಿಸಂಚಿಕೆಗಳನ್ನೂ ಸಂಸ್ಥೆಯ ಗ್ರಂಥಾಲಯಕ್ಕೆ ದಾನಮಾಡಿದ್ದರು. ಪ್ರತಿಷ್ಠಾನ ಅವರ ಈ ಕಾಣಿಕೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತದೆ.

## ಮಹಾಕಾವ್ಯ ಕವಯಿತ್ರೀ ಜಯದೇವಿ ತಾಯಿ ಲಿಗಾಡೆ

ಖ್ಯಾತ ಕವಯಿತ್ರಿ ಜಯದೇವಿತಾಯಿ ಲಿಗಾಡೆ ಅವರು ತಮ್ಮ ಬೀದರ ಜಿಲ್ಲೆಯ ಬಸವಕಲ್ಯಾಣದಲ್ಲಿ ಜುಲೈ 25ರಂದು, ತಮ್ಮ 74ನೆಯ ವಯಸ್ಸಿನಲ್ಲಿ ಲಿಂಗೈಕ್ಯರಾದರು. ಮಹಾರಾಷ್ಟ್ರ ರಾಜ್ಯದಲ್ಲಿದ್ದ ಅಚ್ಚಕನ್ನಡದ ಕೇಂದ್ರವಾದ ಸೋಲಾಪುರದ ನಿವಾಸಿಯಾದ ಜಯದೇವಿ ತಾಯಿ ತಮ್ಮ ಬದುಕನ್ನು ಗಡಿನಾಡಿನಲ್ಲಿ ಕನ್ನಡದ ಹಿತರಕ್ಷಣೆಗೆ ಮೀಸಲಾಗಿಟ್ಟಿದ್ದರು. ಅವರ ಮಹಾಕಾವ್ಯ 'ಸಿದ್ಧರಾಮೇಶ್ವರ ಪುರಾಣ'ಕ್ಕೆ 1968ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿತು.

ಸೋಲಾಪುರದಲ್ಲಿ 1950ರಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಲು ಕಾರಣಕರ್ತರಾಗಿದ್ದರು ಅವರು. 1974ರಲ್ಲಿ ಮಂಡ್ಯದಲ್ಲಿ ನಡೆದ ಸಮ್ಮೇಳನದ ಅಧ್ಯಕ್ಷೆಯಾಗಿ ಆಯ್ಕೆ ಆಗಿದ್ದರು. ಸಿದ್ಧರಾಮೇಶ್ವರ ಪುರಾಣ ಅಲ್ಲದೆ, ಕನ್ನಡ, ಮರಾಠಿ ಮತ್ತು ಹಿಂದಿ ಭಾಷೆಗಳಲ್ಲಿ ಸುಮಾರು 20 ಕೃತಿಗಳನ್ನು ಜಯದೇವಿತಾಯಿ ರಚಿಸಿದ್ದಾರೆ. 'ಶೂನ್ಯಸಂಪಾದನೆ'ಯನ್ನು ಮರಾಠಿಯಲ್ಲಿ ರಚಿಸಿದ್ದಾರೆ; ಇದು ಮಹಾರಾಷ್ಟ್ರ ಸರ್ಕಾರದಿಂದ ಪ್ರಕಟವಾಗಲಿದೆ. ಕರ್ಮಯೋಗಿ ಸೊನ್ನಲಿಗೆ ಸಿದ್ಧ ರಾಮನ ಪ್ರಭಾವಕ್ಕೆ ಒಳಗಾಗಿದ್ದ ಅವರು ಕರ್ಮಯೋಗಿಯಾಗಿಯೇ ಇದ್ದರು.

**ಬ. ನ. ಸುಂದರರಾವ್ :** ಈಚೆಗೆ ಬ, ನ. ಸುಂದರರಾವ್ ಅವರ ನಿಧನ ದಿಂದ ಒಬ್ಬ ನಿಷ್ಠಾವಂಥ ಲೇಖಕರನ್ನು ಕನ್ನಡ ಕಳೆದುಕೊಂಡಂತಾಗಿದೆ. ಅವರು ಮಕ್ಕಳಿಗಾಗಿ ಅನೇಕ ಪದ್ಯ ಪುಸ್ತಕಗಳನ್ನು ರಚಿಸಿದ್ದಾರೆ. ಇತ್ತೀಚಿಗೆ ತಾನೆ ಅವರು ರಚಿಸಿ ಪ್ರಕಟಿಸಿದ್ದ 'ಬೆಂಗಳೂರಿನ ಇತಿಹಾಸ' ಎಂಬ ಹೆಬ್ಬೊತ್ತಗೆ ಇತಿಹಾಸಾಸಕ್ತರ ಗಮನವನ್ನು ಸೆಳೆದಿತ್ತು. ಪ್ರತಿಷ್ಠಾನದ ಸ್ಥಾಪಕ ಸದಸ್ಯರುಗಳಲ್ಲಿ ಒಬ್ಬರಾಗಿದ್ದ ಇವರು ಪ್ರತಿಷ್ಠಾನದ ಆರಂಭಕಾಲದಲ್ಲಿ ಅದರ ಬೆಳವಣಿಗೆಗೆ ತುಂಬ ಒತ್ತಾಸೆ ನೀಡು ತ್ತಿದ್ದರು.

**ಕೆ. ಟಿ. ರಾಮಸ್ವಾಮಿ ಅಯ್ಯಂಗಾರ್ :** ಗಮಕಿ, ಗಾಯಕ ಹಾಗೂ ಸಾಹಿತಿ ಕೆ. ಟಿ. ರಾಮಸ್ವಾಮಿ ಅಯ್ಯಂಗಾರ್ (81) ಅವರು ಫೆಬ್ರುವರಿ 19ರಂದು ಮೈಸೂರಿನಲ್ಲಿ ನಿಧನರಾದರು. ದಿವಂಗತರಿಗೆ 1979ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗಮಕ ಹಾಗೂ ಸಾಹಿತ್ಯದ ಗೌರವ ಪ್ರಶಸ್ತಿ ದೊರೆತಿತ್ತು. ವಿದ್ಯಾ ಇಲಾಖೆಯಲ್ಲಿ ಸೇವೆ ಸಲ್ಲಿಸಿದ್ದ ಅವರು ಗಮಕ, ಸಾಹಿತ್ಯ ಶಿಕ್ಷಣ ಕುರಿತು ಹಲವಾರು ಪುಸ್ತಕಗಳನ್ನು ಬರೆದಿದ್ದಾರೆ.

**ಶೇಷಗಿರಿರಾವ್ ಕುಲಕರ್ಣಿ :** ಕನ್ನಡ ಲೇಖಕ ಮತ್ತು ಪತ್ರಕರ್ತ ಶೇಷಗಿರಿ ರಾವ್ ಕುಲಕರ್ಣಿ (67) ಅವರು ಫೆಬ್ರುವರಿ 22ರಂದು ಹೃದಯಾಘಾತದಿಂದ ಹುಬ್ಬಳ್ಳಿಯಲ್ಲಿ ನಿಧನರಾದರು. ತಮ್ಮ ಸಾಹಿತಿ ಪತ್ನಿ ಗೀತಾ ಕುಲಕರ್ಣಿ, ಮೂವರು ಪುತ್ರಿಯರು ಹಾಗೂ ಒಬ್ಬ ಪುತ್ರರನ್ನು ಅವರು ಅಗಲಿದ್ದಾರೆ. ಹಲವಾರು ಸ್ವತಂತ್ರ ಸಾಹಿತ್ಯ ಕೃತಿಗಳನ್ನು ರಚಿಸಿದ್ದ ಕುಲಕರ್ಣಿ ಅವರು ದಿವಂಗತ ವರಕವಿ ದ. ರಾ. ಬೇಂದ್ರೆ ಅವರ ಆಪ್ತ ಸಂಗಾತಿಗಳಲ್ಲೊಬ್ಬರಾಗಿದ್ದರು.

**ವಿ. ಎಸ್. ಕೌಶಿಕ್ :** ನಗರದ ಜಯನಗರದಲ್ಲಿನ "ಸನಾತನ ಕಲಾಕ್ಷೇತ್ರ"ದ ಸಂಸ್ಥಾಪಕ ಹಾಗೂ ನಾಟ್ಯಾಚಾರ್ಯ ವಿ. ಎಸ್. ಕೌಶಿಕ್ (62) ಅವರು ಫೆಬ್ರುವರಿ 27ರಂದು ಹೃದಯಾಘಾತದಿಂದ ಇಲ್ಲಿ ನಿಧನರಾದರು. ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿ ವಿಜೇತರಾಗಿದ್ದ ಅವರ ಸಂಶೋಧನಾ ಗ್ರಂಥ "ಭರತನಾಟ್ಯ ದಿಗ್ದರ್ಶನ"ಕ್ಕೆ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ದೊರೆತಿತ್ತು.

**ಜಯತೀರ್ಥ ರಾಜಪುರೋಹಿತ :** ನಮ್ಮ ನಾಡಿನ ದಕ್ಷ ಉನ್ನತ ಅಧಿಕಾರಿಗಳೂ, ಪ್ರಸಿದ್ಧ ಲೇಖಕರೂ, ಉತ್ತಮ ವಾಗ್ಮಿಗಳೂ ಆಗಿದ್ದ ಜಯತೀರ್ಥ ರಾಜಪುರೋಹಿತರು 26–4–1986ರಂದು ವಿಧಿವಶರಾದರು. ಸುಳಿಗಾಳಿ, ಹಾಲು ಜೇನು, ತುಂಗೆಯಂಗಳದಲ್ಲಿ, ರಾಮತೀರ್ಥ, ಜಗನ್ನಾಥದಾಸರು, ಪಾರವ್ವನ ಪಂಚಾಯಿತಿ, ಶಿಥಿಲಶಿಲೆ. ಆಡಳಿತದಲ್ಲಿ ಕನ್ನಡ ಮೊದಲಾದ ಇಪ್ಪತ್ತಕ್ಕೂ ಹೆಚ್ಚು ಕೃತಿರಚನೆ ಮಾಡಿದ್ದಾರೆ. ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಅವರಿಗೆ ಸಂದಿತ್ತು. ಕನ್ನಡವು ಆಡಳಿತ ಭಾಷೆಯಾಗಲು ಹಲವು ವಿಧದಲ್ಲಿ ಶ್ರಮಿಸಿದ್ದರು. ಮೊಟ್ಟಮೊದಲಿಗೆ ಕನ್ನಡದಲ್ಲೇ ತೀರ್ಪು ಕೊಟ್ಟ ಶ್ರೇಯಸ್ಸು ಅವರದು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ, ಗುಲ್ಬರ್ಗ ವಿಶ್ವವಿದ್ಯಾಲಯದ ಕುಲಸಚಿವರಾಗಿ ಅವರು ನಾಡಿಗೆ ಸಲ್ಲಿಸಿದ ಸೇವೆ ಸ್ಮರಣಾರ್ಹ.

**ಡಾ॥ ಎಂ. ಬಿ. ಕೊಟ್ರಶೆಟ್ಟಿ :** ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರೂ, ಕನ್ನಡ ಪ್ರಾಧ್ಯಾಪಕರೂ ಆಗಿದ್ದ ಡಾ॥ ಎಂ. ಬಿ. ಕೊಟ್ರಶೆಟ್ಟಿ ಅವರು 27–4–1986ರಂದು ಧಾರವಾಡದಲ್ಲಿ ನಿಧನರಾದರು. ಜನಪ್ರಿಯ ಕನ್ನಡ ಬೋಧಕರೂ, ಜಾನಪದ ತಜ್ಞರೂ, ಸಂಶೋಧಕರೂ ಆಗಿದ್ದ ಕೊಟ್ರಶೆಟ್ಟರ ಅಕಾಲಿಕ ಸಾವು ತುಂಬಲಾರದ ನಷ್ಟ. ಅವರ ಮಹಾಪ್ರಬಂಧ 'ಸಿದ್ಧರಾಮ ಶಿವಯೋಗಿ' ಮತ್ತು 'ಮಂಥನ', ಹೊಸಮುಖ ಮೊದಲಾದ ಕೃತಿಗಳು ಅವರ ವಿದ್ವತ್ತಿಗೆ ಸಾಕ್ಷಿಯಾಗಿವೆ.

**ಶ್ರೀಮತಿ ಗೀತಾ ಕುಲಕರ್ಣಿ :** ಕನ್ನಡದ ಜನಪ್ರಿಯ ಲೇಖಕಿ ಶ್ರೀಮತಿ ಗೀತಾ ಕುಲಕರ್ಣಿ ಅವರು 25–5–86ರಂದು ಧಾರವಾಡದಲ್ಲಿ ನಿಧನರಾದರು. ಶ್ರೀಮತಿಯವರು ಕಾದಂಬರಿ, ಸಣ್ಣ ಕತೆ, ಶಿಶು ಸಾಹಿತ್ಯ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಅವರ 'ಕಂಬನಿ ಒರಸಿದ ಕೈ', 'ದೀಪ ಮಿಂಚಿತು', 'ಏಳು ಕನ್ನೆಯರು', 'ಹೂವಿನ ಮಳೆ', 'ತೇಲಿಹೋದ ಮೋಡ'—ಪ್ರಸಿದ್ಧವಾಗಿವೆ. ಅವರು 1979ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದ್ದರು. ರಾಜ್ಯ ಸಾಹಿತ್ಯ ಅಕಾಡೆಮಿ ಸದಸ್ಯರಾಗಿ, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ಶ್ರೀಮತಿಯವರು ತಮ್ಮ ಬಿಚ್ಚುಮನಸ್ಸಿನ ಸ್ವತಂತ್ರ ವಿಚಾರಧಾರೆಯಿಂದ, ದಿಟ್ಟತನದಿಂದ ಸಾಹಿತ್ಯಲೋಕದಲ್ಲಿ ವಿಶಿಷ್ಟ ಸ್ಥಾನ ಗಳಿಸಿಕೊಂಡಿದ್ದರು.

**ಶ್ರೀಮತಿ ಗೀತಾ ದೇಸಾಯಿ :** ಇನ್ನೊಬ್ಬ ಜನಪ್ರಿಯ ಲೇಖಕಿಯೂ, 'ಕರ್ನಾಟಕ ಲೇಖಕಿಯರ ಸಂಘದ ಕಾರ್ಯದರ್ಶಿಯೂ ಆಗಿದ್ದ ಶ್ರೀಮತಿ ಗೀತಾ ದೇಸಾಯಿ ಅವರು ಈಚೆಗೆ ನಿಧನರಾದರು.

ಈ ಎಲ್ಲರ ಅಗಲಿಕೆಗಾಗಿ ಪ್ರತಿಷ್ಠಾನದ ಪರವಾಗಿ 'ಲೋಚನ' ತನ್ನ ಸಂತಾಪ ವ್ಯಕ್ತಪಡಿಸುತ್ತದೆ ಹಾಗೂ ಅವರ ಆತ್ಮಕ್ಕೆ ಚಿರಶಾಂತಿ ಸಿಗಲೆಂದು ಹಾರೈಸಿ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

## ಶ್ರೀಮತಿ ಸೋಫಿಯಾ ವಾಡಿಯಾ

ಶ್ರೀಮತಿ ಸೋಫಿಯಾ ವಾಡಿಯಾ ಅವರು 85 ವರ್ಷ ತುಂಬು ಬಾಳನ್ನು ಬದುಕಿ ಈ ವರ್ಷ ಏಪ್ರಿಲ್ 27ರಂದು ನಿಧನರಾದರು. ಅವರಿಗೂ ಸಾಹಿತ್ಯ ಪ್ರಪಂಚಕ್ಕೂ ಬೆಳೆದುಬಂದ ನಿಡುಗಾಲದ ಅನುಬಂಧವನ್ನು ನೂರಾರು ಮಂದಿ ಭಾರತೀಯ ಲೇಖಕರು ನೆನೆಯುತ್ತಿರುವುದರಲ್ಲಿ ಸಂದೇಹವಿಲ್ಲ. ಆಕೆ ಅಖಿಲ ಭಾರತೀಯ ಪಿ.ಇ.ಎನ್. ಕೇಂದ್ರವನ್ನೂ ಮತ್ತು ಅದರ ಮುಖಪತ್ರಿಕೆ The Indian P.E.N. (ದಿ ಇಂಡಿಯನ್ ಪಿ.ಇ.ಎನ್.) ಅನ್ನೂ 1934ರಲ್ಲಿ ಸ್ಥಾಪಿಸಿದರು. ಅಲ್ಲದೆ, ಬೆಂಗಳೂರಿನಲ್ಲಿ ಭಾರತೀಯ ವಿಶ್ವ ಸಂಸ್ಕೃತಿ ಸಂಸ್ಥೆಯನ್ನೂ ಮುಂಬಯಿಯಲ್ಲಿ ಏಷ್ಯಾ ಪುಸ್ತಕ ವಿಶ್ವಸ್ಥ ಸಂಸ್ಥೆಯನ್ನೂ (Asian Book Trust) ತಮ್ಮ ಪತಿ ಶ್ರೀ ಬಿ. ಪಿ. ವಾಡಿಯಾ ಅವರ ಜೊತೆಗೂಡಿ ಸ್ಥಾಪಿಸಿದ್ದರು. ಹನ್ನೊಂದು ಅಖಿಲ ಭಾರತೀಯ ಲೇಖಕ ಸಮ್ಮೇಳನಗಳ ವ್ಯವಸ್ಥಾಪಿಕೆಯಾಗಿ ಆಕೆ ಉಳಿಸಿದ ಅಚ್ಚಳಿಯದ ನೆನಪನ್ನು ಯಾರೂ ಅಲ್ಲಗಳೆಯುವಂತಿರಲಿಲ್ಲ. ಯಾವುದೇ ಸಮಾರಂಭದ ಹೃದಯಕೇಂದ್ರವಾಗಿದ್ದವರು ಆಕೆ. ಖ್ಯಾತ ಗುಜರಾತಿ ಸಾಹಿತಿ ಶ್ರೀ ಗುಲಾಬ್ ದಾಸ್ ಬ್ರೋಕರ್ ಅವರು, "ನಮ್ಮ ನಾಡಿನ ಮಹಾನ್ ವ್ಯಕ್ತಿಗಳ ಸಂಗಾತ ಅವರಿಗೆ ಅತ್ಯಂತ ಅಚ್ಚುಮೆಚ್ಚಾಗಿದ್ದರು, ಅತ್ಯಂತ ಸಾಮಾನ್ಯ ಜನರೊಡನೆ ಸಲಿಗೆಯಿಂದ ಆಕೆ ಓಡಾಡಿಕೊಂಡಿದ್ದರು. ಆಕೆಯ ಆಕರ್ಷಕ ವ್ಯಕ್ತಿತ್ವದಲ್ಲಿ ಗರ್ವವಾಗಲಿ, ಸ್ವಾರ್ಥಸಾಧನೆಯ ದುರುದ್ದೇಶವಾಗಲಿ ಇರಲಿಲ್ಲ. ಆದ್ದರಿಂದ ಆಕೆ ಹೂಡಿದ ಕಾರ್ಯಯೋಜನೆಗಳಲ್ಲಿ ಎಲ್ಲರೂ ಉತ್ಸಾಹದಿಂದ ಸಹಕರಿಸುತ್ತಿದ್ದರು" ಎಂದಿದ್ದಾರೆ.

ಸಂಸ್ಥೆಯ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಹಠೋಟಿ ತಪ್ಪಿದರು ಎಂದು ಅವರನ್ನು ದೂರುವಂತೆಯೇ ಇರಲಿಲ್ಲ. ಆಕೆ ತೆರೆದ ಮನಸ್ಸಿನಿಂದ ಮಾತಾಡುವ ಖಂಡಿತವಾದಿಯಾಗಿದ್ದರೂ ಇತರರ ಅಭಿಪ್ರಾಯಗಳನ್ನು ಸಹಾನುಭೂತಿಯಿಂದ ಆಲಿಸುತ್ತಿದ್ದರು; ಸುಮುಖವಾಗಿ ಚರ್ಚಿಸುತ್ತಿದ್ದರು: ತಮಗೆ ಒಪ್ಪಿತವಾಗದ ಬಹುಮತದ ತೀರ್ಮಾನಗಳನ್ನು ಸದ್ಭಾವನೆಯಿಂದ ಸ್ವೀಕರಿಸುತ್ತಿದ್ದರು. "ಆದ್ದರಿಂದಲೇ ಆಲ್ ಇಂಡಿಯಾ ಪಿ.ಇ.ಎನ್. ಕೇಂದ್ರದಲ್ಲಿ ನಾನು ಉಳಿದುಕೊಂಡು. ಎಲ್ಲ ಅಡೆತಡೆಗಳನ್ನೂ ಎದುರಿಸಿ ಪಿ.ಇ.ಎನ್. ಪತ್ರಿಕೆಯನ್ನು ನಡೆಸಿಕೊಂಡು ಬರಲು ಕಂಕಣಬದ್ಧನಾದದ್ದು" ಎಂದು ಅವರೊಂದಿಗೆ ಬಹುವರ್ಷ ಕೆಲಸ ಮಾಡಿದ, 'ಇಂಡಿಯನ್ ಪಿ.ಇ.ಎನ್.' ಪತ್ರಿಕೆಯ ಸಹಸಂಪಾದಕರಾದ ನಿಸಿಮ್ ಎಜೆಕೀಲ್ (Nissim Ezekiel) ಅವರು ಹೇಳುತ್ತಾರೆ.

ಡಾ॥ ಎಸ್. ರಾಧಾಕೃಷ್ಣನ್‌ರವರು ಮದಾಂ ಸೋಫಿಯಾ ವಾಡಿಯಾ ಅವರನ್ನು ತುಂಬ ಮೆಚ್ಚಿಕೊಂಡಿದ್ದರು. ಅವರು ಮಾತ್ರವಲ್ಲ, ಜವಹರಲಾಲ್ ನೆಹರು, ಮಹಾತ್ಮ ಗಾಂಧಿ, ರವೀಂದ್ರನಾಥ ಠಾಕೂರ್ ಹಾಗೂ ಇತರ ಅನೇಕ ಸಮಕಾಲೀನ ಗಣ್ಯರು ಸೋಫಿಯಾ ವಾಡಿಯಾ ಅವರನ್ನು ಮೆಚ್ಚಿಕೊಂಡಿದ್ದರು. ಭಾರತದ ಬೇರೆ ಬೇರೆ ಪ್ರಾಂತಗಳ ಲೇಖಕರು ಸೋಫಿಯಾ ವಾಡಿಯಾ ಅವರನ್ನು, ತಮ್ಮ ಮಿತ್ರರು, ಮಾರ್ಗದರ್ಶಕರಾದ ತತ್ತ್ವಜ್ಞಾನಿ (Friend, philosopher & guide), ಎಂದು ಭಾವಿಸಿದ್ದರು. ಇದು ಹಳಸಲು ಮಾತು (ಕ್ಲೀಷೆ) ಅಲ್ಲ, ಈ ಸಂದರ್ಭದಲ್ಲಿ ಅರ್ಥಪೂರ್ಣವಾದ ಮಾತು, ಎಂದು ನಿಸಿಮ್ ಎಜೆಕೀಲ್ ಅವರು ತಾವು ಕೇಳಿ ತಿಳಿದ ಸಂಗತಿಯನ್ನು ತಿಳಿಯಹೇಳಿದ್ದಾರೆ.

ಇಂಡಿಯನ್ ಪಿ.ಇ.ಎನ್. ಪತ್ರಿಕೆಯನ್ನು ಸೋಫಿಯಾ ವಾಡಿಯಾ ಅವರು 1934ರಲ್ಲಿ ಸ್ಥಾಪಿಸಿದರು. ಅಂದಿನಿಂದ ತಮ್ಮ ಅಂತ್ಯಕಾಲದವರೆಗೆ ಅವರು ಅದರ ಸಂಪಾದಿಕೆಯಾಗಿದ್ದರು. ಅದು ಇಂಗ್ಲಿಷ್ ಪತ್ರಿಕೆಯಾದರೂ ಭಾರತದ ಇಂಗ್ಲಿಷ್ ಬರಹಕ್ಕೆ ಮೀಸಲಾಗಿರಲಿಲ್ಲ. ಭಾರತದ ಎಲ್ಲ ಪ್ರಮುಖ ಭಾಷೆಗಳ ಸಾಹಿತ್ಯದ ಕನ್ನಡಿಯಾಗಿತ್ತು. ವಿಶೇಷವಾಗಿ ಮೂವತ್ತು ಮತ್ತು ನಲವತ್ತರ ದಶಕಗಳಲ್ಲಿ ತಮ್ಮ ಮಾತೃಭಾಷೆಯ ಸಾಹಿತ್ಯದಲ್ಲಿ ಮಾತ್ರವಲ್ಲದೆ ಎಲ್ಲ ಭಾರತೀಯ ಭಾಷೆಗಳ ಸಾಹಿತ್ಯಕ್ಷೇತ್ರದಲ್ಲಿ ಸಿದ್ಧಿಸುತ್ತಿದ್ದ ಸಾಧನೆಗಳ ಬಗ್ಗೆ ತಿಳಿವಳಿಕೆ ಪಡೆಯಲು ಪಿ.ಇ.ಎನ್. ಪತ್ರಿಕೆ, ವಿಶೇಷವಾಗಿ 30ರ ಮತ್ತು 40ರ ದಶಕಗಳಲ್ಲಿ, ಅನೇಕ ಭಾರತೀಯ ಲೇಖಕರಿಗೆ ಸಹಾಯಕವಾಗಿತ್ತು. "ಸಾಹಿತ್ಯ ಅಕಾಡೆಮಿ ಹಾಗೂ ರಾಷ್ಟ್ರೀಯ ಪುಸ್ತಕ ವಿಶ್ವಸ್ಥ ನಿಧಿಗಳು ಸ್ಥಾಪಿತವಾಗುವ ಮೊದಲೇ ಒಂದು ಸಮಸ್ತ ಭಾರತೀಯ ಸಾಹಿತ್ಯದ ಕಲ್ಪನೆಯನ್ನು ಕೊಟ್ಟದ್ದು ಇಂಡಿಯನ್ ಪಿ.ಇ.ಎನ್. ಸಂಸ್ಥೆ" ಎಂದು ಪ್ರಭಾಕರ ಮಾಚ್ವೆ ಹೇಳಿದ ಮಾತು ತಮ್ಮೊಬ್ಬರ ಪರವಾಗಿ ಹೇಳಿದ ಮಾತಲ್ಲ.

ಪ್ರಮುಖ ರಾಜಕೀಯ, ಧಾರ್ಮಿಕ ಮತ್ತು ತಾತ್ವಿಕ ಪ್ರಶ್ನೆಗಳ ವಿಷಯವಾಗಿ ಸೋಫಿಯಾ ವಾಡಿಯಾ ತಳೆದಿದ್ದ ಅಭಿಪ್ರಾಯಗಳನ್ನು ಸಂಕ್ಷೇಪವಾಗಿ ತಿಳಿಸುವುದು ಕಷ್ಟ. ಅವರ ಅಭಿಪ್ರಾಯಗಳ ಸ್ವರೂಪವನ್ನು ತಿಳಿಸಲು ಒಂದು ಉದಾಹರಣೆಯನ್ನು ಕೊಡಬಹುದು :

1939ರಲ್ಲಿ ಪ್ರಕಟವಾದ "ಮತಧರ್ಮಗಳ ಭ್ರಾತೃತ್ವ" ("The Brotherhood of Religions") ಎಂಬ ಗ್ರಂಥದ ಎರಡನೆಯ ಮುದ್ರಣಕ್ಕೆ (1944) ಮಹಾತ್ಮ ಗಾಂಧಿ ಮುನ್ನುಡಿ ಬರೆದಿದ್ದಾರೆ. ಅದರಲ್ಲಿ ಈ ಮಾತು ಬಂದಿದೆ :

"ಎಲ್ಲ ಪುರುಷರ, ಎಲ್ಲ ಸ್ತ್ರೀಯರ, ಆಂತರಿಕ ಸ್ವಭಾವದ ತಿರುಳು. ಹುರುಳು, ಒಂದೇ ಬಗೆಯದು. ಪ್ರಪಂಚದ ಎಲ್ಲ ಮಹಾಧರ್ಮಗಳ ತಾತ್ತ್ವಿಕ ಮತ್ತು ಭೌತಾತೀತ ದೃಷ್ಟಿ ಇದೇ ಆಗಿರುವ ಪಕ್ಷಕ್ಕೆ, ಅದೇ ಸತ್ಯದ ನೈತಿಕ ದೃಷ್ಟಿಯನ್ನು

ಪ್ರತಿಯೊಬ್ಬ ಪ್ರವಾದಿಯೂ ಪ್ರತಿಯೊಬ್ಬ ಸಾಧು ಸಂತನೂ ನೀಡಿದ್ದಾನೆ. ಹಾಗೆಂದರೆ ಏನು ? ಮನುಷ್ಯ ಮನುಷ್ಯನಿಗೆ ಸಲ್ಲಿಸಬೇಕಾದ ಸೇವೆ."

ಈ ನಂಬಿಕೆಯನ್ನು ತಮ್ಮ ಜೀವಿತದ ಉದ್ದಕ್ಕೂ ಆಚರಣೆಯಲ್ಲಿ ತರಲು ಸೋಫಿಯಾ ಪ್ರಯತ್ನಪಟ್ಟರು. ತಮ್ಮ ಧಾರ್ಮಿಕ ಭಾವನೆಗಳನ್ನೂ ನೀತಿನಿಯಮಗಳನ್ನೂ ತಮ್ಮ ಸಮೀಪವರ್ತಿಗಳಿಗೆ ಆಗಾಗ ವ್ಯಕ್ತಪಡಿಸುತ್ತಿದ್ದರು. ಅವರೆಲ್ಲರೂ ಇವುಗಳಿಂದ ಪ್ರಭಾವಿತರಾಗಿರುವುದಕ್ಕಿಂತ ಹೆಚ್ಚಾಗಿ ಅವರ ಆಚರಣೆಯಿಂದ ಹೆಚ್ಚಾಗಿಯೋ ಕಡಮೆಯಾಗಿಯೋ ಪ್ರಭಾವಿತರಾಗಿದ್ದರು.

o o o

[ಸಾಹಿತ್ಯ ಅಕಾಡೆಮಿಯ Indian Literature ಪತ್ರಿಕೆಯಲ್ಲಿ ಪ್ರಕಟವಾಗಿರುವ ತಮ್ಮ ಲೇಖನವನ್ನು ನಾವು ಕೇಳಿದ ಕೂಡಲೆ ನಿಸಿಮ್ ಎಜೆಕೀಲ್ ಅವರು ಕಳಿಸಿಕೊಟ್ಟು ಉಪಕರಿಸಿದ್ದಾರೆ. ಮೇಲಿನದು ಅವರ ಆತ್ಮೀಯ ಲೇಖನದ ಸಾರಾಂಶರೂಪವೇ ಹೊರತು ಭಾಷಾಂತರ ಅಲ್ಲ ಎಂದು ತಿಳಿಸಬಯಸುತ್ತೇವೆ. ಬಿ.ಎಂ.ಶ್ರೀ., ಮಾಸ್ತಿ, ವಿ.ಸೀ., ಗೋಕಾಕ್ ಮುಂತಾದ ಅನೇಕ ಕನ್ನಡ ಸಾಹಿತಿಗಳು ಪಿ. ಇ. ಎನ್. ಸಂಸ್ಥೆಯ ಸದಸ್ಯರಾಗಿದ್ದುದಲ್ಲದೆ, ಸೋಫಿಯಾ ವಾಡಿಯಾ ಬಗ್ಗೆ ತುಂಬ ಗೌರವ ಭಾವನೆ ಇಟ್ಟುಕೊಂಡಿದ್ದರು. ಮಾಸ್ತಿ ಹಲವು ವರ್ಷ ಪಿ.ಇ.ಎನ್. ಸಂಸ್ಥೆಯ ಅಧ್ಯಕ್ಷರಾಗಿದ್ದರು ಎಂಬ ಸಂಗತಿ ನೆನೆಯತಕ್ಕದ್ದು.

ಈ ಸಂದರ್ಭದಲ್ಲಿ, ಸೋಫಿಯಾ ವಾಡಿಯಾ ಅವರ ವ್ಯಕ್ತಿತ್ವದ ಬಗೆಗೆ ಬಿ.ಎಂ.ಶ್ರೀ. ಅವರ ಮಾತು ಪ್ರಸ್ತುತ ಮಾತ್ರವಲ್ಲ, ಬೆಲೆಯುಳ್ಳದ್ದು ಕೂಡ. ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಸೆಪ್ಟೆಂಬರ್ 14, 1941ರಲ್ಲಿ 'ಶ್ರೀ'ಯವರ 57ನೆಯ ಹುಟ್ಟುಹಬ್ಬವನ್ನಾಚರಿಸಿ 'ಸಂಭಾವನೆ'ಗ್ರಂಥ ಅವರಿಗೆ ಒಪ್ಪಿಸಿದಾಗ, ಸಭೆಯಲ್ಲಿ ಸೋಫಿಯಾ ವಾಡಿಯಾ ಅವರೂ ಉಪಸ್ಥಿತರಿದ್ದು ಅಭಿನಂದನಭಾಷಣ ಮಾಡಿದರು. ಬಿ.ಎಂ.ಶ್ರೀ. ತಮ್ಮ ಭಾಷಣದಲ್ಲಿ ಸೋಫಿಯಾ ವಾಡಿಯಾ ಅವರನ್ನು ಕುರಿತು ಹೀಗೆ ಹೇಳಿದರು : "ಶ್ರೀಮತಿ ಸೋಫಿಯಾ ವಾಡಿಯಾ ಅವರು ಭಾರತದ ಗುರುಪರಂಪರೆಗೆ ನನ್ನನ್ನು ಜೋಡಿಸಿದರು...ನಾನು ಧನ್ಯ. ಆಕೆ ಭಾರತೀಯರಾಗಿ ಎಲ್ಲವನ್ನೂ ವಿಶ್ವದೃಷ್ಟಿಯಿಂದ ನೋಡಿ ಮಾನವಪ್ರಗತಿಯಲ್ಲಿ ಅಚಲವಾದ ಶ್ರದ್ಧೆಯಿಟ್ಟುಕೊಂಡಿದ್ದಾರೆ. ಅವರಿಗಾಗಿ ಇಂಗ್ಲಿಷಿನಲ್ಲಿ ಹೇಳುತ್ತೇನೆ : She believes in the Brahman, lives in the Brahman and prays and works for the spread of the Brahman."

**ಆಚಾರ್ಯ ದಿವಾಕರ್ಲ ವೆಂಕಟಾವಧಾನಿ :** ಆಚಾರ್ಯ ದಿವಾಕರ್ಲ ಶ್ರೀ ವೆಂಕಟಾವಧಾನಿಯವರು (1913–1986) ತಮ್ಮ ಪ್ರತಿಭೆ ಪಾಂಡಿತ್ಯಗಳಿಂದಷ್ಟೇ ಅಲ್ಲ, ತಮ್ಮ ಸೌಜನ್ಯ, ಸರಳ ಗುಣಗಳಿಂದಲೂ ಆಂಧ್ರಪ್ರದೇಶದಲ್ಲಿ ಮನೆಮಾತಾಗಿದ್ದ

ಹಿರಿಯ ಆಚಾರ್ಯರು. ಯಾರೇ ಎಲ್ಲಿಗೇ ಕರೆಯಲಿ ಹೋಗಿ ಉಪನ್ಯಾಸ ನೀಡು ವುದು, ಯಾರು ಪುಸ್ತಕವನ್ನು ತಂದು ಕೈಗಿತ್ತು ಶುಭ ಹಾರೈಕೆಯ ಎರಡು ಮಾತು ಗಳನ್ನು ಬರೆದು ಕೊಡಿ ಎಂದರೆ ತುಂಬುಮನಸ್ಸಿನಿಂದ ಆತನ ಪುಸ್ತಕ ಹೇಗೇ ಇರಲಿ, ಅದರಲ್ಲಿಯೂ ಒಂದೆರಡು ಒಳ್ಳೆಯ ಗುಣಗಳನ್ನು ಹೆಕ್ಕಿ ತೆಗೆದು ಬೆನ್ನುತಟ್ಟಿ ಪ್ರೋತ್ಸಾಹಿಸುವುದು ಅವರ ಹುಟ್ಟುಗುಣವಾಗಿತ್ತು. ಪಾಂಡಿತ್ಯ, ವಯಸ್ಸು, ಅಧಿಕಾರ ಯಾವುದರ ಅಂತರವನ್ನೂ ಪರಿಗಣಿಸದೆ ಎಲ್ಲರನ್ನೂ ತಮ್ಮ ಸಮಾನರಂತೆ ನಡೆಯಿಸಿಕೊಳ್ಳುತ್ತಿದ್ದ ಸಜ್ಜನಿಕೆಯ ಸಾಕಾರಮೂರ್ತಿ ಶ್ರೀ ವೆಂಕಟಾವಧಾನಿಗಳು ಈ ದೀಪಾವಳಿಗೆ ಮುನ್ನ ಅಸ್ತಂಗತರಾದುದು ತೆಲುಗು ಸಾರಸ್ವತ ಪ್ರಪಂಚಕ್ಕೆ ಶಾಶ್ವತವಾದ ಹಾನಿಯನ್ನುಂಟುಮಾಡಿದೆ.

ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದ ತೆಲುಗು ವಿಭಾಗದ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರಾಗಿ ವಿಶ್ರಾಂತರಾದ ಶ್ರೀಯುತರು ನನ್ನಯ-ಪೂರ್ವ ಸಾಹಿತ್ಯದ ಬಗ್ಗೆ ಆಳವಾದ ಅಭ್ಯಾಸವನ್ನು ನಡೆಯಿಸಿದ್ದರು. ಆಂಧ್ರ ಮಹಾಭಾರತದ ಸಂಶೋಧಿತ ಪ್ರಕಟನೆಯ ಮುಖ್ಯ ಸಂಪಾದಕರಾಗಿಯೂ, 'ಆಂಧ್ರ ವಿಜ್ಞಾನ ಸರ್ವಸ್ವಂ'ನ (ಭಾಗ ಆರು) ಪ್ರಧಾನ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದರು.

ಇವರು ಸುದೀರ್ಘವಾದ ಮುನ್ನುಡಿಯೊಂದಿಗೆ ಸಂಪಾದಿಸಿದ ಆಂಧ್ರ ಪೋತನಾಮಾತ್ಯ ಭಾಗವತವನ್ನು ಆಂಧ್ರ ಸಾಹಿತ್ಯ ಅಕಾಡೆಮಿಯವರು ಪ್ರಕಟಿಸಿ ದ್ದಾರೆ. ಆಂಧ್ರ ಸಾಹಿತ್ಯದ ಬಗ್ಗೆ ಇವರು ನೀಡಿದ ಅನೇಕ ಉಪನ್ಯಾಸಗಳು ಲೇಖನಗಳ ರೂಪದಲ್ಲಿ ಪ್ರಕಟವಾಗಿದ್ದು ಜನಪ್ರಿಯತೆಯನ್ನು ಪಡೆದಿವೆ. ತೆಲುಗು ಪಂಚಕಾವ್ಯ ಗಳ ಬಗ್ಗೆ ನೀಡಿದ ಉಪನ್ಯಾಸಗಳ ಮುದ್ರಿತ ಪುಸ್ತಕ 'ಕಾವ್ಯಲಹರಿ' ಎಂಬುದು ಒಂದೇ ದಿನದಲ್ಲಿ ಹನ್ನೆರಡು ಸಾವಿರ ಪ್ರತಿಗಳು ಮಾರಾಟವಾಗಿರುವುದು ಇವರ ಉಪನ್ಯಾಸ ಶೈಲಿಯ ಜನಪ್ರಿಯತೆಯನ್ನು ಸಾರುತ್ತದೆ. ಇವರ 'ಆಂಧ್ರವಾಙ್ಮಯ ಚರಿತ್ರ', 'ಸಾಹಿತ್ಯ ಸೋಪಾನಾಲು' ಮುಂತಾದ ಕೃತಿಗಳು ಹಲವಾರು ಮುದ್ರಣ ಗಳನ್ನು ಕಂಡಿವೆ. ಕೇವಲ ವಿದ್ವಾಂಸರಾಗಿಯಷ್ಟೇ ಅಲ್ಲ, ಕವಿಯಾಗಿಯೂ, ಅನುವಾದಕರಾಗಿಯೂ ಶ್ರೀಯುತರು ತೆಲುಗು ಸಾಹಿತ್ಯವನ್ನು ಶ್ರೀಮಂತಗೊಳಿಸಿ ದ್ದಾರೆ. ಗೇಯ ರೂಪದಲ್ಲಿ ಇವರು ರಚಿಸಿರುವ ಸುಂದರಕಾಂಡವೂ ಜನಪ್ರಿಯ ವಾಗಿದೆ.

ಶ್ರೀ ದಿವಾಕರ್ಲ ಅವರ ನಿಧನದಿಂದಾಗಿ ತೆಲುಗು ಸಾರಸ್ವತ ಪ್ರಪಂಚ ತನ್ನ ವಿದ್ವತ್ ಪ್ರಪಂಚದ ಒಂದು ಧ್ರುವತಾರೆಯನ್ನು ಕಳೆದುಕೊಂಡಂತಾಗಿದೆ.

## ಪ್ರೊ॥ ವಿ. ಎಂ. ಇನಾಮ್‌ದಾರ್

ಇಂಗ್ಲಿಷ್ ಭಾಷೆಯ ಪ್ರಾಧ್ಯಾಪಕರಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಮಾಡಿರುವ ಪ್ರಮುಖರಲ್ಲಿ ಪ್ರೊ॥ ವಿ. ಎಂ. ಇನಾಂದಾರರೂ ಒಬ್ಬರು. ಇವರು ಸಂಸ್ಕೃತದಲ್ಲೂ ಒಳ್ಳೆಯ ವಿದ್ವಾಂಸರು, ಧಾರವಾಡದ ಕರ್ನಾಟಕ ಕಾಲೇಜು, ಶಿವಮೊಗ್ಗ ಕಾಲೇಜುಗಳಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಶ್ರೀಯುತರು ನಿವೃತ್ತರಾದ ಮೇಲೆ ಯು. ಜಿ, ಸಿ. ಪ್ರಾಧ್ಯಾಪಕರಾಗಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಕೆಲಸ ಮಾಡಿದರು. 'ಸ್ವರ್ಗದ ಬಾಗಿಲು', 'ಮೂರಾಬಟ್ಟೆ', 'ಈ ಪರಿಯ ಸೊಬಗು' ಮುಂತಾದ ಮಹತ್ವದ ಕಾದಂಬರಿಗಳನ್ನೂ 'ಪಾಶ್ಚಾತ್ಯ ಕಾವ್ಯಮೀಮಾಂಸೆ'ಯಂಥ ಶ್ರೇಷ್ಠ ಸಾಹಿತ್ಯ ವಿಮರ್ಶೆಯ ಕೃತಿಯನ್ನೂ ಕನ್ನಡಕ್ಕೆ ನೀಡಿದ ಇನಾಂದಾರ್ ಗ್ರಂಥವಿಮರ್ಶಕರಾಗಿಯೂ ಪ್ರಸಿದ್ಧರಾಗಿದ್ದರು. ಸಾಹಿತ್ಯ ಕ್ಷೇತ್ರದ ಯಾವುದೇ ವಾದವಿವಾದದ ಗೊಂದಲದಲ್ಲಿ ಸಿಲುಕಿಕೊಳ್ಳದ ಶ್ರೀಯುತರು ಸ್ನೇಹಪರರೂ ಸೌಜನ್ಯಮೂರ್ತಿಗಳೂ ಆಗಿದ್ದು, ಎಲೆಮರೆಯ ಕಾಯಂತೆ ಕನ್ನಡ ಸಾಹಿತ್ಯ ಭಂಡಾರಕ್ಕೆ ಅಮೂಲ್ಯ ಕಾಣಿಕೆಗಳನ್ನು ನೀಡಿದರು. ಇವರು ತೀರಿಕೊಂಡದ್ದು (26-1-1986) ಕನ್ನಡದ ದೊಡ್ಡ ನಷ್ಟ.

---

# ಪ್ರತಿಷ್ಠಾನ ವಾರ್ತೆ

**ಗೌರವಾಧ್ಯಕ್ಷರು : ಶ್ರೀ ನಿಟ್ಟೂರು ಶ್ರೀನಿವಾಸ ರಾವ್**

ಸೆಪ್ಟೆಂಬರ್ 30ರಂದು ನಡೆದ ಸರ್ವಸದಸ್ಯರ ಸಭೆಯಲ್ಲಿ, ನಿಯಮಾವಳಿಯಂತೆ ನಿವೃತ್ತರಾದ ಸನ್ಮಾನ್ಯ ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾಯರ ಸ್ಥಾನದಲ್ಲಿ ಇದುವರೆಗೂ ಸಂಸ್ಥಾಪಕ ಕಾರ್ಯದರ್ಶಿಯಾಗಿದ್ದ ಪ್ರೊ॥ ಎಂ. ವಿ. ಸೀತಾರಾಮಯ್ಯನವರನ್ನು ಪ್ರತಿಷ್ಠಾನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಯಿತು. ಹೀಗೆ ನಿವೃತ್ತರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರ ಮಾರ್ಗದರ್ಶನವು ಮುಂದೆಯೂ ಸಂಸ್ಥೆಗೆ ದೊರಕುತ್ತಿರಬೇಕೆಂಬ ಆಶಯದಿಂದ ಗೌರವಾಧ್ಯಕ್ಷರಾಗಿದ್ದುಕೊಂಡು ಸಂಸ್ಥೆಗೆ ತಮ್ಮ ಜ್ಞಾನಾನುಭವಗಳ ಮಾರ್ಗದರ್ಶನವನ್ನು ನೀಡುತ್ತಿರಬೇಕೆಂದು ಸಭೆ ಅವರನ್ನು ಪ್ರಾರ್ಥಿಸಿತು. ಅವರು ದಯವಿಟ್ಟು ಗೌರವಾಧ್ಯಕ್ಷರಾಗಿರಲು ಒಪ್ಪಿಕೊಂಡಿರುತ್ತಾರೆ. ಈವರೆಗೆ ಸಂಸ್ಥೆಯ ಅಧ್ಯಕ್ಷರಾಗಿ ಅದನ್ನು ಮುನ್ನಡಸಿಕೊಂಡುಬಂದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರಿಗೆ ಪ್ರತಿಷ್ಠಾನದ ಪರವಾಗಿ ಗೌರವಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತ, ಹಿಂದಿನಂತೆ ಇನ್ನು ಮುಂದೆಯೂ ಸಂಸ್ಥೆಗೆ ತಮ್ಮ ಅಮೂಲ್ಯವಾದ ಮಾರ್ಗದರ್ಶನವನ್ನು ನೀಡಬೇಕೆಂದು ಪ್ರಾರ್ಥಿಸುತ್ತೇವೆ.

**'ಲೋಚನ'ದ ನೂತನ ಸಂಪಾದಕರು**

ಅಕ್ಟೋಬರ್ 8ರಂದು ನಡೆದ ಕಾರ್ಯಸಮಿತಿಯ ಸಭೆಯಲ್ಲಿ, ಈವರೆಗೆ ಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ಟಿ. ಆರ್. ಮಹಾದೇವಯ್ಯನವರ ಸ್ಥಾನದಲ್ಲಿ ಶ್ರೀ ಟಿ. ಕೇಶವಭಟ್ಟರನ್ನು ಸಂಪಾದಕರನ್ನಾಗಿ ನೇಮಕ ಮಾಡಲಾಯಿತು. 'ಲೋಚನ' ಪತ್ರಿಕೆ ಪ್ರಾರಂಭವಾದಂದಿನಿಂದ ಅದರ ಉತ್ಸಾಹಿ ಸಂಪಾದಕರಾಗಿದ್ದುಕೊಂಡು, ಅತ್ಯಲ್ಪ ಕಾಲದಲ್ಲಿ ಅದು ವಿದ್ವತ್‌ಪ್ರಪಂಚದಲ್ಲಿ ಗಣ್ಯಸ್ಥಾನವನ್ನು ಪಡೆಯುವಲ್ಲಿ ಅಮೂಲ್ಯವಾದ ನೆರವು ನೀಡಿದ ಶ್ರೀ ಮಹಾದೇವಯ್ಯನವರಿಗೆ ಪ್ರತಿಷ್ಠಾನದ ಪರವಾಗಿ ನಮ್ಮ ಕೃತಜ್ಞತೆಯ ವಂದನೆಗಳನ್ನು ಸಲ್ಲಿಸುತ್ತೇವೆ.

ನೂತನ ಸಂಪಾದಕರಾದ ಶ್ರೀ ಟಿ. ಕೇಶವಭಟ್ಟರಿಗೆ ನಮ್ಮ ಹೃತ್ಪೂರ್ವಕವಾದ ಸ್ವಾಗತ.

**ಎಂ. ವಿ. ಸೀತಾರಾಮಯ್ಯ**
ಅಧ್ಯಕ್ಷರು

## ಪ್ರೊ॥ ಟಿ. ಎಸ್. ವೆಂಕಣ್ಣಯ್ಯ ಜನ್ಮಶತಮಾನೋತ್ಸವ

ಅಕ್ಟೋಬರ್ 1985ರಿಂದ ಈವರೆಗೆ ಪ್ರತಿಷ್ಠಾನ ವಿವಿಧ ಸ್ಥಳಗಳಲ್ಲಿ ನಡಸಿದ ಪ್ರೊ॥ ಟಿ. ಎಸ್. ವೆಂಕಣ್ಣಯ್ಯ ಜನ್ಮಶತಮಾನೋತ್ಸವ ಕಾರ್ಯಕ್ರಮಗಳು.

1) 12-1-86ರಂದು ಅವರ ಹುಟ್ಟೂರು ತಳುಕಿನಲ್ಲಿ ಅಲ್ಲಿಯ ಟಿ. ಎಸ್. ವೆಂಕಣ್ಣಯ್ಯ ಜನ್ಮಶತಮಾನೋತ್ಸವ ಸಮಿತಿಯೊಂದಿಗೆ ನಡೆಯಿತು. ಶ್ರೀ ನಜೀರ್ ಸಾಹೆಬ್ (ಗ್ರಾಮಾಭಿವೃದ್ಧಿ ಸಚಿವರು), ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಪ್ರೊ॥ ತ. ಸು. ಶಾಮರಾವ್ ಅವರುಗಳು ಭಾಗವಹಿಸಿದ್ದರು. ವೆಂಕಣ್ಣಯ್ಯ ಸ್ಮಾರಕ ಗ್ರಂಥಾಲಯಕ್ಕೆ ಪ್ರತಿಷ್ಠಾನದ ಗ್ರಂಥಗಳನ್ನು ನೀಡಲಾಯಿತು. ಆಳೆತ್ತರದ ಭಾವಚಿತ್ರವನ್ನು ಅನಾವರಣ ಮಾಡಲಾಯಿತು.

2) 13-1-1986ರಂದು ಚಳ್ಳಕೆರೆಯಲ್ಲಿ ಅಲ್ಲಿಯ ಉತ್ಸವ ಸಮಿತಿಯ ನೆರವಿನಿಂದ ನಡೆಯಿತು. ವೆಂಕಣ್ಣಯ್ಯನವರ ಭಾವಚಿತ್ರವನ್ನು ಅತಿಥಿಗಳೊಂದಿಗೆ ಭವ್ಯ ಮೆರವಣಿಗೆಯಲ್ಲಿ ತರಲಾಯಿತು. ಶ್ರೀ ತ. ಸು. ಶಾಮರಾವ್, ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಗಳು, ಡಾ॥ ಶೇಷಶಾಸ್ತ್ರಿ ಮುಂತಾದವರು ಭಾಗವಹಿಸಿದ್ದರು. ಆಶುಕವಿಗಳಾಗಿದ್ದ ದಿವಂಗತ ಚಂದ್ರಶೇಖರಶಾಸ್ತ್ರಿಗಳ ಆಶು ಕವನ ಸಂಕಲನವನ್ನು ಬಿಡುಗಡೆ ಮಾಡಲಾಯಿತು.

3) 14-1-1986ರಂದು ಚಿತ್ರದುರ್ಗದಲ್ಲಿ ಲೋಕೋಪಯೋಗಿ ಸಾಂಸ್ಕೃತಿಕ ಸಂಘ ಮತ್ತು ಚಿನ್ಮೂಲಾದ್ರಿ ಯೋಗ ಮತ್ತು ಸಾಂಸ್ಕೃತಿಕ ಸಂಘ, ಕರ್ನಾಟಕ ಸಾಹಿತ್ಯ ಅಕಾಡೆಮಿಗಳ ನೆರವಿನಿಂದ ವೆಂಕಣ್ಣಯ್ಯನವರಿಗೆ ಪ್ರಿಯವಾಗಿದ್ದ 'ಕನ್ನಡ ಭಾರತ ಪರಂಪರೆ' ವಿಷಯವಾಗಿ ವಿಚಾರಗೋಷ್ಠಿಯನ್ನು ನಡಸಲಾಯಿತು. ಹಲವಾರು ವಿದ್ವಾಂಸರು ಭಾಗವಹಿಸಿದ್ದರು. ಈ ಗೋಷ್ಠಿಯನ್ನು ಮಾಜಿ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ನಿಜಲಿಂಗಪ್ಪನವರು ಉದ್ಘಾಟಿಸಿದರು. ಈ ಕಾರ್ಯಕ್ರಮದಲ್ಲಿ ಬೆಂಗಳೂರಿನಿಂದ ಶ್ರೀ ನಿಟ್ಟೂರು ಶ್ರೀನಿವಾಸರಾವ್, ಪ್ರೊ॥ ಎಂ. ವಿ. ಸೀತಾರಾಮಯ್ಯ, ಶ್ರೀ ಜಿ. ನಾರಾಯಣ, ಡಾ॥ ಎಂ. ಚಿದಾನಂದಮೂರ್ತಿ, ಡಾ॥ ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ, ಡಾ॥ ರಾಮಚಂದ್ರಶರ್ಮ, ಶ್ರೀ ನಾ. ಗೀತಾಚಾರ್ಯ ಮುಂತಾದವರು ಭಾಗವಹಿಸಿದ್ದರು. ಕರ್ನಾಟಕ ಗಮಕ ಕಲಾ-ಪರಿಷತ್ತಿನ ಪರವಾಗಿ ಶ್ರೀ ಎಂ. ರಾಘವೇಂದ್ರರಾವ್ ಮತ್ತು ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್ ಅವರು ಕಾವ್ಯವಾಚನ ಕಾರ್ಯಕ್ರಮ ನೀಡಿದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಿ ಸಹಕರಿಸಿತು. ಸ್ಥಳೀಯ ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಗಳ ಮೂಲಕ ಈ ಮೂರೂ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡಲಾಗಿತ್ತು. ಸ್ಥಳೀಯ ಅಭಿಮಾನಿಗಳು, ಕಾರ್ಯಕರ್ತರು, ಅಪಾರವಾಗಿ ಶ್ರಮಿಸಿ ಈ ಕಾರ್ಯಕ್ರಮಗಳ ಯಶಸ್ಸಿಗೆ ಕಾರಣರಾಗಿದ್ದಾರೆ.

4) 20-7-1986ರಂದು ದೊಡ್ಡಬಳ್ಳಾಪುರ ಸರ್ಕಾರಿ ಶಾಲೆಯಲ್ಲಿ (ವೆಂಕಣ್ಣಯ್ಯನವರು ಉಪಾಧ್ಯಾಯರಾಗಿದ್ದ ಸ್ಥಳ) ಅಲ್ಲಿಯ ಕನ್ನಡ ಜಾಗೃತಿ ಪರಿಷತ್ತಿನ ಆಶ್ರಯದಲ್ಲಿ ಶತಮಾನೋತ್ಸವ ಕಾರ್ಯಕ್ರಮ ನಡಸಲಾಯಿತು. ಶ್ರೀ ನಿಟ್ಟೂರು ಶ್ರೀನಿವಾಸರಾವ್, ಪ್ರೊ॥ ಜಿ. ವೆಂಕಟಸುಬ್ಬಯ್ಯ ಮತ್ತು ಎಂ. ವಿ. ಸೀ. ಅವರುಗಳು ಭಾಗವಹಿಸಿದ್ದರು.

5) 6–9–1986ರಂದು ಬೆಂಗಳೂರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಬೆಳಗ್ಗೆ ಮಾಸ್ತಿಸ್ಮರಣೆ ಕಾರ್ಯಕ್ರಮದೊಂದಿಗೆ ಮಾಸ್ತಿಯವರ ಮತ್ತು ವೆಂಕಣ್ಣಯ್ಯನವರ ಭಾವಚಿತ್ರಗಳ ಅನಾವರಣ ಕಾರ್ಯಕ್ರಮಗಳನ್ನು ನಡಸಿತು. ಮಾನ್ಯ ಶ್ರೀ ರಾಮಕೃಷ್ಣ ಹೆಗಡೆಯವರ ಗೈರುಹಾಜರಿಯಲ್ಲಿ ಶ್ರೀ ಬಿ. ರಾಚಯ್ಯ ಅವರು ಭಾವಚಿತ್ರಗಳ ಅನಾವರಣ ಮಾಡಿದರು. ಸಂಜೆ ಡಾ॥ ವಿ. ಕೃ ಗೋಕಾಕರ ಅಧ್ಯಕ್ಷತೆಯಲ್ಲಿ ಶ್ರೀ ಅ. ರಾ. ಚಂದ್ರಹಾಸಗುಪ್ತ, ಪ್ರೊ॥ ಎಂ. ಪಿ. ಎಲ್. ಶಾಸ್ತ್ರಿ, ಮುಂತಾದವರು ಭಾಷಣ ಮಾಡಿದರು.

6) 6–11–86ರಂದು ಇಂದಿರಾನಗರದಲ್ಲಿ ಕನ್ನಡ ಸಂಸ್ಕೃತಿಯ ಕೂಟ, ಬೆಂಗಳೂರು, ಇವರೊಂದಿಗೆ ಮಾಸ್ತಿಸ್ಮರಣೆ ಕಾರ್ಯಕ್ರಮ.

7) 30–11–1986ರಂದು ಧಾರವಾಡದಲ್ಲಿ ಬಾಸಲ್ ಮಿಷನ್ ವಿದ್ಯಾಸಂಸ್ಥೆ, ಆಲೂರು ವೆಂಕಟರಾವ್ ಪ್ರತಿಷ್ಠಾನ, ವಿದ್ಯಾವರ್ಧಕ ಸಂಘ, ಇತಿಹಾಸ ಸಂಶೋಧನ ಮಂಡಲ, ಅನ್ವೇಷಣಕೂಟ, ಕನ್ನಡ ಅಧ್ಯಯನ ಪೀಠ, ಇವರ ಸಹಕಾರದಿಂದ ಕಾರ್ಯಕ್ರಮ. ಕೆ. ರಾಜಾರಾವ್ ಅವರ 'ಭಾರತದ ಶ್ರೀಕೃಷ್ಣ' ಪುಸ್ತಕ ಬಿಡುಗಡೆ. ಶ್ರೀ ವೆಂಕಟೇಶ್ ಕುಮಾರ ಅವರ ಸಂಗೀತ ಕಾರ್ಯಕ್ರಮ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನೆರವಿನಿಂದ ಜರುಗಿತು.

ಧಾರವಾಡದ ಕಾರ್ಯಕ್ರಮದ ಬಹುಪಾಲಿನ ಹೊಣೆ ಹೊತ್ತು ನಿರ್ವಹಿಸಿದ, ವೆಂಕಣ್ಣಯ್ಯನವರ ಬಂಧುವರ್ಗಕ್ಕೆ ಸೇರಿದ ಶ್ರೀ ಸುಭಾಷ್ ಪುರೋಹಿತ್ ಅವರ ಉಪಕಾರ ಸ್ಮರಣೀಯ.

ಧಾರವಾಡದ ಕಾರ್ಯಕ್ರಮವನ್ನು ಉದ್ಘಾಟಿಸಿದವರು ಬಾಸೆಲ್ ಮಿಷನ್ನಿನ ಧರ್ಮಗುರು ವಸಂತ ಪಿ. ದಂಡಿನ ಅವರು. ಡಾ॥ ಎಸ್. ಜಿ. ದೇಸಾಯಿ ಅವರು ಅನಾವರಣಮಾಡಿದ ವೆಂಕಣ್ಣಯ್ಯನವರ ಭಾವಚಿತ್ರವನ್ನು ಬಾಸೆಲ್ ಮಿಷನ್ ಶಾಲೆಗೆ ಪ್ರತಿಷ್ಠಾನ ದಾನಮಾಡಿತು. ಬೆಳಗ್ಗೆ ಮತ್ತು ಸಂಜೆಯ ಕಾರ್ಯಕ್ರಮಗಳಿಗೆ ಕ್ರಮವಾಗಿ ಪ್ರೊ॥ ಸ. ಸ. ಮಾಳವಾಡ ಮತ್ತು ನಿಟ್ಟೂರು ಶ್ರೀನಿವಾಸರಾಯರು ಅಧ್ಯಕ್ಷರಾಗಿದ್ದರು. ಸರ್ವಶ್ರೀ ಡಾ॥ ಶ್ರೀನಿವಾಸ ರಿತ್ತಿ, ಡಾ॥ ವರದರಾಜ ಹುಯಿಲಗೋಳ, ಡಾ॥ ರಂ. ಶ್ರೀ. ಮುಗಳಿ, ಡಾ॥ ಎಸ್. ಎಂ. ವೃಷಭೇಂದ್ರಸ್ವಾಮಿ, ಪ್ರೊ॥ ಎಂ. ಪಿ. ಸೀತಾರಾಮಯ್ಯ ವೆಂಕಣ್ಣಯ್ಯನವರನ್ನು ಕುರಿತು ಭಾಷಣ ಮಾಡಿದರು.

ನಮಗೆ ತಿಳಿದು ಬಂದಂತೆ ಸ್ವತಂತ್ರವಾಗಿ ಕೆಲವು ಸಂಘ ಸಂಸ್ಥೆಗಳೂ ಈ ಕಾರ್ಯಕ್ರಮಗಳನ್ನು ನಡೆಸಿವೆ. ಅವುಗಳೆಂದರೆ, 1-10-1985ರಂದು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 10-12-1985ರಂದು ಕರ್ನಾಟಕ ಸರ್ಕಾರದಿಂದ ತಳುಕಿನಲ್ಲಿ ವೆಂಕಣ್ಣಯ್ಯ ಸ್ಮಾರಕ ಗ್ರಂಥಾಲಯ ಉದ್ಘಾಟನೆ; 11-12-85ರಂದು ಬೆಂಗಳೂರಿನ ಜೀವವಿಮಾ ಕನ್ನಡ ಬಳಗ, 13-12-1985 ರಂದು ಬೆಂಗಳೂರಿನ ಶೇಷಾದ್ರಿಪುರಂ ಸಂಜೆ ಕಾಲೇಜು ಮುಂತಾದವುಗಳು.

ನಾವು ಇಡೀ ವರ್ಷ ಹಾಕಿಕೊಂಡಿದ್ದ ಯೋಜನೆ ಬಹಳ ದೊಡ್ಡದು. ರಾಜ್ಯ ಸರ್ಕಾರದ ಅನುದಾನವನ್ನು ಅಪೇಕ್ಷಿಸಿದ್ದೆವು. ಆದರೆ, ಅದು ಬಾರದೆ ಹೋದುದರಿಂದ ಪ್ರತಿಷ್ಠಾನದ ಆರ್ಥಿಕಸ್ಥಿತಿಯಲ್ಲಿ ಆ ಯೋಜನೆಗಳನ್ನು ನಡಸುವುದು ಸಾಧ್ಯವಿರಲಿಲ್ಲ. ಹೀಗಾಗಿ ಸ್ಥಳೀಯ ಆಸಕ್ತರಿಂದ ಆಹ್ವಾನ ಬಂದ ಕಡೆಗಳಲ್ಲಿ ಅವರದೇ ಬಹುಪಾಲು ಆರ್ಥಿಕ ನೆರವಿನಿಂದ ಈ ಕಾರ್ಯಕ್ರಮಗಳನ್ನು ನಡಸಿದ್ದೇವೆ. ಕಾರ್ಯಕ್ರಮಗಳ ವೆಚ್ಚದಲ್ಲಿ ಪ್ರತಿಷ್ಠಾನದ ಪಾಲು ಅತ್ಯಲ್ಪ. ಈ ಎಲ್ಲ ಕಾರ್ಯಕ್ರಮಗಳಲ್ಲಿ ಸ್ಥಳೀಯರ ಸಹಾಯ-ಸಹಕಾರ ಅಪಾರವಾಗಿದೆ. ಈ ಕಾರ್ಯಕ್ರಮಗಳಲ್ಲಿ ಸುಮಾರು ನೂರಕ್ಕೂ ಹೆಚ್ಚು ಜನ ಅತಿಥಿಗಳು ಭಾಗವಹಿಸಿದ್ದಾರೆ. ಅದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಕಾರ್ಯಕರ್ತರಿದ್ದಾರೆ. ಇವರೆಲ್ಲರಿಗೂ ಪ್ರತಿಷ್ಠಾನ ಕೃತಜ್ಞವಾಗಿದೆ. ಈ ಸಂದರ್ಭದಲ್ಲಿ ಪ್ರತಿಷ್ಠಾನದಲ್ಲಿ ವೆಂಕಣ್ಣಯ್ಯ ಸ್ಮಾರಕ ದತ್ತಿನಿಧಿಯೊಂದನ್ನು ಸ್ಥಾಪಿಸಲಾಯಿತು. ಈ ನಿಧಿಗೆ ವಿಶೇಷವಾಗಿ ಶ್ರಮಿಸಿರುವ ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಗಳು ಮತ್ತು ನಿಧಿಗೆ ದಾನ ನೀಡಿರುವ ಎಲ್ಲ ದಾನಿಗಳಿಗೂ ಪ್ರತಿಷ್ಠಾನ ಕೃತಜ್ಞವಾಗಿದೆ.

**ಎಸ್. ಶ್ರೀಕಂಠಯ್ಯ ಜನ್ಮಶತಮಾನೋತ್ಸವ ಸಂಸ್ಮರಣೆಯ ವಿಜಯನಗರ ಸಾಮ್ರಾಜ್ಯ ವಿಚಾರಗೋಷ್ಠಿ**

ಅಕ್ಟೋಬರ್ 18, 19ರಂದು ಐತಿಹಾಸಿಕ ರತ್ನ ಸಕಲೇಶಪುರ ಶ್ರೀಕಂಠಯ್ಯನವರ ಜನ್ಮಶತಮಾನೋತ್ಸವ ಸ್ಮರಣೆಗಾಗಿ ಶ್ರೀಕಂಠಯ್ಯನವರಿಗೆ ಪ್ರಿಯವಾಗಿದ್ದ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ, ಬೆಳವಣಿಗೆಗಳನ್ನು ಕುರಿತಂತೆ ಖ್ಯಾತ ವಿದ್ವಾಂಸರ ಸಹಕಾರದಿಂದ ಮಹತ್ವಪೂರ್ಣ ವಿಚಾರಗೋಷ್ಠಿಯನ್ನು ನಡಸಲಾಯಿತು. ಈ ಗೋಷ್ಠಿಯ ಇಡೀ ಯಶಸ್ಸು ಶ್ರೀಕಂಠಯ್ಯನವರ ಮಕ್ಕಳು ಮತ್ತು ಕುಟುಂಬ ವರ್ಗಕ್ಕೆ ಸಲ್ಲಬೇಕು. ಸುಮಾರು 30.000 ರೂ.ಗಳ ವೆಚ್ಚದಲ್ಲಿ ಸುವ್ಯವಸ್ಥಿತವಾಗಿ ನಡೆದ ಈ ಕಾರ್ಯಕ್ರಮದ ಬಹುಪಾಲು ವೆಚ್ಚ, ಓಡಾಟ, ಎಲ್ಲ ಜವಾಬ್ದಾರಿಯನ್ನೂ ಶ್ರೀ ಎಸ್ ನಾರಾಯಣರಾವ್, ಶ್ರೀ ಎಸ್. ರಾಮಚಂದ್ರ, ಶ್ರೀ ಎಸ್. ಅನಂತ್ ಮುಂತಾದವರೇ ನಿರ್ವಹಿಸಿದರು. ಶ್ರೀ ಎಚ್. ಎಲ್. ನಂಜೇಗೌಡ, ಎಂ. ಪಿ. ಅವರು ಉತ್ಸವಸಮಿತಿಯ ಪೋಷಕರಾಗಿದ್ದರು. ಗೋಷ್ಠಿಯ ಅಧ್ಯಕ್ಷರಾಗಿ ಶ್ರೀ ಜಿ. ಎಸ್. ದೀಕ್ಷಿತ್ ಅವರು. ನಿರ್ದೇಶಕರಾಗಿ ಡಾ॥ ಸೂರ್ಯನಾಥ ಕಾಮತ್

ಅವರೂ, ಸಂಚಾಲಕರಾಗಿ ಪ್ರೊ॥ ಎಂ. ವಿ. ಸೀತಾರಾಮಯ್ಯ ಮತ್ತು ಶ್ರೀ ಎ. ಕೆ. ಎಲ್. ಎನ್. ಶಾಸ್ತ್ರೀ ಅವರು ಇದ್ದರು. ಧಾರವಾಡ, ಮೈಸೂರು, ಮದರಾಸು, ಹೈದರಾಬಾದು ಮುಂತಾದ ಕಡೆಗಳಿಂದ ಸುಮಾರು 25 ಜನ ವಿದ್ವಾಂಸರು ಗೋಷ್ಠಿಯಲ್ಲಿ ತಮ್ಮ ವಿದ್ವತ್ಪೂರ್ಣ ಪ್ರಬಂಧಗಳನ್ನು ಮಂಡಿಸಿದರು. ಈ ಸಂದರ್ಭದಲ್ಲಿ ಒಂದು ಸ್ಮರಣ ಸಂಚಿಕೆಯನ್ನೂ ಹೊರತರಲಾಯಿತು. ಶ್ರೀಕಂಠಯ್ಯನವರು ನಿಕಟ ಸಂಪರ್ಕ ಹೊಂದಿದ್ದ ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ಆ ಸಂಸ್ಥೆಯ ಸಹಕಾರದೊಂದಿಗೆ ನಡೆಯಿತು. ಧರ್ಮಸ್ಥಳ ಮತ್ತು ಶೃಂಗೇರಿ ಧರ್ಮಪೀಠಗಳೂ, ಅಭಿಮಾನಿಗಳೂ ಉದಾರವಾಗಿ ಧನಸಹಾಯಮಾಡಿದ್ದಾರೆ. ಹಲವಾರು ಜನ ಪ್ರತಿನಿಧಿಗಳಾಗಿದ್ದರು, ಸ್ಮರಣ ಸಂಚಿಕೆಗೆ ಕೆಲವರು ಜಾಹಿರಾತು ನೀಡಿದ್ದಾರೆ. ಇನ್ನು ಕೆಲವರು ಕೊಡಿಸಲು ಸಹಕರಿಸಿದ್ದಾರೆ. ಇವರೆಲ್ಲರ ಸಹಕಾರವನ್ನು ಪ್ರತಿಷ್ಠಾನ ಕೃತಜ್ಞತೆಯಿಂದ ಸ್ಮರಿಸುತ್ತದೆ.

## ಸಹೃದಯಗೋಷ್ಠಿ–ಮಾಸ್ತಿ ಸ್ಮರಣೆ

'ಶ್ರೀ'ಯವರ ಒಂದು ಮುಖ್ಯ ಧ್ಯೇಯಸಾಧನೆ ಹೊಸ ಬರಹಗಾರರಿಗೆ ಪ್ರೋತ್ಸಾಹ ನೀಡಿದ್ದು. ಅವರ ಆದರ್ಶವನ್ನು ಮುಂದುವರಿಸುವ ಸಲುವಾಗಿ ಪ್ರತಿಷ್ಠಾನದ ಒಂದು ಅಂಗವಾದ 'ಸಹೃದಯಗೋಷ್ಠಿ' ಪ್ರತಿ ತಿಂಗಳೂ ಎರಡನೇ ಬುಧವಾರ ತಪ್ಪದೆ ಯುವ ಬರಹಗಾರರ ಸ್ವರಚಿತ ಕವನ, ಕತೆಗಳ ವಾಚನ ಕಾರ್ಯಕ್ರಮವನ್ನು ನಡೆಸುತ್ತ ಬರುತ್ತಿದೆ.

ಪ್ರತಿಷ್ಠಾನದ ಆಜೀವಪೋಷಕರಾಗಿದ್ದ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಗೌರವಾರ್ಥ ಈ ವರ್ಷಪೂರ್ತಿ ಪ್ರತಿತಿಂಗಳೂ ಸಾಧ್ಯವಾದರೆ ಅವರ ನಿಧನದ ದಿನವಾದ 6ರಂದೇ ನಗರದ ಕಾಲೇಜು – ಸಂಘಸಂಸ್ಥೆಗಳ ನೆರವಿನಿಂದ ಮಾಸ್ತಿಯವರ ಸಾಹಿತ್ಯವನ್ನು ಕುರಿತ ಉಪನ್ಯಾಸಗಳನ್ನು ನಡೆಸುವ 'ಮಾಸ್ತಿ ಸ್ಮರಣೆ' ಕಾರ್ಯಕ್ರಮವನ್ನೂ ಹಮ್ಮಿಕೊಂಡಿದೆ. ಈವರೆಗೆ ಇಂಥ ನಾಲ್ಕು ಕಾರ್ಯಕ್ರಮಗಳು ನಡೆದಿವೆ :

(1) 6–8–86ರಂದು ಶೇಷಾದ್ರಿಪುರಂ ಕಾಲೇಜಿನಲ್ಲಿ ಡಾ॥ ಕೆ. ವಿ. ನಾರಾಯಣ. (2) 6–9–86ರಂದು ಪ್ರೊ॥ ಎಲ್. ಎಸ್. ಶೇಷಗಿರಿರಾವ್, (3) 29–10–86ರಂದು ಪಿ. ಡಿ. ಎಸ್. ಕಾಲೇಜಿನಲ್ಲಿ ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಮತ್ತು ಶ್ರೀ ಎಚ್. ಎಸ್. ವೆಂಕಟೇಶಮೂರ್ತಿ ; (4) 6-11-86 ರಂದು ಪ್ರೊ॥ ಎಲ್. ಎಸ್. ಶೇಷಗಿರಿರಾವ್, ವೆಂಕಟೇಶಮೂರ್ತಿ, ಡಾ॥ ರಾಮಚಂದ್ರಶರ್ಮ, ಶ್ರೀಮತಿ ಅನುಪಮ ನಿರಂಜನ—ಅವರು ನಡಸಿಕೊಟ್ಟಿದ್ದರು. ಈ ಎಲ್ಲ ಉಪನ್ಯಾಸಗಳನ್ನೂ ಸೇರಿಸಿ ಒಂದು ಪುಸ್ತಕವನ್ನಾಗಿ ಹೊರತರುವ ಉದ್ದೇಶವೂ ಇದೆ. ಇದಕ್ಕೆ ಅಭಿಮಾನಿಗಳು ಉದಾರವಾಗಿ ಧನಸಹಾಯವನ್ನು, ಜಾಹಿರಾತುಗಳನ್ನು ನೀಡಬೇಕಾಗಿ ಕೋರಿದೆ. ಈ ಕಾರ್ಯಕ್ರಮಗಳ ದಿನಗಳಂದು ಮಾಸ್ತಿಯವರ ಪುಸ್ತಕಗಳ ಮಾರಾಟದ ವ್ಯವಸ್ಥೆ ಮಾಡಲಾಗಿದೆ.

## ದತ್ತಿ ಉಪನ್ಯಾಸಗಳು

ಪ್ರತಿಷ್ಠಾನದಲ್ಲಿರುವ ವಿವಿಧ ದತ್ತಿಉಪನ್ಯಾಸಗಳು ಈ ವರ್ಷ ಈ ಕೆಳಕಂಡಂತೆ ನಡೆದವು.

**ಎಸ್. ಶ್ರೀಕಂಠಯ್ಯ ದತ್ತಿಉಪನ್ಯಾಸವನ್ನು** ಜನ್ಮಶತಮಾನೋತ್ಸವ ಸ್ಮರಣೆಯ ವಿಜಯನಗರ ಸಾಮ್ರಾಜ್ಯ ವಿಚಾರಗೋಷ್ಠಿಯಲ್ಲಿ ವಿಲೀನಗೊಳಿಸಲಾಯಿತು.

15–3–86ರಂದು ಮುಂಬಯಿಯ ಕರ್ನಾಟಕ ಸಂಘದ ನೆರವಿನಿಂದ ಸಂಘದ ಸಭಾಂಗಣದಲ್ಲಿ ಡಾ॥ ಶ್ರೀನಿವಾಸ ಹಾವನೂರ್ ಅವರಿಂದ 'ಮುಂಬಯಿಯ ಆದ್ಯ ಕನ್ನಡ ಪತ್ರಿಕೋದ್ಯಮಿ' ಎಂಬ ವಿಷಯವಾಗಿ ನಾಲ್ಕನೆಯ ಬಿ. ಚಂದ್ರಶೇಖರಶರ್ಮ ದತ್ತಿ ಉಪನ್ಯಾಸ ನಡೆಯಿತು. ಶ್ರೀ ಎಂ. ವಿ. ಸೀತಾರಾಮಯ್ಯ ಅವರು ಅಧ್ಯಕ್ಷರಾಗಿದ್ದರು.

ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ರಾಜರತ್ನಂ ಸನ್ಮಾನ ಸಮಿತಿಯವರು ಇಟ್ಟಿರುವ **ಡಾ॥ ಜಿ. ಪಿ. ರಾಜರತ್ನಂ ಸ್ಮಾರಕ ದತ್ತಿ ಉಪನ್ಯಾಸದ** ಪ್ರಥಮ ಉಪನ್ಯಾಸವನ್ನು ಮಾಸ್ತಿ ಸ್ಮರಣೆಯ ಮಾಲೆಯಲ್ಲಿ 18–12–1986ರಂದು ಶ್ರೀ ಪಿ. ವಿ. ಜೋಶಿಯವರು 'ಮಾಸ್ತಿಯವರ ಕಾವ್ಯ' ಕುರಿತು ಮಾತನಾಡಿದರು.

**ವೈವಸ್ವತ ಮನು ಪುರಸ್ಕಾರ ದತ್ತಿಯ ಮೂರನೇ ಉಪನ್ಯಾಸವನ್ನು** 19–12–86ರಂದು ಪ್ರೊ॥ ಆರ್. ಜಿ. ಕುಲಕರ್ಣಿಯವರು 'ಭಾರತ ಸಿಂಧು ರಶ್ಮಿಯಲ್ಲಿಯ ಮನುಗಳ ಸಾಧನೆ' ಎಂಬ ವಿಷಯವಾಗಿ ನಡಸಿಕೊಟ್ಟರು.

**ಬಿ.ಎಂ.ಶ್ರೀ. ಸ್ಮಾರಕ ದತ್ತಿಯ ಆರನೆಯ ಉಪನ್ಯಾಸವು** 20-12-86ರಂದು ನಡೆಯಿತು. ಪ್ರೊ॥ ಎಸ್. ರಾಮಸ್ವಾಮಿ ಅವರು 'ಭಾರತೀಯ ತತ್ವಶಾಸ್ತ್ರದ ಹಿನ್ನೆಲೆಯಲ್ಲಿ ಹ್ಯಾಮ್ಲೆಟ್' ಎಂಬ ವಿಷಯವಾಗಿ ಮಾತನಾಡಿದರು.

ಈ ಮೂರೂ ಕಾರ್ಯಕ್ರಮಗಳು ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯಲ್ಲಿ ನಡೆದವು.

**ವಿಶೇಷ ಕಾರ್ಯಕ್ರಮ :** 6–6–1986ರಂದು ನಮ್ಮನ್ನಗಲಿದ ಪೂಜ್ಯ ಮಾಸ್ತಿಯವರ ಗೌರವಾರ್ಥ ಪ್ರತಿಷ್ಠಾನ 20-6-86ರಂದು ಗೋಖಲೆ ಸಂಸ್ಥೆಯ ಸಹಯೋಗದಿಂದ ಸಂಸ್ಥೆಯ ಸಭಾಂಗಣದಲ್ಲಿ 'ಶ್ರದ್ಧಾಂಜಲಿ' ಕಾರ್ಯಕ್ರಮವನ್ನು ನಡೆಸಿತು. ಪ್ರೊ॥ ಜಿ. ವೆಂಕಟಸುಬ್ಬಯ್ಯ, ಶ್ರೀ ಜಿ. ನಾರಾಯಣ, ಡಾ॥ ಜಿ. ಎಸ್. ಶಿವರುದ್ರಪ್ಪ, ಪ್ರೊ॥ ಎಲ್. ಎಸ್. ಲಕ್ಷ್ಮೀನಾರಾಯಣಭಟ್ಟ ಅವರುಗಳು ಡಾ॥ ಪು. ತಿ. ನರಸಿಂಹಾಚಾರ್ ಅವರ ಅಧ್ಯಕ್ಷತೆಯಲ್ಲಿ ಪೂಜ್ಯ ಮಾಸ್ತಿಯವರ ಬದುಕನ್ನೂ ವ್ಯಕ್ತಿತ್ವವನ್ನೂ ಮನಸಾರೆಯಾಗಿ ಸ್ಮರಿಸಿ ಶ್ರದ್ಧಾಪೂರ್ವಕ ಗೌರವಾರ್ಪಣೆ ಮಾಡಿದರು.

23–6–1986ರಂದು ಪ್ರತಿಷ್ಠಾನದ ಸಹೃದಯಗೋಷ್ಠಿ ತನ್ನದೇ ಆದ ವಿಶಿಷ್ಟ ಕಾರ್ಯಕ್ರಮವನ್ನು ನಡಸಿತು. ಮಾಸ್ತಿಯವರನ್ನು ಕುರಿತ ಕವನಗಳ

ಮೂಲಕ ಪೂಜ್ಯರಿಗೆ ಗೌರವ ಸಲ್ಲಿಸುವ 'ಕಾವ್ಯಾಂಜಲಿ' ಕಾರ್ಯಕ್ರಮ ಆಕರ್ಷಣೀಯ ವಾಗಿತ್ತು. ಪ್ರೊ॥ ಎಂ. ವಿ. ಸೀತಾರಾಮಯ್ಯ, ಶ್ರೀ ಹಿ. ಮ. ನಾಗಯ್ಯ, ಶ್ರೀ ವೇಣುಗೋಪಾಲ ಸೊರಬ, ಡಾ॥ ರಾಮಚಂದ್ರಶರ್ಮ, ಶ್ರೀ ಅಂತೋನಿ ಜಾರ್ಜ್ ಡಿಸೋಜ, ಶ್ರೀ ನಾ. ಗೀತಾಚಾರ್ಯ ಮುಂತಾದವರು ಭಾಗವಹಿಸಿದ್ದರು. ಈ ಕಾರ್ಯಕ್ರಮಕ್ಕೂ ಡಾ॥ ಪು. ತಿ. ನ. ಅವರೇ ಅಧ್ಯಕ್ಷರಾಗಿದ್ದರು.

## ಗ್ರಂಥದಾನ

ಶ್ರೀ ಪಾದೇಕಲ್ಲು ವಿಷ್ಣುಭಟ್ಟ ಅವರು 'ಆಶೌಚ ಸಿದ್ಧಾಂತ', 'ಸಂಕ್ಷಿಪ್ತ ಗುರುಚರಿತ್ರೆ', 'ಚಿಕಿತ್ಸೆಯ ಹುಚ್ಚು', ಪುಸ್ತಕಗಳ ಎರಡು ಪ್ರತಿಗಳನ್ನೂ, 'ರಂಗವೈಖರಿ' ಎಂಬ ಪುಸ್ತಕದ ಒಂದು ಪ್ರತಿಯನ್ನೂ, ಶ್ರೀ ಅಂತೋನಿ ಜಾನ್ ಡಿಸೋಜ ಅವರು 'ಸ್ವರ್ಗದ ಬೇಟೆ–ನಾಯಿ' ,ಪುಸ್ತಕವನ್ನೂ, ಶ್ರೀ ಮನ್ನಾರು ಕೃಷ್ಣಯ್ಯ ಅವರು 'ಕನ್ನಡ ಸುಲಭ ಸಂಕ್ಷೇಪ ರಾಮಾಯಣ' ಎಂಬ ಗ್ರಂಥವನ್ನೂ ಶ್ರೀ ಎಸ್. ಶಿವಣ್ಣ ಅವರು VEDIC STUDIES (Vol I.) ಪುಸ್ತಕವನ್ನೂ, ಶ್ರವಣಬೆಳಗೊಳ ಜೈನಮಠದವರು 'ಶ್ರವಣಬೆಳಗೊಳ ಜೈನಮಠದ ತಾಡಪತ್ರ ಗ್ರಂಥಗಳ ಸೂಚಿ'ಯನ್ನೂ, ಶ್ರೀ ಎಂ. ಆರ್. ರಾಮಯ್ಯನವರು 'ಮೂಡು-ಮುಳುಗು' ಪುಸ್ತಕವನ್ನೂ, ಶ್ರೀ ವೇಣುಗೋಪಾಲ ಸೊರಬ ಅವರು 'ಜೀವ ಜೀವಂತ', 'ಬಿಂಬ' ಎಂಬ ಎರಡು ಪುಸ್ತಕಗಳನ್ನೂ, ಶ್ರೀ ಕೆ. ಎಸ್. ರಂಗಪ್ಪನವರು 'ಹೀನನಾಯಕ', 'ರಾವಣ ಸಂನ್ಯಾಸಿ' ಎಂಬ ಪುಸ್ತಕಗಳನ್ನೂ, ಡಾ॥ ಎಂ. ಚಿದಾನಂದ ಮೂರ್ತಿ ಅವರು 'ಲಿಂಗಾಯತ ಅಧ್ಯಯನಗಳು' ಎಂಬ ಪುಸ್ತಕವನ್ನೂ ಪ್ರತಿಷ್ಠಾನದ ಗ್ರಂಥಾಲಯಕ್ಕೆ ಉದಾರವಾಗಿ ನೀಡಿದ್ದಾರೆ.

## ಹಸ್ತಪ್ರತಿ ದಾನ

ಶ್ರೀ ಟಿ. ಎಸ್. ಸಂಜೀವರಾವ್ ಅವರು 30 ಕಟ್ಟುಗಳಲ್ಲಿ ಸಂಸ್ಕೃತ, ಕನ್ನಡದ ತಾಡವೋಲೆ ಹಸ್ತಪ್ರತಿಗಳನ್ನೂ, ಶ್ರೀ ಟಿ. ಎಸ್. ವೆಂಕಟಾಚಾರ್ಯ ಅವರು 'ವಾಲ್ಮೀಕಿ ರಾಮಾಯಣ'ದ ಕೈಬರಹದ ಕಾಗದದ ಹಸ್ತಪ್ರತಿಯನ್ನೂ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರಕ್ಕೆ ಉದಾರವಾಗಿ ನೀಡಿದ್ದಾರೆ.

ಈ ಎಲ್ಲ ದಾನಿಗಳಿಗೂ ಪ್ರತಿಷ್ಠಾನ ಕೃತಜ್ಞವಾಗಿದೆ.

## ಪ್ರತಿಷ್ಠಾನದ ಹೊಸ ಸದಸ್ಯರು

### ಸಾಮಾನ್ಯ ಸದಸ್ಯರು

ಸರ್ವಶ್ರೀ ಎಂ. ವಿ. ರಾಘವೇಂದ್ರ, ಚಿತ್ರದುರ್ಗ; ತಿರುಮಲೆ ಶ್ರೀ ರಂಗಾಚಾರ್, ಬೆಂಗಳೂರು; ಡಾ॥ ಸಿ. ಪಿ. ಕೃಷ್ಣಕುಮಾರ್, ಮೈಸೂರು; ಕೆ. ಪಿ. ರಾಜಗೋಪಾಲ್, ಬೆಂಗಳೂರು: ಎಂ. ಎಚ್. ಕೃಷ್ಣಯ್ಯ, ಬೆಂಗಳೂರು;

ಡಾ॥ ಎ. ಕೆ. ಶಾಸ್ತ್ರಿ, ಸಿರಸಿ ; ಎಸ್. ನಾಗೇಶರಾವ್, ಬೆಂಗಳೂರು ; ಪ್ರೊ॥ ಆರ್. ಜಿ. ಕುಲಕರ್ಣಿ, ಬೆಂಗಳೂರು ; ಶ್ರೀಮತಿ ಪರಿಮಳಾಬಾಯಿ, ಎ೯. ಬಿ., ಬೆಂಗಳೂರು.

**ಆಜೀವ ಸದಸ್ಯರು :** ಗೋವಿಂದರೆಡ್ಡಿ, ಚಿತ್ರದುರ್ಗ ; ವೆಂಕಟೇಶ ಸಾಂಗಲಿ, ಬೆಂಗಳೂರು; ಬಿ. ಆರ್. ಶಾಮಸುಂದರ್, ಮುಂಬೈ; ಡಾ॥ ಶ್ರೀನಿವಾಸ ಹಾವನೂರ್, ಮುಂಬೈ ; ಪಿ. ವಿ. ಕೃಷ್ಣಮೂರ್ತಿ, ಬೆಂಗಳೂರು.

## ಸರ್ವಸದಸ್ಯರ ವಿಶೇಷ ಸಭೆಯ ವರದಿ

ದಿನಾಂಕ 30-9-1986ರಂದು ಪ್ರತಿಷ್ಠಾನದ ಕಾರ್ಯಾಲಯದಲ್ಲಿ ಸಂಜೆ 5-30 ಗಂಟೆಗೆ ನಡೆದ ವಿಶೇಷ ಸರ್ವಸದಸ್ಯರ ಸಭೆಯ ನಡವಳಿಕೆಯ ವರದಿ. ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ಸಭೆಯ ಅಧ್ಯಕ್ಷತೆ ವಹಿಸಿದ್ದರು.

**ಸಭೆಗೆ ಬಂದಿದ್ದವರು :** ಸರ್ವಶ್ರೀ ನಿಟ್ಟೂರು ಶ್ರೀನಿವಾಸರಾವ್, ಎಂ. ವಿ. ಸೀತಾರಾಮಯ್ಯ, ಎಲ್. ಎಸ್. ಶೇಷಗಿರಿರಾವ್, ಎ೯. ನಾಗೇಶರಾವ್, ಕೈವಾರ ರಾಜಾರಾವ್, ಕೆ. ಎಂ. ಕೃಷ್ಣರಾವ್, ಜಿ. ವೆಂಕಟಸುಬ್ಬಯ್ಯ, ಎ೯. ಎಸ್. ರಾಮಸ್ವಾಮಿ ಅಯ್ಯರ್, ಎಂ. ವಿ. ಸತ್ಯನಾರಾಯಣ, ನಾ. ಗೀತಾಚಾರ್ಯ, ಎಸ್. ರಾಮಚಂದ್ರ, ಪಿ. ವಿ. ನಾರಾಯಣ, ಗರ್ಗೇಶ್ವರಿ ವೆಂಕಟಸುಬ್ಬಯ್ಯ, ಟಿ. ಕೇಶವ ಭಟ್ಟ, ಎಂ. ಚಿದಾನಂದಮೂರ್ತಿ.

ಅಗತ್ಯಸಂಖ್ಯೆಯ (ಕೋರಂ) ಸದಸ್ಯರು ಹಾಜರಿಲ್ಲದಿದ್ದ ಪ್ರಯುಕ್ತ ನೋಟೀಸಿನಲ್ಲಿ ನಮೂದಿಸಿದ್ದ ಮೇರೆಗೆ ಸಭೆಯನ್ನು 6 ಗಂಟೆಯವರೆಗೆ ಮುಂದಕ್ಕೆ ಹಾಕಲಾಯಿತು. 6 ಗಂಟೆಗೆ ಮತ್ತೆ ಪ್ರಾರಂಭವಾದ ಸಭೆಯಲ್ಲಿ ಮೇಲ್ಕಂಡ ಸದಸ್ಯರೇ ಹಾಜರಿದ್ದರು.

ಪ್ರತಿಷ್ಠಾನಕ್ಕೆ ಸಹಾಯಧನ ನೀಡುವ ದಾನಿಗಳಿಗೆ ಆದಾಯ ತೆರಿಗೆ ವಿನಾಯಿತಿ ನೀಡಲು ಸಾಧ್ಯವಾಗುವಂತೆ ಪ್ರತಿಷ್ಠಾನದ ನಿಯಮಾವಳಿಗೆ ಈ ಕೆಳಕಂಡ ಹೊಸ ನಿಯಮಗಳನ್ನು ಸೇರಿಸುವ ಬಗ್ಗೆ ಸೂಚಿತವಾಗಿದ್ದ ನಿಬಂಧನ ವಾಕ್ಯಗಳನ್ನು ಸಭಾಧ್ಯಕ್ಷರು ಸಭೆಯ ಒಪ್ಪಿಗೆಗೆ ಮಂಡಿಸಿದರು.

## ANNEXURE

Necessary clauses to be added to the Memorandum of Association etc.

### INVESTMENT CLAUSE

1. The funds of the Institution shall be invested in the modes specified under the provisions of s. 13 (1) (d) read with s. 13 (5) of the Income-tax Act 1961.

## AMENDMENT CLAUSE

2. " No Amendments to the Memorandum of Association and Rules and Regulations shall be made which may prove to be repugnant to the provisions of ss. 2 (15), 11 to 13 and 80 G of the Income-tax Act, 1961. However, no amendment shall be carried out without the prior approval of the Commissioner of Income-tax.

## DISSOLUTION CLAUSE

3. "In the event of dissolution or winding up of the Institution, the assets remaining as on the date of dissolution shall under no circumstances be distributed among the members of the Executive Committee but the same shall be transferred to another Charitable Institution and which enjoys recognition under s. 80 G. of the Income-tax Act 1961."

4. The benefits of the Institution shall be upon to all irrespective of caste, creed or religion.

5. The funds and the income of the Institution shall be solely utilised towards the achievement of the objects and no portion of it shall be utilised for payment to trustees/members by way of profit, interest, dividend etc.

6. The books published by the Institutions are printed for promotion of the objectives of the Institution. The profits on the sale of publications will be invested as a separate pnblication fund.

ಮೇಲ್ಕಂಡ ನಿಬಂಧನ ವಾಕ್ಯಗಳನ್ನು ಸಭೆ ಓದಿಸಿ ಕೇಳಿ, ಸರ್ವಾನುಮತದಿಂದ ಅಂಗೀಕರಿಸಿತು.

ನಿಟ್ಟೂರು ಶ್ರೀನಿವಾಸ ರಾವ್
ಸಭಾಧ್ಯಕ್ಷ

ಎಂ. ವಿ. ಸೀತಾರಾಮಯ್ಯ
ಸಂಸ್ಥಾಪಕ ಕಾರ್ಯದರ್ಶಿ

# 6ನೆಯ ಸರ್ವಸದಸ್ಯರ ಸಭೆ

ದಿನಾಂಕ 30-9-86ರಂದು ಪ್ರತಿಷ್ಠಾನದ ಕಾರ್ಯಾಲಯದಲ್ಲಿ ಸಂಜೆ 6ಕ್ಕೆ ನಡೆದ ಸರ್ವಸದಸ್ಯರ ಸಭೆಯ ನಡವಳಿಕೆಯ ವರದಿ :

ಸಭೆಗೆ ಬಂದಿದ್ದವರು : ಸರ್ವಶ್ರೀ ನಿಟ್ಟೂರು ಶ್ರೀನಿವಾಸರಾವ್, ಎಂ. ವಿ. ಸೀತಾರಾಮಯ್ಯ, ಎಲ್. ಎಸ್. ಶೇಷಗಿರಿರಾವ್, ಎಸ್. ನಾಗೇಶರಾವ್, ಕೈವಾರ ರಾಜಾರಾವ್, ಜಿ. ವೆಂಕಟಸುಬ್ಬಯ್ಯ, ಗರ್ಗೇಶ್ವರಿ ವೆಂಕಟಸುಬ್ಬಯ್ಯ, ಎಂ. ಚಿದಾನಂದಮೂರ್ತಿ, ಕೆ. ಎಂ. ಕೃಷ್ಣರಾವ್, ಪಿ. ವಿ. ನಾರಾಯಣ, ಟಿ. ಕೇಶವಭಟ್ಟ, ಎಸ್. ರಾಮಚಂದ್ರ, ವೈ. ಎಸ್. ರಾಮಸ್ವಾಮಿ ಅಯ್ಯರ್, ಎಂ. ವಿ. ಸತ್ಯನಾರಾಯಣ, ನಾ. ಗೀತಾಚಾರ್ಯ, ಎಸ್. ಪ್ರಭಾವತಿ, ಸೂರ್ಯನಾಥ ಕಾಮತ್.

ಸಭೆಯಲ್ಲಿ ಕೋರಂ ಇಲ್ಲದಿದ್ದರಿಂದ ನೋಟೀಸಿನಲ್ಲಿ ನಮೂದಿಸಿದ್ದ ಪ್ರಕಾರ ಸಭೆಯನ್ನು 6-30ಕ್ಕೆ ಮುಂದಕ್ಕೆ ಹಾಕಲಾಯಿತು. ಈ ಸಭೆಯಲ್ಲಿ ಮೇಲ್ಕಂಡ ಸದಸ್ಯರೇ ಹಾಜರಾಗಿದ್ದರು.

ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರ ಸ್ವಾಗತದೊಂದಿಗೆ ಆರಂಭವಾದ ಸಭೆಗೆ ಸಂಸ್ಥಾಪಕ ಕಾರ್ಯದರ್ಶಿಗಳಾದ ಪ್ರೊ|| ಎಂ. ವಿ. ಸೀತಾರಾಮಯ್ಯನವರು ಪ್ರಾಸ್ತಾವಿಕ ಭಾಷಣ ಮಾಡುತ್ತ ತಮ್ಮ ಅನಾರೋಗ್ಯದ ನಿಮಿತ್ತ ತಾವು ಇನ್ನು ಮುಂದೆ ಸಂಸ್ಥಾಪಕ ಕಾರ್ಯದರ್ಶಿಯಾಗಿ ಕೆಲಸದ ಹೊರೆಯನ್ನು ಭರಿಸಲು ಸಾಧ್ಯವಾಗದುದರಿಂದ ಆ ಸ್ಥಾನದಿಂದ ಬಿಟ್ಟುಕೊಡಬೇಕೆಂದು ಸರ್ವಸದಸ್ಯರನ್ನು ಕೇಳಿಕೊಂಡರಲ್ಲದೆ ಸಭೆ ಅಪೇಕ್ಷಿಪಟ್ಟಲ್ಲಿ ಲೋಚನದ ಹೊಣೆಯನ್ನು ಮತ್ತು ಸಂಶೋಧನಾ ಕೆಲಸಗಳ ನಿರ್ವಹಣೆಯನ್ನು ಹೊತ್ತು ಅಧ್ಯಯನ ನಿರ್ದೇಶಕನಾಗಿ ಮುಂದುವರಿಯುತ್ತೇನೆ ಎಂದು ಹೇಳಿದರು. ಅನಂತರ ಸಭೆಯ ಕಾರ್ಯಸೂಚಿಯ ಮೇರೆ ಕಾರ್ಯಾರಂಭವಾಗಿ, ಈ ಕೆಳಗಿನಂತೆ ನಿರ್ಣಯಗಳಾದುವು.

1. ಹಿಂದಿನ ವರ್ಷದ ಆಡಳಿತ ಮತ್ತು ಕಾರ್ಯಕಲಾಪಗಳ ವರದಿಯನ್ನು ಮೊದಲೇ ಸದಸ್ಯರಿಗೆ ಅಂಚೆಯ ಮೂಲಕ ತಲುಪಿಸಲಾಗಿದ್ದು ಆ ವರದಿಯನ್ನು ಸಭೆ ಸರ್ವಾನುಮತದಿಂದ ಅಂಗೀಕರಿಸಿತು. ಶ್ರೀ ನಾಗೇಶರಾವ್ ಅವರು ಒಪ್ಪಿಗೆ ಸೂಚಿಸಿದರು. ಪ್ರೊ|| ಎಲ್. ಎಸ್. ಶೇಷಗಿರಿರಾವ್ ಅವರು ಅನುಮೋದಿಸಿದರು. ಸಭೆ ವರದಿಯನ್ನು ಅಂಗೀಕರಿಸಿತು.

2. ಹಿಂದಿನ ವರ್ಷದ ಆಯ-ವ್ಯಯ ಲೆಕ್ಕದ ವಿವರಗಳನ್ನು ಶ್ರೀ ನಾ. ಗೀತಾಚಾರ್ಯ ಅವರು ಸಭೆಗೆ ಓದಿ ವಿವರಿಸಿದರು. ಸಭೆ ಕೇಳಿ ಪ್ರೊ|| ಜಿ. ವೆಂಕಟಸುಬ್ಬಯ್ಯ ಅವರ ಒಪ್ಪಿಗೆಯ ಸೂಚನೆ ಮತ್ತು ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ ಅವರ ಅನುಮೋದನೆಯೊಂದಿಗೆ ಸರ್ವಾನುಮತದಿಂದ ಅಂಗೀಕರಿಸಿತು.

3. 1986ನೇ ಸಾಲಿಗೆ ಕಳೆದ ವರ್ಷದ ಲೆಕ್ಕ ಪರಿಶೋಧಕರಾದ ಶ್ರೀ ಎಸ್. ಆರ್. ಆರ್. ಕೆ. ಶರ್ಮ ಮತ್ತು ಕಂ. ಅವರನ್ನೇ ಲೆಕ್ಕಪರಿಶೋಧಕರನ್ನಾಗಿ ನೇಮಿಸಿಕೊಳ್ಳಲು ಕಾರ್ಯಸಮಿತಿಗೆ ಸಭೆ ಸರ್ವಾನುಮತದಿಂದ ಅಧಿಕಾರ ನೀಡಿತು. ಹಿಂದಿನ ವರ್ಷದ ಸಂಭಾವನೆಯಾದ ರೂ. 200-00 ವನ್ನೇ ಪ್ರಸಕ್ತ ವರ್ಷಕ್ಕೂ ನಿಗದಿಮಾಡಲಾಯಿತು.

4. ಚುನಾವಣೆ :

ಅ) **ಕಾರ್ಯಸಮಿತಿಯ ಸದಸ್ಯರ ಚುನಾವಣೆ** :—

ಕಾರ್ಯಸಮಿತಿಯ ಸದಸ್ಯರ ಚುನಾವಣೆಗೆ ಸಂಬಂಧಪಟ್ಟ ನಿಯಮ 7 (ಎ) 111–ಸಿ ಪ್ರಕಾರ ಈ ಕೆಳಗಿನ ನಾಲ್ಕು ಮಂದಿ ನಿವೃತ್ತರಾದರು.

ಅವರು ಯಾರೆಂದರೆ :

1. ಶ್ರೀ ನಿಟ್ಟೂರು ಶ್ರೀನಿವಾಸರಾವ್ (ಅಧ್ಯಕ್ಷರು)
2. ಶ್ರೀ ಎಂ. ವಿ. ಸತ್ಯನಾರಾಯಣ (ಗೌರವ ಕಾರ್ಯದರ್ಶಿಗಳು)
3. ಶ್ರೀ ಜಿ. ಎಸ್. ವೆಂಕಟರಾಜು ( „ )
4. ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯನವರು (ಸದಸ್ಯರು)

ನಿಯಮದ ಪ್ರಕಾರ ಈ ನಾಲ್ವರೂ ಚುನಾವಣೆಗೆ ಮತ್ತೆ ಉಮೇದುವಾರರಾಗಿ ನಿಲ್ಲಬಹುದಾಗಿದೆ. ಆದರೆ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು, ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯನವರು ತಾವು ಪುನಃ ಕಾರ್ಯಸಮಿತಿಯ ಸದಸ್ಯರಾಗಿ ಆಯ್ಕೆಗೊಳ್ಳಲು ಇಷ್ಟಪಡದೆ ಹೋದದ್ದರಿಂದ ಆ ಎರಡು ಸ್ಥಾನಗಳು ತೆರವಾಗಿ ನಿಂತವು. ಉಳಿದ ಇನ್ನಿಬ್ಬರ ಅಪೇಕ್ಷೆಯನ್ನು ಗಮನಕ್ಕೆ ತಂದುಕೊಳ್ಳದೆ, ಅವರಿಬ್ಬರೂ ಹಿಂದಿನಂತೆ ಮುಂದಿನ ಚುನಾವಣೆಯವರೆಗೆ ಕಾರ್ಯಸಮಿತಿಯ ಸದಸ್ಯರಾಗಿ ಹಾಗೂ ಗೌರವ ಕಾರ್ಯದರ್ಶಿಗಳ ಅಧಿಕಾರದಲ್ಲಿ ಮುಂದುವರಿಯತಕ್ಕದ್ದೆಂದು ಸಭೆ ನಿರ್ಣಯಿಸಿತು. ನಿರ್ಣಯದ ಸೂಚನೆಯನ್ನು ಡಾ॥ ಎಂ ಚಿದಾನಂದಮೂರ್ತಿ ಅವರು ಸೂಚಿಸಿದರು. ಶ್ರೀ ಕೆ. ಎಂ. ಕೃಷ್ಣರಾವ್ ಅವರು ಆ ನಿರ್ಣಯವನ್ನು ಅನುಮೋದಿಸಿದರು.

ಆ) ಈ ಸಂಬಂಧದಲ್ಲಿ ಅಧ್ಯಕ್ಷರು ಹಾಗೂ ಸಂಸ್ಥಾಪಕ ಕಾರ್ಯದರ್ಶಿಯವರ ಅಧಿಕಾರಸ್ಥಾನಗಳಿಗೆ ಸಂಬಂಧಪಟ್ಟಂತೆ ಶ್ರೀಯುತರಾದ ಡಾ॥ ಎಂ. ಚಿದಾನಂದ ಮೂರ್ತಿಯವರೂ ಶ್ರೀ ಎಸ್. ರಾಮಚಂದ್ರ ಅವರೂ ಸಭೆಯ ಸರ್ವಾನುಮತದಿಂದ

ಕಳಿಸಿದ್ದ 2 ಸೂಚನೆಗಳನ್ನು ಸಭಾಧ್ಯಕ್ಷರು ಓದಿ ಹೇಳಿದರು. ಆ ಸೂಚನೆಗಳು ಹೀಗಿವೆ :

1. ದಿ॥ ಪೂಜ್ಯ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತ, ಅವರ ನಿಧನದಿಂದ ಉಂಟಾಗಿರುವ ಪ್ರತಿಷ್ಠಾನದ ಅಜೀವ ಪೋಷಕರ ಸ್ಥಾನಕ್ಕೆ ಹಿರಿಯ ಕವಿಗಳಾದ ಡಾ॥ ಕೆ. ವಿ. ಪುಟ್ಟಪ್ಪನವರನ್ನು ಪ್ರಾರ್ಥಿಸಿಕೊಳ್ಳಬೇಕೆಂದು ಈ ಸಭೆ ನಿರ್ಣಯಿಸುತ್ತದೆ. (ಈಗಾಗಲೆ ಡಾ॥ ಕೆ. ವಿ. ಪುಟ್ಟಪ್ಪನವರು ಪ್ರತಿಷ್ಠಾನದ ಗೌರವಸದಸ್ಯರಾಗಿದ್ದಾರೆಂಬುದನ್ನು ಇಲ್ಲಿ ನೆನೆಯಬಹುದು.)

2. ಇಲ್ಲಿಯವರೆಗೆ ಪ್ರತಿಷ್ಠಾನದ ಅಧ್ಯಕ್ಷರಾಗಿದ್ದುಕೊಂಡು ತಮ್ಮ ಶ್ರೇಷ್ಠ ಸೇವೆ ಮತ್ತು ಮಾರ್ಗದರ್ಶನಗಳ ಮೂಲಕ ಪ್ರತಿಷ್ಠಾನವನ್ನು ಒಂದು ಭದ್ರ ಬುನಾದಿಯ ಮೇಲೆ ನಿಲ್ಲಿಸಲು ಕಾರಣಕರ್ತರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತ, ಇನ್ನುಮುಂದೆ ಅವರು ಪ್ರತಿಷ್ಠಾನದ ಗೌರವಾಧ್ಯಕ್ಷರಾಗಿದ್ದುಕೊಂಡು ಹಿಂದಿನಂತೆಯೇ ಪ್ರತಿಷ್ಠಾನವನ್ನು ಮುಂದೆ ನಡಸಲು ಒಪ್ಪಿಕೊಳ್ಳಬೇಕೆಂಬುದಾಗಿ ಅವರನ್ನು ಪ್ರಾರ್ಥಿಸಬೇಕೆಂದು ಈ ಸಭೆ ತೀರ್ಮಾನಿಸುತ್ತದೆ.

3. ಇಲ್ಲಿಯವರೆಗೆ ಪ್ರತಿಷ್ಠಾನದ ಅಜೀವ ಸಂಸ್ಥಾಪಕ ಕಾರ್ಯದರ್ಶಿಗಳಾಗಿದ್ದುಕೊಂಡು ಪ್ರತಿಷ್ಠಾನದ ಸರ್ವತೋಮುಖ ಬೆಳವಣಿಗೆಗೆ ಮೂಲಕಾರಣರಾದ ಪ್ರೊ॥ ಎಂ. ವಿ. ಸೀತಾರಾಮಯ್ಯನವರು ಕೆಲವೊಮ್ಮೆ ಕಾರ್ಯದರ್ಶಿಗಳ ಕರ್ತವ್ಯ ಸೀಮೆಯನ್ನೂ ಮೀರಿ ಕೆಲಸ ಮಾಡಬೇಕಾಗಿ ಬಂದಿರುವುದರಿಂದಲೂ ಮತ್ತು ತಮಗಿಂತ ಕಿರಿಯರಾದವರಿಗೆ ಕಾರ್ಯದರ್ಶಿಗಳ ಕರ್ತವ್ಯವನ್ನು ವಹಿಸಿಕೊಟ್ಟು ಹೆಚ್ಚಿನ ವಿಶ್ರಾಂತಿ ಪಡೆಯುವುದು ಅಗತ್ಯವಾಗಿರುವುದರಿಂದಲೂ ಅವರು ಇನ್ನು ಮೇಲೆ ಪ್ರತಿಷ್ಠಾನದ ಅಧ್ಯಕ್ಷರಾಗಿದ್ದುಕೊಂಡು ಪ್ರತಿಷ್ಠಾನವನ್ನು ಮುನ್ನಡೆಯಿಸಬೇಕೆಂದು ಈ ಸಭೆ ತೀರ್ಮಾನಿಸುತ್ತದೆ.

ಶ್ರೀ ನಿಟ್ಟೂರು ಶ್ರೀನಿವಾಸರಾಯರು ನಿವೃತ್ತರಾದ್ದರಿಂದ ಮೇಲೆ ಹೇಳಿರುವ ಸೂಚನೆಗೆ ಅನುಸಾರವಾಗಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಗೌರವಾಧ್ಯಕ್ಷರಾಗಿದ್ದುಕೊಂಡು, ಗೌರವಾನ್ವಿತ ಸಲಹೆಗಾರರಾಗಿರಲು ಒಪ್ಪಬೇಕೆಂದು ಸಭೆ ಅವರನ್ನು ಪ್ರಾರ್ಥಿಸಿಕೊಂಡಿತು.

ಸಂಸ್ಥೆಯ ನಿಬಂಧನೆಗಳಲ್ಲಿ ಗೌರವಾಧ್ಯಕ್ಷ ಪದವಿಯ ಪ್ರಸ್ತಾಪ ಇಲ್ಲವೆಂದು ಶ್ರೀ ನಿಟ್ಟೂರು ಶ್ರೀನಿವಾಸರಾಯರು ಸಂದೇಹವನ್ನು ವ್ಯಕ್ತಪಡಿಸಿದಾಗ, ಗೌರವಾಧ್ಯಕ್ಷರ ಸ್ಥಾನ ಅಧಿಕಾರಸ್ಥಾನವಲ್ಲವೆಂದೂ, ಕೇವಲ ಗೌರವದ ಪದವಿ ಎಂದೂ ಸಭೆಯ ಪರವಾಗಿ ಚಿದಾನಂದಮೂರ್ತಿಯವರು ಸ್ಪಷ್ಟಪಡಿಸಿದರು. ಸಭೆಯ ಪ್ರಾರ್ಥನೆ

ಯನ್ನು ಮಾನ್ಯಮಾಡಿ ಗೌರವಾಧ್ಯಕ್ಷರಾಗಿರಲು ಶ್ರೀ ಶ್ರೀನಿವಾಸರಾವ್ ಅವರು ತಮ್ಮ ಒಪ್ಪಿಗೆಯನ್ನು ನೀಡಿದರು. ಈ ಕೃಪೆಗಾಗಿ ಸಭೆ ಅವರನ್ನು ವಂದಿಸಿತು.

ಇ) ಕಾರ್ಯಸಮಿತಿಯ ಉಳಿದ 2 ಸ್ಥಾನಗಳಿಗೆ ಶ್ರೀ ಕೆ. ರಾಜಾರಾವ್ ಮತ್ತು ಡಾ॥ ಪಿ. ವಿ. ನಾರಾಯಣ—ಇವರುಗಳನ್ನು ಕಾರ್ಯಸಮಿತಿಯ ಸದಸ್ಯರಾಗಿ ಸಭೆ ಆಯ್ಕೆ ಮಾಡಬಹುದೆಂದು ಶ್ರೀ ಟಿ. ಕೇಶವಭಟ್ಟ ಅವರು ಸೂಚಿಸಿದರು. ಶ್ರೀ ಎನ್. ಎಸ್. ರಾಮಸ್ವಾಮಿ ಅಯ್ಯರ್ ಅವರು ಅನುಮೋದಿಸಿದರು. ಸಭೆ ಒಪ್ಪಿತು. ಈ ಇಬ್ಬರಲ್ಲಿ ಶ್ರೀ ಕೆ. ರಾಜಾರಾಯರನ್ನು ಗೌ॥ ಕೋಶಾಧಿಕಾರಿಗಳ ಸ್ಥಾನಕ್ಕೆ ಆಯ್ಕೆ ಮಾಡಲಾಯಿತು. ಶ್ರೀ ಎಂ. ವಿ. ಸೀತಾರಾಮಯ್ಯನವರು ಸೂಚಿಸಿದರು. ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ಅನುಮೋದಿಸಿದರು.

**ಈ) ಅಧ್ಯಕ್ಷರ ಚುನಾವಣೆ :**

ಶ್ರೀ ನಿಟ್ಟೂರು ಶ್ರೀನಿವಾಸರಾಯರು ಈಗ ಚುನಾವಣೆಯಾಗಿರುವ ನಾಲ್ವರು ಮಂದಿ ಮತ್ತು ಸದಸ್ಯರಾಗಿ ಮುಂದುವರಿಯುವ ಉಳಿದ 8 ಜನರಲ್ಲಿ ಯಾರನ್ನು ಬೇಕಾದರೂ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಬಹುದೆಂದು ಸಲಹೆ ನೀಡಿದರು. ಈ ಸನ್ನಿವೇಶದಲ್ಲಿ ಡಾ॥ ಚಿದಾನಂದಮೂರ್ತಿಯವರು ತಾವು ಕಳುಹಿಸಿದ್ದ ಸೂಚನೆಯನ್ನು ಸಭಾಧ್ಯಕ್ಷರ ಗಮನಕ್ಕೆ ತಂದು ಈಗ ಸಂಸ್ಥಾಪಕ ಕಾರ್ಯದರ್ಶಿ ಆಗಿರುವ ಶ್ರೀ ಎಂ. ವಿ. ಸೀತಾರಾಮಯ್ಯನವರು ತಮ್ಮ ಅನಾರೋಗ್ಯ ಕಾರಣದಿಂದ ಹಾಗೂ ಹೆಚ್ಚಿನ ಕೆಲಸದ ಹೊರೆಯಿಂದ ಬಿಡುಗಡೆ ಹೊಂದಲು ತಮ್ಮನ್ನು ಸಂಸ್ಥಾಪಕ ಕಾರ್ಯದರ್ಶಿಯ ಸ್ಥಾನದಿಂದ ಬಿಡುಗಡೆ ಮಾಡಬೇಕೆಂದು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ತಿಳಿಸಿದ್ದಾರೆಂದೂ, ಆದ್ದರಿಂದ ಅವರನ್ನು ಸಂಸ್ಥಾಪಕ ಕಾರ್ಯದರ್ಶಿಯ ಅಧಿಕಾರದಿಂದ ಬಿಟ್ಟುಕೊಟ್ಟು ಅವರನ್ನು ಅಧ್ಯಕ್ಷರನ್ನಾಗಿ ಆಯ್ಕೆಮಾಡಲು ಯಾವ ಅಭ್ಯಂತರವೂ ಇಲ್ಲವೆಂದೂ ಚಿದಾನಂದಮೂರ್ತಿಯವರು ಸೂಚನೆ ಮಾಡಿದರು. ಅವರ ಸೂಚನೆಯನ್ನು ಸಭೆ ಸರ್ವಾನುಮತದಿಂದ ಅಂಗೀಕರಿಸಿತು. ಈ ಘಟ್ಟದಲ್ಲಿ ಸಭಾಧ್ಯಕ್ಷರಾಗಿದ್ದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ಸಂಬಂಧಪಟ್ಟ ನಿಯಮದಲ್ಲಿ ಸ್ವಲ್ಪ ಗೊಂದಲವಿರುವುದರಿಂದ, ಮುಂದಿನ ಕಾರ್ಯಸಮಿತಿಯ ಸಭೆಯಲ್ಲಿ ಶ್ರೀ ಎಂ. ವಿ. ಸೀ. ಅವರನ್ನು ಒಬ್ಬ ಸದಸ್ಯರನ್ನಾಗಿ ನೇಮಕ ಮಾಡಿಕೊಂಡು ಅನಂತರ ಅವರನ್ನು ಅಧ್ಯಕ್ಷರನ್ನಾಗಿ ಸ್ಥಿರೀಕರಿಸಬಹುದೆಂದು ಸಲಹೆ ಮಾಡಿದರು. ಅಲ್ಲಿಯವರೆಗೂ, ಎಂದರೆ ಅವರು ತಮ್ಮ ಸಂಸ್ಥಾಪಕ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ನೀಡಿ ಅವರ ಅಧ್ಯಕ್ಷ ಚುನಾವಣೆಯನ್ನು ಕಾರ್ಯಸಮಿತಿ ಸ್ಥಿರೀಕರಿಸುವವರೆಗೂ, ಅವರು ಸಂಸ್ಥಾಪಕ ಕಾರ್ಯದರ್ಶಿಯಾಗಿ ಮುಂದುವರಿಯುವರು.

5. **ಸದಸ್ಯರ ಸಲಹೆ ಸೂಚನೆಗಳು**

1) ಡಾ॥ ಎಂ. ಚಿದಾನಂದಮೂರ್ತಿ ಮತ್ತು ಶ್ರೀ ಎಸ್. ರಾಮಚಂದ್ರ ಅವರ ನಿರ್ಣಯಗಳಲ್ಲಿ ಮೊದಲನೆಯ ಸೂಚನೆಯಾದ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ನಿಧನದಿಂದ ತೆರವಾಗಿರುವ ಅಜೀವ ಪೋಷಕ ಸ್ಥಾನಕ್ಕೆ ಡಾ॥ ಕೆ. ವಿ. ಪುಟ್ಟಪ್ಪನವರನ್ನು ನೇಮಿಸಿಕೊಳ್ಳಲು ಕೇಳಬಹುದೆಂಬ ಚಿದಾನಂದಮೂರ್ತಿಯವರ ಸೂಚನೆಯನ್ನು ಸಭೆ ಅನುಮೋದಿಸಿತಾದರೂ ಅವರು ಒಪ್ಪಲಾರರೆಂಬ ಅನುಮಾನ ಸಭೆಯಲ್ಲಿ ವ್ಯಕ್ತವಾದುದರಿಂದ ಒಂದುವೇಳೆ ಒಪ್ಪದಿದ್ದಲ್ಲಿ ಆ ಸ್ಥಾನವನ್ನೇ ಕೈಬಿಡಬಹುದೆಂದೂ ತೀರ್ಮಾನವಾಯಿತು. 2ನೇ, ಮತ್ತು 3ನೇ ನಿರ್ಣಯಗಳನ್ನು ಚುನಾವಣೆಯ ಸಂಬಂಧದಲ್ಲೇ ಗಮನಿಸಿ ಒಪ್ಪಲಾಯಿತು.

4ನೇ ನಿರ್ಣಯ :—ಪ್ರತಿಷ್ಠಾನದ ಅಜೀವ ಪೋಷಕರಾಗಿದ್ದ ದಿ॥ ಮಾಸ್ತಿ ವೆಂಕಟೇಶ ಅಯ್ಯಂಗಾರರ ಗೌರವಾರ್ಥವಾಗಿ ಒಂದು ಸ್ಮಾರಕ ಅಂಚೆಚೀಟಿಯನ್ನು ಹೊರತರಲು ಕೇಂದ್ರಸರ್ಕಾರವು ಯೋಜಿಸಿರುವುದನ್ನು ಪ್ರತಿಷ್ಠಾನವು ಸ್ವಾಗತಿಸುತ್ತದೆ. ಎರಡು ವರ್ಷದ ಹಿಂದೆ ದಿ॥ ಬಿ. ಎಂ. ಶ್ರೀಯವರ ಶತಮಾನೋತ್ಸವವು ವೈಭವದಿಂದ ಕರ್ನಾಟಕಾದ್ಯಂತ ನಡೆಯಿತು : ಮುಂದಿನ ವರ್ಷ ಇನ್ನೊಬ್ಬ ಕನ್ನಡದ ಹಿರಿಯ ಸಾಹಿತಿಗಳಾಗಿದ್ದ ಡಿ. ವಿ. ಗುಂಡಪ್ಪನವರ ಶತಮಾನೋತ್ಸವವು ನಡೆಯಲಿದೆ. ಕೇಂದ್ರಸರ್ಕಾರವು ಈ ಇಬ್ಬರು ಸೀಮಾಪುರುಷರ ಸ್ಮಾರಕವಾಗಿ ಅಂಚೆ ಚೀಟಿಗಳನ್ನು ಹೊರತರಬೇಕೆಂದು ಈ ಸಭೆಯು ಆಗ್ರಹಾಪೂರ್ವದವಾಗಿ ಒತ್ತಾಯಿಸುತ್ತದೆ.

4ನೆಯ ನಿರ್ಣಯದ ಬಗ್ಗೆ ಈಗಾಗಲೆ ಆ ಕೆಲಸ ನಡೆಯುತ್ತಿದೆ ಎಂಬ ಅಂಶವನ್ನು ಸಭಾಧ್ಯಕ್ಷರು ಸಭೆಯ ಗಮನಕ್ಕೆ ತಂದರು.

2. **ಪ್ರೊ॥ ವಸಂತಕುಷ್ಟಗಿ ಅವರ ಸಲಹೆಗಳು :**

1. ಪ್ರತಿಷ್ಠಾನದ ಪ್ರತಿನಿಧಿಯಾಗಿ ಕರ್ನಾಟಕದಲ್ಲಿ ಜಿಲ್ಲೆಗೆ ಒಬ್ಬರಂತೆ. ಹಸ್ತಪ್ರತಿಗಳನ್ನು ಸಂಗ್ರಹಿಸಲು ನೇಮಿಸಬೇಕು.
2. ದತ್ತಿ ಉಪನ್ಯಾಸಗಳನ್ನು, ಸರದಿಯ ಮೇಲೆ ಮೊದಲ ಹಂತದಲ್ಲಿ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ಏರ್ಪಡಿಸಬೇಕು.
3. ಲೋಚನ ಸಂಪಾದಕ ಮಂಡಳಿಯಲ್ಲಿ ಮೈಸೂರು, ಬೆಂಗಳೂರು, ಬೆಳಗಾವಿ, ಗುಲಬರ್ಗ ವಿಭಾಗಗಳಿಂದ ಕನಿಷ್ಠ ಒಬ್ಬರಂತೆ ಸದಸ್ಯರನ್ನು ಸೇರಿಸಿಕೊಳ್ಳಬೇಕು.

ಪ್ರೊ॥ ವಸಂತ ಕುಷ್ಟಗಿಯವರ ಮೇಲಿನ ಸೂಚನೆಗಳನ್ನು ಸಭೆ ಗಮನಿಸಿ. ಈ ಸೂಚನೆ ಕಾರ್ಯಸಮಿತಿಯ ವ್ಯಾಪ್ತಿಯಲ್ಲಿ ಬರುವುದರಿಂದ ಸರ್ವಸದಸ್ಯರ ಸಭೆಯಲ್ಲಿ ಚರ್ಚಿಸಬೇಕಾದ ಅಗತ್ಯವಿಲ್ಲವೆಂದೂ ಮುಂದಿನ ಕಾರ್ಯಸಮಿತಿಯ ಸಭೆಯಲ್ಲಿ

ಗಮನಿಸಬಹುದೆಂದೂ ತಿಳಿಸಿದ ಸಭಾಧ್ಯಕ್ಷರ ಸೂಚನೆಯನ್ನು ಸಭೆ ಸರ್ವಾನುಮತದಿಂದ ಒಪ್ಪಿತು.

6. ಇತರ ವಿಚಾರಗಳು ಏನೂ ಇಲ್ಲದುದರಿಂದ ಕಾರ್ಯದರ್ಶಿಗಳಲ್ಲಿ ಒಬ್ಬರಾದ ಶ್ರೀ ಎಂ. ವಿ. ಸತ್ಯನಾರಾಯಣ ಅವರ ವಂದನಾರ್ಪಣೆಯೊಂದಿಗೆ ಸಭೆ ಮುಗಿಯಿತು.

**ಎಂ. ವಿ. ಸೀತಾರಾಮಯ್ಯ**
**ಸಂಸ್ಥಾಪಕ ಕಾರ್ಯದರ್ಶಿ**

**ನಿಟ್ಟೂರು ಶ್ರೀನಿವಾಸ ರಾವ್**
**ಅಧ್ಯಕ್ಷರು**

---

## ಸರ್ವಸದಸ್ಯರ ಎರಡನೇ ವಿಶೇಷ ಸಭೆಯ ನಡವಳಿಕೆಯ ವರದಿ

ದಿನಾಂಕ 30-9-1986ರಂದು ಪ್ರತಿಷ್ಠಾನದ ಕಾರ್ಯಾಲಯದಲ್ಲಿ ಸಂಜೆ 7-00 ಗಂಟೆಗೆ ಎರಡನೇ ವಿಶೇಷ ಸಭೆಯು ನಡೆಯಿತು. ಸಭೆಯ ಅಧ್ಯಕ್ಷತೆಯನ್ನು ಶ್ರೀ ನಿಟ್ಟೂರು ಶ್ರೀನಿವಾಸರಾವ್ ವಹಿಸಿದ್ದರು. ಸಭೆಗೆ ಬಂದಿದ್ದವರು ಸರ್ವಶ್ರೀ: ನಿಟ್ಟೂರು ಶ್ರೀನಿವಾಸರಾವ್, ಎಂ. ವಿ. ಸೀತಾರಾಮಯ್ಯ, ದೇವರ ಕೊಂಡಾರೆಡ್ಡಿ, ಕೆ. ಆರ್. ಗಣೇಶ, ಆರ್. ಶೇಷಶಾಸ್ತ್ರಿ, ಕೆಳದಿ ಗುಂಡಾಜೋಯಿಸ್, ಎಸ್. ರಾಮಚಂದ್ರ, ಪಿ. ವಿ. ನಾರಾಯಣ, ನಾ. ಗೀತಾಚಾರ್ಯ, ಬಿ. ರಾಮಸ್ವಾಮಿ, ಎಂ. ವಿ. ಸತ್ಯನಾರಾಯಣ, ಎಸ್. ನಾಗೇಶರಾವ್, ಕೈವಾರ ರಾಜಾರಾವ್, ವಿ. ಎಸ್. ರಾಮಸ್ವಾಮಿ ಅಯ್ಯರ್.

ಅಗತ್ಯ ಸಂಖ್ಯೆಯ ಕೋರಂ ಸದಸ್ಯರು ಹಾಜರಿಲ್ಲದ ಪ್ರಯುಕ್ತ ಸಭೆಯನ್ನು ನೋಟೀಸಿನಲ್ಲಿ ನಮೂದಿಸಿದ್ದಂತೆ ಅರ್ಧ ಗಂಟೆಗೆ ಮುಂದಕ್ಕೆ ಹಾಕಲಾಯಿತು. ಮುಂದಕ್ಕೆ ಹಾಕಿದ ಸಭೆಯನ್ನು 7-30ಕ್ಕೆ ನಡೆಸಲಾಯಿತು. ಈ ಸಭೆಯಲ್ಲೂ ಮೇಲ್ಕಂಡ ಸದಸ್ಯರೇ ಹಾಜರಿದ್ದರು.

ಪ್ರತಿಷ್ಠಾನಕ್ಕೆ ಸಹಾಯಧನ ನೀಡುವ ದಾನಿಗಳಿಗೆ ಆದಾಯ ತೆರಿಗೆ ವಿನಾಯಿತಿ ನೀಡಲು ಸಾಧ್ಯವಾಗುವಂತೆ ಪ್ರತಿಷ್ಠಾನದ ನಿಯಮಾವಳಿಗಳಿಗೆ ಸರ್ವಸದಸ್ಯರು ಮೊದಲನೇ ವಿಶೇಷ ಸಭೆಯಲ್ಲಿ ಸೂಚಿಸಸಲಾಗಿದ್ದ ಹೊಸ ನಿಯಮಗಳನ್ನು ಸಭೆ ಸರ್ವಾನುಮತದಿಂದ ಅಂಗೀಕರಿಸಿತು.

**ಎಂ. ವಿ. ಸೀತಾರಾಮಯ್ಯ**
**ಸಂಸ್ಥಾಪಕ ಕಾರ್ಯದರ್ಶಿ**

**ನಿಟ್ಟೂರು ಶ್ರೀನಿವಾಸ ರಾವ್**
**ಅಧ್ಯಕ್ಷರು**

## ದಾನಿಗಳು (ಹಿಂದಿನ ಸಂಚಿಕೆಯಿಂದ)

### ಪ್ರೊ॥ ಟಿ. ಎಸ್. ವೆಂಕಣ್ಣಯ್ಯ ಜನ್ಮಶತಮಾನೋತ್ಸವ ನಿಧಿ

| | | ರೂ. | ಪೈ |
|---|---|---|---|
| 1. | ಶ್ರೀ ಎಸ್. ಆರ್. ಆರ್. ಕೆ. ಶರ್ಮ, ಬೆಂಗಳೂರು | 200 | 00 |
| 2. | ಶೇಷಾದ್ರಿಪುರಂ ಶಿಕ್ಷಣದತ್ತಿ, ಬೆಂಗಳೂರು | 100 | 00 |
| 3. | ಮೆ. ಲಿಪಿ ಮುದ್ರಣ, ಬೆಂಗಳೂರು | 50 | 00 |
| 4. | ಶ್ರೀ ಸಿ. ಯಶೋನಾಥ ಶಾಸ್ತ್ರೀ, ಬೆಂಗಳೂರು | 50 | 00 |
| 5. | ಶ್ರೀ ವೆಂಕಟೇಶ ಸಾಂಗಲಿ, ಬೆಂಗಳೂರು | 25 | 00 |
| 6. | ಶ್ರೀ ಎಚ್. ರಾಮಣ್ಣ, ನವದೆಹಲಿ | 101 | 00 |
| 7. | ಶ್ರೀ ಬಿ. ರಾಮಸ್ವಾಮಿ, ಹೈದರಾಬಾದು | 25 | 00 |
| 8. | ಶ್ರೀ ಟಿ. ಎಸ್. ನಾಗಭೂಷಣ, ಬೆಂಗಳೂರು | 500 | 00 |
| 9. | ಶ್ರೀ ಟಿ. ಎಸ್. ರಂಗರಾವ್, ಬೆಂಗಳೂರು | 10 | 00 |
| | ಒಟ್ಟು ಸಂಗ್ರಹ | 5,121 | 00 |

### ಪ್ರೊ॥ ಟಿ. ಎಸ್. ವೆಂಕಣ್ಣಯ್ಯ ದತ್ತಿ ನಿಧಿ

| | | | |
|---|---|---|---|
| 1. | ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಗಳು, ಬೆಳಗೆರೆ | 2,000 | 00 |
| 2. | ಶ್ರೀ ಎನ್. ಆರ್. ಕಾಳಿಂಗಕೃಷ್ಣ, ಚಳ್ಳಕೆರೆ | 501 | 00 |
| 3. | ಶ್ರೀ ಎನ್. ಡಿ, ಎನ್. ರಾವ್, ಪುಣೆ | 1,001 | 00 |
| 4. | ಶ್ರೀ ಕೆ. ಪಿ. ಕುಮಾರ್, ಚಳ್ಳಕೆರೆ | 100 | 00 |
| 5. | ಶ್ರೀ ಕೆ. ಎಲ್. ಭಾರ್ಗವ ರಾಂ, ಚಳ್ಳಕೆರೆ | 100 | 00 |
| 6. | ಶ್ರೀ ಎಂ. ಕರಿಯಪ್ಪ, ಚಳ್ಳಕೆರೆ | 101 | 00 |
| 7. | ಶ್ರೀ ಬಿ. ಪಿ. ವೀರೇಂದ್ರಕುಮಾರ್, ಚಳ್ಳಕೆರೆ | 100 | 00 |
| 8. | ಶ್ರೀ ಪ್ರಣವಕುಮಾರ್, ಚಳ್ಳಕೆರೆ | 100 | 00 |
| 9. | ಶ್ರೀ ಎಸ್. ಜೇಕಬ್, ಚಳ್ಳಕೆರೆ | 100 | 00 |
| 10. | ಶ್ರೀ ಪಿ. ಬಿ. ಶಿವಣ್ಣ, ಚಳ್ಳಕೆರೆ | 100 | 00 |
| 11. | ಶ್ರೀ ಟಿ. ವಿ. ಪರಮೇಶ್ವರ ಭಟ್ಟ, ಚಳ್ಳಕೆರೆ | 100 | 00 |
| 12. | ಶ್ರೀ ಯು. ಎಸ್. ವಿಷ್ಣುಮೂರ್ತಿರಾವ್, ಚಳ್ಳಕೆರೆ | 100 | 00 |
| 13. | ಶ್ರೀ ಎ. ಅನಂತಯ್ಯ ಐತಾಳ, ಚಳ್ಳಕೆರೆ | 100 | 00 |
| 14. | ಶ್ರೀ ವಿಜಯ ವಸಂತ, ಚಳ್ಳಕೆರೆ | 100 | 00 |
| 15. | ಶ್ರೀ ಎ. ರಾಮಚಂದ್ರ ಉಡುಪ, ಚಳ್ಳಕೆರೆ | 100 | 00 |
| 16. | ಶ್ರೀ ಟಿ. ವಿ. ರಮೇಶ್, ಚಳ್ಳಕೆರೆ | 100 | 00 |

| | | ರೂ. | ಪೈ |
|---|---|---|---|
| 17. | ಶ್ರೀ ಅಶೋಕ್‌ಕುಮಾರ್. ಕೆ. ಜೆ., ಚಳ್ಳಕೆರೆ | 101 | 00 |
| 18. | ಶ್ರೀ ಸದಾಶಿವ ಹೆಬ್ಬಾರ್, ಚಳ್ಳಕೆರೆ | 100 | 00 |
| 19. | ಶ್ರೀ ನಾರಾಯಣರೆಡ್ಡಿ, ಚಳ್ಳಕೆರೆ | 100 | 00 |
| 20. | ಶ್ರೀ ಎಂ. ವಾಸುದೇವರಾವ್, ಚಳ್ಳಕೆರೆ | 100 | 00 |
| 21. | ಶ್ರೀ ಕೆ. ಬಿ. ಬಷೀರ್ ಅಹಮದ್, ಚಳ್ಳಕೆರೆ | 100 | 00 |
| 22. | ಶ್ರೀ ಜಿ. ಶರಣಪ್ಪ, ಚಳ್ಳಕೆರೆ | 100 | 00 |
| 23. | ಶ್ರೀ ತಿಪ್ಪಣ್ಣ ಮರಿಕುಂಟೆ, ಚಳ್ಳಕೆರೆ | 100 | 00 |
| 24. | ಶ್ರೀ ರಾಮಚಂದ್ರ ನಾಯಕ್, ಚಿತ್ರದುರ್ಗ | 100 | 00 |
| 25. | ಶ್ರೀ ಸಿ. ಶಿವಲಿಂಗಪ್ಪ, ಚಳ್ಳಕೆರೆ | 100 | 00 |
| 26. | ಶ್ರೀ ಡಿ. ಸುಬ್ರಹ್ಮಣ್ಯಂ, ಚಳ್ಳಕೆರೆ | 51 | 00 |
| 27. | ಶ್ರೀ ಟಿ. ಹೆಚ್. ಈರಣ್ಣ, ಚಳ್ಳಕೆರೆ | 50 | 00 |
| 28. | ಶ್ರೀ ಎಚ್. ಎಸ್. ಜಯಪ್ಪ, ಚಳ್ಳಕೆರೆ | 100 | 00 |
| 29. | ಶ್ರೀ ಅನಂತರಾಮರಾವ್, ಚಳ್ಳಕೆರೆ | 100 | 00 |
| 30. | ಶ್ರೀ ವೆಂಕಟೇಶಪ್ಪ, ಚಳ್ಳಕೆರೆ | 100 | 00 |
| 31. | ಶ್ರೀ ಯು. ಎಂ. ರಾಮಮೂರ್ತಿಭಟ್, ಚಳ್ಳಕೆರೆ | 100 | 00 |
| 32. | ಶ್ರೀ ಪರಮೇಶ್, ಚಳ್ಳಕೆರೆ | 100 | 00 |
| 33. | ಶ್ರೀ ಸಿ. ನರಸಿಂಹಮೂರ್ತಿ, ಚಳ್ಳಕೆರೆ | 100 | 00 |
| 34. | ಡಾ|| ಕೆ. ಕೆ. ರಾವ್, ಚಳ್ಳಕೆರೆ | 100 | 00 |
| 35. | ಶ್ರೀ ರಾಜಶೇಖರ ಶೆಟ್ಟಿ, ಚಳ್ಳಕೆರೆ | 100 | 00 |
| 36. | ಶ್ರೀ ಆರ್ ಪ್ರಹಲ್ಲಾದ, ಬೆಳಗೆರೆ | 100 | 00 |
| 37. | ಶ್ರೀ ಎಸ್ ರಾಜಶೇಕರಪ್ಪ, ಚಳ್ಳಕೆರೆ | 200 | 00 |
| 38. | ಶ್ರೀ ಪಿ. ಡೇಮಯ್ಯ, ಹಿರಿಯೂರು | 100 | 00 |
| 39. | ಶ್ರೀ ನಾಗೇಂದ್ರಪ್ಪ, ಚಳ್ಳಕೆರೆ | 100 | 00 |
| 40. | ಕು|| ಛಾಯಾ ಬಬ್ಬರ್‌ಜಂಗ್ ತ್ರಿಶೂಲಿ, ಚಳ್ಳಕೆರೆ | 100 | 00 |
| 41. | ಶ್ರೀ ಕೆ. ಶ್ರೀನಿವಾಸ್, ಚಳ್ಳಕೆರೆ | 50 | 00 |
| 42. | ಶ್ರೀ ರಾಜಶೇಕರಪ್ಪ ಚಳ್ಳಕರೆ | 100 | 00 |
| 43. | ಶ್ರೀ ಎಚ್. ಎಸ್ ಮೂರ್ತಿ, ಮೈಸೂರು | 500 | 00 |
| 44. | ಡಾ|| [ಶ್ರೀಮತಿ] ರತ್ನ ಶ್ರೀನಿವಾಸ್. ಯು.ಎಸ್.ಎ. | 1.000 | 00 |
| 45. | ಶ್ರೀಮತಿ ಎಚ್. ಎಸ್. ಪ್ರಭಾ, ಬರೋಡ | 500 | 00 |
| 46. | ಶ್ರೀ ನರಸಿಂಹಮೂರ್ತಿ, ಬರೋಡ | 2.000 | 00 |
| | ಒಟ್ಟು ಸಂಗ್ರಹ | 12.856 | 00 |

## ಪ್ರತಿಷ್ಠಾನ ನಿಧಿ

| | | ರೂ. | ಪೈ |
|---|---|---|---|
| 1. | ಶ್ರೀ ಎಂ. ಎಸ್. ಶಂಕರರಾವ್, ಬೆಂಗಳೂರು. | 101 | 00 |
| 2. | ಶ್ರೀ ಟಿ. ಎಸ್. ರಂಗರಾವ್ ಬೆಂಗಳೂರು. | 25 | 00 |
| 3. | ಪ್ರೊ॥ ಎಂ. ವಿ. ಸೀತಾರಾಮಯ್ಯ, ಬೆಂಗಳೂರು. | 50 | 00 |
| 4. | ಪ್ರೊ॥ ಎಲ್. ಎಸ್. ಶೇಷಗಿರಿರಾವ್, ಬೆಂಗಳೂರು. | 50 | 00 |
| | ಒಟ್ಟು ಸಂಗ್ರಹ | 226 | 00 |

## ಕಟ್ಟಡ ನಿಧಿ

(ಹಿಂದಿನ ಸಂಚಿಕೆಯಿಂದ)

| | | | | |
|---|---|---|---|---|
| 1. | ಶ್ರೀ ಟಿ. ಎಸ್. ನಾಗಭೂಷಣ, ಬೆಂಗಳೂರು. | ರೂ. | 500 | 00 |
| 2. | ಶ್ರೀ ಎಚ್. ಎಸ್. ರಾಮಸ್ವಾಮಿ ಅಯ್ಯರ್, ಬೆಂಗಳೂರು. | ರೂ. | 75 | 00 |
| | ಒಟ್ಟು ಸಂಗ್ರಹ | | 32,023 | 00 |

## ವಿಜಯನಗರ ಸಾಮ್ರಾಜ್ಯ ವಿಚಾರಗೋಷ್ಠಿ ನಿಧಿ

| | | ರೂ. | ಪೈ |
|---|---|---|---|
| 1. | ಮಿಥಿಕ್ ಸೊಸೈಟಿ, ಬೆಂಗಳೂರು. | 1,000 | 00 |
| 2. | ಜಗದ್ಗುರು ಶ್ರೀ ಶಂಕರಾಚಾರ್ಯ ಮಹಾಸಂಸ್ಥಾನಂ, ಶೃಂಗೇರಿ. | 2,001 | 00 |
| 3. | ಶ್ರೀ ವೀರೇಂದ್ರ ಹೆಗ್ಗಡೆ, ಧರ್ಮಸ್ಥಳ. | 500 | 00 |
| 4. | ಡಾ॥ ಕೆ. ವಿ. ವಿಶ್ವನಾಥಯ್ಯ, ಬೆಂಗಳೂರು. | 500 | 00 |
| 5. | ಶ್ರೀ ಎಂ. ವಿ. ಸೀತಾರಾಮಯ್ಯ, ಬೆಂಗಳೂರು. | 10 | 00 |
| 6. | ಶ್ರೀ ಎಚ್. ಎನ್. ನಂಜೇಗೌಡ, ಎಂ.ಪಿ., ಬೆಂಗಳೂರು. | 1,000 | 00 |
| 7. | ಶ್ರೀಮತಿ ಎಸ್. ವಿ. ತುಂಗಮ್ಮ, ಬೆಂಗಳೂರು. | 50 | 00 |
| 8. | ಶ್ರೀ ರಾಮ ಅಯ್ಯರ್, ಬೆಂಗಳೂರು. | 200 | 00 |
| | ಒಟ್ಟು ಸಂಗ್ರಹ | 5,261 | 00 |

# ಪ್ರತಿಷ್ಠಾನದ ಪ್ರಕಟನೆಗಳು

| | | ರೂ. | ಪೈ |
|---|---|---|---|
| 1. | ಮಣಿಹ (ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ) | 50 | 00 |
| 2. | ಬೇಂದ್ರೆ ಸ್ಮೃತಿ (ಸಾಹಿತ್ಯ ಭಂಡಾರದಲ್ಲೂ ದೊರೆಯುತ್ತದೆ) | 5 | 00 |
| 3. | ಸರ್ವಜ್ಞ ವಚನಗಳು | 15 | 00 |
| 4. | ಸೂತ ಭಾರತ | 15 | 00 |
| 5. | ಶ್ರೀ ಕೃಷ್ಣದೇವರಾಯ ದಿನಚರಿ | 10 | 00 |
| 6. | ಹಸ್ತಪ್ರತಿ ಶಾಸ್ತ್ರ | 15 | 00 |
| 7. | ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯ | 4 | 00 |

## ದತ್ತಿ ಉಪನ್ಯಾಸ ಮಾಲೆ

| | | | |
|---|---|---|---|
| 8. | ಮೂರು ದತ್ತಿ ಉಪನ್ಯಾಸಗಳು | 10 | 00 |
| 9. | ವೈವಸ್ವತ ಮನು | 5 | 00 |
| 10. | ಮೂರು ದತ್ತಿ ಉಪನ್ಯಾಸಗಳು—೧೯೮೪ | 10 | 00 |

## ತಿಮ್ಮಪ್ಪದಾಸ ಪ್ರಕಾಶನ ಮಾಲೆ

| | | | |
|---|---|---|---|
| 11. | ಕೀರ್ತನ ಕುಸುಮಾಂಜಲಿ | 10 | 00 |
| 12. | ಧ್ರುವ ಚರಿತ್ರೆ | 15 | 00 |

## ಶ್ರೀ ಜನ್ಮಶತಾಬ್ದಿ ಕೃತಿಮಾಲೆ

| | | | |
|---|---|---|---|
| 13. | ಶ್ರೀವಾಣಿ (ಸೂಕ್ತಿ ಸಂಗ್ರಹ) | 1 | 00 |
| 14. | ಆಚಾರ್ಯ ಬಿ.ಎಂ.ಶ್ರೀ. (ಜೀವನ ಚಿತ್ರ) | 2 | 00 |
| 15. | ಕನ್ನಡ ಕಣ್ವ ಬಿ.ಎಂ.ಶ್ರೀ. (ಮಕ್ಕಳಿಗೆ) | 1 | 50 |
| 16. | ಶ್ರೀಯವರ ಆಯ್ದ ಕವನಗಳು | 2 | 00 |
| 17. | ಶ್ರೀನಿಧಿ (ಸಂಸ್ಮರಣ ಸಂಪುಟ) | 60 | 00 |
| 18. | B.M.S. The Man and His Mission | 25 | 00 |
| 19. | ಶ್ರೀಗಂಧ (ಸಂಸ್ಮರಣ ಸಂಚಿಕೆ) | 10 | 00 |
| 20. | ಇಂಗ್ಲಿಷ್ ಗೀತಗಳು (ಅಂಗ್ಲ ಮೂಲಕವನಗಳೊಂದಿಗೆ) | 20 | 00 |
| 21. | ಲೋಚನ ('ಶ್ರೀ' ವಿಶೇಷಾಂಕ) | 10 | 00 |

ಶ್ರೀ ಲಕ್ಷ್ಮೀ ಪ್ರಿಂಟರ್ಸ್, ಕತ್ತರಗುಪ್ಪೆ, ಬನಶಂಕರಿ 3ನೇ ಘಟ್ಟ, ಬೆಂಗಳೂರು-560 085